

**ಚೈತನ್ಯ ಮೂರ್ತಿ ಪರಮಪೂಜ್ಯ**
**ಶ್ರೀ ಚಿದಂಬರ ಮೂರ್ತಿ ಚಕ್ರವರ್ತಿಗಳು**
**ಶ್ರೀ ಕ್ಷೇತ್ರ ಆನಂದವನ-ಅಗಡಿ**

ಶ್ರೀ ಕ್ಷೇತ್ರ ಆನಂದವನಕ್ಕೆ ಅತಿ ಸಮೀಪದಲ್ಲಿಯೇ ಮಲ್ಲಾರಿಯ ಕ್ಷೇತ್ರಗಳಾದ ದೇವರಗುಡ್ಡ, ಮತ್ತೂ ಮೈಲಾರಕ್ಷೇತ್ರಗಳಿವೆ. ಮಾಲತೀಶನ ಸೇವೆ ಸಹಸ್ರಾರು ವರ್ಷಗಳಿಂದ ಅವ್ಯಾಹತವಾಗಿ ಅಲ್ಲಿ ನಡೆಯುತ್ತ ಬಂದಿದೆ. ಈ ಶಿವಸ್ವರೂಪಿ ಭಗವಂತ, ಅನೇಕಾನೇಕ ಭಕ್ತರಿಗೆ ಕುಲದೇವರಾಗಿದ್ದಾನೆ. ವರ್ಷದ ಪ್ರತಿ ದಿನವೂ ಭಕ್ತರು ಅಲ್ಲಿಗೆ ತಂಡೋಪತಂಡವಾಗಿ ಬರುತ್ತಾರೆ. ಭಾರತ ಹುಣ್ಣಿಮೆಯಂದು ಮೈಲಾರದಲ್ಲಿ ಜಾತ್ರೆ ನಡೆಯುತ್ತದೆ. ಈ ಜಾತ್ರೆ ಹಾಗೂ ಕಾರ್ಣಿಕೋತ್ಸವ ಸಮಯದಲ್ಲಿ, ಲಕ್ಷೋಪಲಕ್ಷ ಜನ ಭಕ್ತರು ಸೇರಿ, ಗಗನ ಗಡಚಿಕ್ಕುವಂತೆ ಆತನಿಗೆ ಜಯಘೋಷ ಮಾಡುತ್ತಾರೆ. ಆ ಸಮಯದಲ್ಲಿ ಮಲ್ಹಾರಿಯ ಮಹಿಮೆಯನ್ನು ಕಣ್ಣಾರೆ ಕಾಣಬಹುದು.

ಅದೇ ರೀತಿಯಾಗಿ, ದೇವರಗುಡ್ಡದಲ್ಲಿಯೂ ನವರಾತ್ರಿ, ವಿಜಯ ದಶಮಿಗಳಂದು, ಆತನ ಸೇವೆಯಲ್ಲಿ ಭಾಗವಹಿಸಿದ ಭಕ್ತರ ಭಕ್ತಿ ಪರಾಕಾಷ್ಠೆಗಳು ನೋಡಲು ದೊರೆಯುತ್ತವೆ.

''ಮಣಿ ಮಲ್ಲಾಸುರರೆಂಬ ದೈತ್ಯ ಬಂಧುಗಳ ವಿನಾಶಕ್ಕಾಗಿ, ಭಗವಂತ ಮಾರ್ತಾಂಡ ಭೈರವನ ರೂಪದಲ್ಲಿ ಅವತರಿಸಿದನೆಂದು'' ಪುರಾಣಗಳಲ್ಲಿ ಕಂಡುಬರುತ್ತದೆ. ದುಷ್ಟನಾಶನ, ಶಿಷ್ಟ ಪರಿಪಾಲನೆಯಾಗಿ, ಧರ್ಮ ರಕ್ಷಣೆಯಾಗಬೇಕು ! ..... ಅದಕ್ಕಾಗಿ ಜಗನ್ನಿಯಾಮಕ ಪ್ರಭು, ಯಾವ ರೂಪದಲ್ಲಿಯಾದರೂ ಅವತಾರವೆತ್ತಿ ಬರುತ್ತಾನೆ. ಆತ ತನ್ನ ಶಕ್ತಿಯನ್ನು ಕ್ಷೇತ್ರಗಳಲ್ಲಿ ಕೇಂದ್ರೀಕರಿಸಿ, ಭಕ್ತರುದ್ಧಾರಕ್ಕೆ ಅವಕಾಶ ಕಲ್ಪಿಸಿಕೊಡುತ್ತಾನೆ.

ಇಂದು ಭಾರತದ ತುಂಬೆಲ್ಲ ಮಲ್ಲಾರಿಯ ಕ್ಷೇತ್ರಗಳಿವೆ. ಅದರಲ್ಲಿಯೂ ಅತ್ಯಂತ ಮಹತ್ವದ ಕ್ಷೇತ್ರಗಳು, ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿವೆ.

ಬೀದರ ಜಿಲ್ಹೆಯಲ್ಲಿರುವ ''ಪ್ರೇಮಪುರ'' ಎಂಬುದೇ ಮಾಲತೀಶನ ಮೂಲ ಮಹಾಕ್ಷೇತ್ರವೆಂದು ''ಅನೇಕ ಪಂಡಿತರು, ಶ್ರೀ ಮಾಲತೀಶ ಮಹಾತ್ಮೆ'' ಎಂಬ ಸಂಸ್ಕೃತ ಗ್ರಂಥಾಧಾರದ ಮೇಲಿಂದ ಅಭಿಪ್ರಾಯ ಪಡುತ್ತಿದ್ದಾರೆ.

ಈ ವರೆಗೆ ಮಾಲತೀಶನ ವರ್ಣನೆ ಬರುವ ಅನೇಕ ಗ್ರಂಥಗಳು ಪ್ರಕಟವಾಗಿವೆ. ಆದರೆ ಪದ್ಯ ರೂಪದಲ್ಲಿ ಬಂದ ಗ್ರಂಥಗಳು ಕಡಿಮೆ. ಯಾಕೆಂದರೆ ಇಂಥ ಸಾಹಿತ್ಯ ರಚನೆಗೆ ಕವಿಹೃದಯವೇ ಬೇಕು !.. ''ರವಿ ಕಾಣದ್ದನ್ನು ಕವಿ ಕಂಡ '' ಎಂಬ ಉಕ್ತಿಯಂತೆ ಇಲ್ಲಿ ಜೋಶಿಯವರು ಅನುಪಮವಾದದ್ದನ್ನೇ ತೋರಿಸಿದ್ದಾರೆ.

ನಮ್ಮ ಹಿರಿಯರು 'ನಾ ಋಷಿಃ ಕುರುತೇ ಕಾವ್ಯಂ' ಎಂದು ಕಾವ್ಯದ ಪರಿಭಾಷೆ ನೀಡಿದ್ದಾರೆ. ಅಂದರೆ ಪಂಡಿತರಲ್ಲದವರೂ ಸಹಿತ ಪ್ರತಿಭೆ ಇದ್ದರೆ ಕಾವ್ಯ ರಚಿಸಬಲ್ಲರು. ಕವಿತಾ ಶಕ್ತಿ ಪೂರ್ವಜನ್ಮದ ಪುಣ್ಯದಿಂದ ಲಭ್ಯವಾಗುವಂಥದ್ದು. ಕಾವ್ಯ ಅಥವಾ ಸಾಹಿತ್ಯ ಸೃಷ್ಟಿ ಕೇವಲ ಅಕ್ಷರ ಜೋಡಣೆಯ ಪಾಂಡಿತ್ಯವಲ್ಲ; ಅದೊಂದು ತಪಶ್ಚರ್ಯೆ. ಜೀವನದುದ್ದಕ್ಕೂ ಮನುಷ್ಯ ಆ ಸಾಧನೆಯನ್ನು ಮಾಡಿ ಭಗವದ್ ಭಕ್ತಿಯನ್ನು ಹೃದಯದಲ್ಲಿ ಅಳವಡಿಸಿಕೊಳ್ಳಬೇಕು. ಅಂದಾಗ ಮಾತ್ರ ನಿಜವಾದ ಕಾವ್ಯ ಹುಟ್ಟಬಲ್ಲದು. ಜನ್ಮಜನ್ಮಾಂತರದ ಪುಣ್ಯ ವಿಶೇಷದಿಂದ ಸಾಹಿತ್ಯ ನಿರ್ಮಾಣವಾಗಿ, ಜ್ಞಾನಸುಧೆ ಗಂಗಾ ಪ್ರವಾಹದಂತೆ ಈ ಭೂಮಿಯ ಮೇಲೆ ಹರಿಯಬಲ್ಲದು.

''ಶ್ರೀ ಮಾಲಸಾ ಮಾರ್ತಾಂಡ ಭೈರವ ಪುರಾಣಂ '' ಎಂಬ ಕಾವ್ಯವು ಸುಂದರ ಸುಲಭ ಶೈಲಿಯಲ್ಲಿ ಭಾಮಿನಿ ಷಟ್ಪದಿಯಲ್ಲಿ ರಚನೆಯಾಗಿದೆ. ಈ ಕೃತಿ ರಚಿಸಿದ ಕವಿ, ಶ್ರೀ ನಿಂಗಭಟ್ ಜೋಶಿ, ತನ್ನ ಆರಾಧ್ಯ ದೈವ ಮಲ್ಹಾರಿಯಲ್ಲಿ ಅತ್ಯಂತ ಭಕ್ತಿಯನ್ನಿಟ್ಟು, ಈ ಕಾವ್ಯ ರಚಿಸಿದ್ದಾರೆ. ಅವರನ್ನು ಕಂಡಾಗ, ಅಥವಾ ಅವರ ಕೃತಿ ಓದಿದಾಗ, ಅವರ ಭಕ್ತಿ ಹೃದಯದ ಪರಿಚಯವಾಗಲು ಸಾಧ್ಯ.

ಜೋಶಿಯವರು ತಮ್ಮ ಮೃದು ಸ್ವಭಾವಕ್ಕೆ ಸಾಕ್ಷಿ ಎಂಬಂತೆ ಕಾವ್ಯದ ಆರಂಭದಲ್ಲಿಯೇ.. '' ಕರಿಯ ಕವಿನಾಂ ಕರವ ಮುಗಿಯುವೆ। ಗುರುವವಿಲ್ಲದೇ ಬುಧರ ಬಳಕೆಗೆ। ಜರಿಯದೀ ಕೃತಿ ಪರಿಗ್ರಹಿಸಿ ನೃಪಹಂಸನ್ಯಾಯದಲ್ಲಿ॥ '' ಎಂದು ಭಿನ್ನವಿಸಿಕೊಂಡಿದ್ದಾರೆ. ಇದು ಅಕ್ಷರಶಃ ಸತ್ಯವಾದದ್ದು. ಬರೆಯುವವ ಎಂದೆಂದಿಗೂ ಕಿರಿಯ; ಬರೆಯಿಸುವ ಭಗವಂತ ಸದಾ ಹಿರಿಯ; ಓದಿ ರಸಸ್ವಾದನೆಯನ್ನು ಮಾಡಿ, ಭಗವಂತನನ್ನು ಕಾಣುವ ಭಕ್ತ, ಹಿರಿಯರಲ್ಲಿ ಅತ್ಯಂತ ಹಿರಿಯ. ಅವನೇ ಜ್ಞಾನಿಯೆಂದು ಭಾವಿಸಿ ಜೋಶಿಯವರು ಆತನಿಗೆ ಕೈಮುಗಿಯುತ್ತಿದ್ದಾರೆ.

ಈ ಕೃತಿಯಲ್ಲಿ ಮಲ್ಹಾರಿಯ ವಿಜಯ ಅತ್ಯಂತ ಸುಂದರವಾಗಿ ಬಂದಿದೆ. ಭಕ್ತರು ಸುಲಭವಾಗಿ ಆತನ ಚರಿತ್ರೆ ಪಾರಾಯಣ ಮಾಡಿ ಪುನೀತರಾಗಲೆಂಬ ಏಕೈಕ ಭಾವನೆಯಿಂದ ಮಣಿಘ್ನ ಮಲಸಾಕಾಂತನ ಸೇವೆ ಮಾಡಿದ್ದಾರೆ. ಇಲ್ಲಿ ಬರುವಂಥ ಒಂದೊಂದು ಷಟ್ಪದಿಯೂ, ರಸಭಾವನೆಯ ಕಾರಂಜಿಯಂತೆ ಪುಟಿಯುತ್ತದೆ. ನಡುನಡುವೆ. ಕಠಿಣ ಪದಗಳು ಬಂದಾಗ, ಅವುಗಳಿಗೆ ಸುಲಭಾರ್ಥ ಕೊಡುವುದರ ಜೊತೆಗೆ ಸಂಪೂರ್ಣ ಪದ್ಯಗಳ ವ್ಯಾಖ್ಯಾನಕೂಡ ಮಾಡಿದ್ದಾರೆ.

ತಮಗೆ ಆರ್ಥಿಕ ಅನಾನುಕೂಲತೆ ಇದ್ದರೂ ಸಹಿತ, ಮಲ್ಹಾರಿ ಭಕ್ತರು ಈ ಕಾವ್ಯವನ್ನೋದಿ ಆನಂದಭರಿತರಾಗಲಿ, ಕೃತಾರ್ಥರಾಗಲಿ ಎಂಬ ಸದ್ ಭಾವನೆಯಿಂದ ಈ ಗ್ರಂಥ ಪ್ರಕಟಿಸಿ ತಮ್ಮ ಕೈಗಿತ್ತಿದ್ದಾರೆ.

ಶ್ರೀ ನಿಂಗಭಟ್ ಜೋಶಿಯವರ ಸಾಧನೆ ಸಾರ್ಥಕ್ಯ ಪಡೆಯಲೆಂದು ಆ ದಯಾಮಯನಾದ ಶ್ರೀ ಚಿದಂಬರ ಸ್ವರೂಪಿಯಾದ ಶ್ರೀ ಶೇಷಾಚಲ ಸದ್ಗುರುಗಳಲಿ ಪ್ರಾರ್ಥಿಸುತ್ತೇವೆ.



## ವಯೋವೃದ್ಧ, ಜ್ಞಾನ ವೃದ್ಧ, ಶತಾಯುಷಿ ಶ್ರೀ ಗುಡ್ಡಪ್ಪನವರು ಪೂಜಾರ (ದೇವರಗುಡ್ಡ) ಇವರಿಂದ -

ವೇ ॥ ಚಿ ॥ ನಿಂಗಭಟ್ಟ, ಶಿವಭಟ್ಟ ಜೋಶಿ ಸಾ॥ ಚಿಲ್ಲೂರಬಡ್ನಿ ಈತನು ಭಾಮಿನಿ ಷಟ್ಪದಿಯಲ್ಲಿ ಸುಂದರವಾಗಿ ರಚಿಸಿರುವ, ಮಹಾ ದೈವತ ಮಲ್ಲಾರೇಶನ ಪುರಾಣವನ್ನೋದಿ ಬಹಳೇ ಸಂತೋಷಪಟ್ಟೆ. ವೀರ, ಶೃಂಗಾರ, ಶೋಕ, ಹಾಸ್ಯ, ಭಕ್ತಿಯೇ ಮೊದಲಾದ ನವರಸಗಳಿಂದೊಡಗೂಡಿದ ಈ ಪುರಾಣವನ್ನು ಓದುತ್ತಿದ್ದಂತೆಯೇ, ಭಕ್ತಿ ಪುಲಕಿತನಾಗಿ ನನ್ನ ಕಣ್ಣಲ್ಲಿ ಆನಂದಾಶೃಗಳುದುರಿದವು, ಪುರಾಣ ಅಷ್ಟೊಂದು ಸುಲಲಿತವೂ, ಅರ್ಥಗರ್ಭಿತವೂ, ಆಗಿದೆ. ನಿಂಗಭಟ್ಟ ಜೋಶಿ ಈತನು ನಮ್ಮ ಕೈಯಲ್ಲಿ ಬೆಳೆದ ಹುಡುಗ. ಸ್ವತಃ ಹತ್ತಿಪ್ಪತ್ತು ಶ್ರೇಷ್ಠ ನಾಟಕಗಳನ್ನೂ, ಅನೇಕ ಚರಿತ್ರೆಗಳನ್ನೂ, ಬರೆದು ಅನೇಕ ಪ್ರಶಸ್ತಿಗಳನ್ನು ಪಡೆದುಕೊಂಡಿದ್ದಾನೆ. ತನ್ನ ಉತ್ತರಾರ್ಧದ ಆಯುಷ್ಯ ಭಾಗವನ್ನು ಈ ಹುಡುಗ, ಆಧ್ಯಾತ್ಮ ಚಿಂತನೆಯತ್ತ ತಿರುಗಿಸಿಕೊಂಡದ್ದು, ಕಲ್ಯಾಣಕರ ಕರ್ತವ್ಯ ವೆಂದೇ ಹೇಳಬೇಕಾಗುತ್ತದೆ. ''ಈತನಿಂದ ಇನ್ನೂ ಹತ್ತಾರು ಕೃತಿಗಳು ಹೊರಬಂದು, ಸದ್ಭಕ್ತರಿಗೆ ಮಾರ್ಗದರ್ಶಿಗಳಾಗಿ ಬೆಳಗಲಿ !'' ಇಂಥ ಪವಿತ್ರ ಪುರಾಣವನ್ನು ಸರ್ವಭಕ್ತರೂ ಪಾರಾಯಣ ಮಾಡಿ, ತಮ್ಮ ತಮ್ಮ ಜೀವನಗಳನ್ನು ಸಾರ್ಥಕ ಪಡಿಸಿಕೊಳ್ಳಲಿ '' ಮಹಾದೇವ ಮಲ್ಲಾರಿಯಲ್ಲಿ ಲೇಖಕನ ಮನಸ್ಸು ಸ್ಥಿರವಾಗಿ ನೆಲೆಗೊಳ್ಳಲಿ !'' ಎಂದು ಹಾರೈಸುತ್ತ, ಈ ಆಶೀರ್ವಚನವನ್ನು ಮುಗಿಸುತ್ತೇನೆ. ಸರ್ವೇ ಜನಾಃ ಸುಖಿನೋ ಭವಂತು !.......

**ಏಳು ಕೋಟಿ, ಏಳುಕೋಟಿ, ಏಳುಕೋಟಿಗೊ !..... ಚಾಂಗ್ಮಲೋ !....**

# ಮುನ್ನುಡಿ

## ಶ್ರೀ ಮ. ನಿ. ಪ್ರ. ಸ್ವ, ನಿರಂಜನ ಮಹಾಸ್ವಾಮಗಳವರು ಶ್ರೀ ವಿರಕ್ತಮಠ ಹೂವಿನಶಿಗ್ಲಿ ತಾ॥ ಸವಣೂರ ಜಿ॥ ಹಾವೇರಿ ಇವರಿಂದ -



ಶ್ರೀ ಮ. ನಿ. ಪ್ರ. ಸ್ವ, ನಿರಂಜನ
ಮಹಾಸ್ವಾಮಗಳವರು
ಶ್ರೀ ವಿರಕ್ತಮಠ ಹೂವಿನಶಿಗ್ಲಿ

" ಶ್ರೀ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣಂ'' ಎಂಬ ತಮ್ಮ ನವೀನ ಕೃತಿಯಾದ ಈ ಪುರಾಣಕ್ಕೆ ಮುನ್ನುಡಿಯನ್ನು ಬರೆಯಲು ಚಿಲ್ಲೂರ ಬಡ್ನಿಯ ಭಕ್ತಿ ಕವಿಗಳಾದ, ಸಾಹಿತ್ಯ ರತ್ನಾಕರ, ನಿಂಗಭಟ್ ಜೋಶಿಯವರು, ಆಗ್ರಹದಿಂದ ಒಪ್ಪಿಸಿದ್ದಾರೆ. ನಮ್ಮಿಂದಲೇ ಮುನ್ನುಡಿ ಬರೆಸಬೇಕೆಂಬುದೇ ಕವಿಗಳ ಹಿರಿದಾಸೆ ಇದ್ದಂತೆ ಕಾಣುತ್ತದೆ. ಹಾಗೆಂದೇ ಈ ಕಾರ್ಯವು, ನಮ್ಮ ಪಾಲಿಗೆ ಬಂದಿದೆ. ಈ ಪುರಾಣದ ಕವಿಗಳಾದ ನಿಂಗಭಟ್ ಜೋಶಿಯವರು ಇಪ್ಪತ್ತೊಂದನೆಯ ಶತಮಾನದ ಭಕ್ತಿ ಕವಿಗಳಾಗಿದ್ದಾರೆ. ಸುಶೀಲರೂ, ಸ್ವಾತ್ವಿಕರೂ, ವಿಶ್ವಾಸಿಕರೂ, ಸರಳ ವ್ಯಕ್ತಿತ್ವವುಳ್ಳವರೂ ಆದ ಇವರು ಶ್ರೇಷ್ಠ ಕವಿಗಳೇ ಆಗಿದ್ದಾರೆ. ಕೇವಲ ಪಾಂಡಿತ್ಯದಿಂದಲ್ಲ, ಕೃತಿನಾಯಕನ ಕೃಪೆ, ಹಾಗೂ ಮಹಾತ್ಮರ ಆಶೀರ್ವಾದ ಬಲದಿಂದ, ವರಕವಿಗಳೂ ಆಗಿದ್ದಾರೆ. ಹಲವಾರು ನಾಟಕಗಳು, ಎರಡು ಪುರಾಣಗಳನ್ನು ರಚಿಸಿದ್ದಾರೆ. ಪುರಾಣವೆಂಬ ಶಬ್ಧವು ಪುರಾತನ ಕಾಲದಿಂದಲೂ ಪ್ರಯೋಗ ಮಾಡಲ್ಪಟ್ಟಿದೆ. ಮಹಾಕವಿ ವೇದವ್ಯಾಸ ಮಹರ್ಷಿಯು, ಸ್ಕಂದ ಪುರಾಣ, ಲಿಂಗಪುರಾಣ, ಶಿವಪುರಾಣ, ಮಹಾಭಾರತ ಪುರಾಣವೇ ಮೊದಲಾದ, ೧೮ ಮಹಾಕಾವ್ಯಗಳನ್ನು ರಚಿಸಿ, ಪುರಾಣ ಶಬ್ಧಕ್ಕೆ ಪಾವಿತ್ರ್ಯತೆಯ ಮೆರಗು ನೀಡಿದ್ದಾನೆ. ಇದೇ ರೀತಿಯಾಗಿ ಬಹುಕಾಲದ ನಂತರ ಕನ್ನಡ, ತೆಲಗು, ಮರಾಠೀ ಮೊದಲಾದ ಕವಿಗಳ ಕಾಲವು ಬರುತ್ತದೆ. ಕನ್ನಡದ ಕವಿಗಳು ಪುರಾಣ ಶಬ್ಧವನ್ನು ಧಾರ್ಮಿಕ ಪುರುಷರ ಚರಿತ್ರೆಗಳಿಗೆ ಮಾತ್ರ ಉಪಯೋಗಿಸಿದ್ದು ಕಂಡು ಬರುತ್ತದೆ. ಈ ಪುರಾಣಗಳಲ್ಲಿ ಮಹಾಪುರುಷರ ಜೀವನ ಚರಿತ್ರೆ, ಲೀಲೆಗಳು, ಮಹಿಮೆಗಳು, ಧರ್ಮ ತತ್ವಗಳೇ ಪ್ರತಿಪಾದಿಸಲ್ಪಟ್ಟಿರುತ್ತವೆ.

ಕವಿಯ ನಿಜವಾದ ಪಾಂಡಿತ್ಯ ಪ್ರತಿಭೆಗಳು, ಪುರಾಣಾದಿ ಕಾವ್ಯಗಳಿಂದ ವ್ಯಕ್ತವಾಗುತ್ತವೆ. ಈ ಪುರಾಣದ ಕವಿಗಳಾದ ಶ್ರೀ ನಿಂಗಭಟ್ ಜೋಶಿಯವರ ಪುರಾಣ ಶೈಲಿಯು, ಅತ್ಯಂತ ಸರಳವೂ ಹೃದಯಂಗಮವೂ ಆಗಿದೆ. ಸಹೃದಯರಿಗೆ, ಆನಂದವನ್ನುಂಟು ಮಾಡುವ ಧ್ಯೇಯವನ್ನಿಟ್ಟುಕೊಂಡೇ ಕವಿಗಳು ಈ ಪುರಾಣದಲ್ಲಿ ಮಲ್ಲಾರಿಯ ಲೀಲೆಯನ್ನು ಬಣ್ಣಿಸಿದ್ದಾರೆ.

'' ಯಂತ್ರದಂತಿದು ಎನ್ನ ಕಾಯವು । ಯಂತ್ರ ವಾಹಕ ನೀನು ಒಳಗಿಹೆ । ಮಂತ್ರ ನಿನ್ನದು ತೈಲವೆನಿಪುದು ಯಂತ್ರ ಸಾಗಲ್ಕೆ ॥ ತಂತ್ರ ನಿನ್ನದು ಇಂತು ಇರೆಸ್ವಾ, । ತಂತ್ರ್ಯವೆಲ್ಲಿದೆ. ತಂದೆ ನನಗೀ । ಯಂತ್ರದಂತರ್ಯಾಮಿ, ನೀನೆ ಮಲ್ಲ ಮಣಿಕಾರಿ ॥ ಎಂಬ ನುಡಿಯಲ್ಲಿ ಕವಿಯು, ತನ್ನ ಶರೀರವನ್ನು ಯಂತ್ರಕ್ಕೆ ಹೋಲಿಸಿಕೊಂಡು, ಸರ್ವಾಂತರ್ಯಾಮಿಯಾದ ತನ್ನ ಕುಲದೇವನನ್ನು ಚಾಲಕನ ಸ್ಥಾನದಲ್ಲಿ ಟ್ಟಿದ್ದಾನೆ. ಈ ಹೋಲಿಕೆ ಸತ್ಯವೂ, ಸುಂದರವೂ ಆಗಿದೆ. ಕವಿಯು ಮಲ್ಲಾರಿಯಲ್ಲಿ ಅನನ್ಯ ಭಕ್ತಿಯಿಟ್ಟು ಈ ಕೃತಿಯನ್ನು ಪೂರ್ತಿಗೊಳಿಸಲು ಪ್ರಾರ್ಥಿಸಿ ಕೊಂಡಿದ್ದಾನೆ.

ಮತ್ತೂ ಮುಂದುವರಿಯುತ್ತಾ : ಮಾನ್ಯ ಶಂಕರ ಮಧ್ವರಾರ್ಯರ! ಶೂನ್ಯ ಸಿಂಹಾಸನದ ಅಲ್ಲಮ । ಅನ್ಯಮತದೋದ್ಧಾರಕರ ಕೃಪೆ ಇರಲಿ, ಈ ಕೃತಿಗೆ ॥ ಮಾನ್ಯನಾಗುವ ಹಮ್ಮು ಯನಗಿ। ಲ್ಲನ್ಯ ಕವಿಗಳ ಕಿಂಕರನು ನಾಂ । ಧನ್ಯನಾಗುವದೊಂದೇ ಗುರಿಯಿಂ ಬರೆವೆ ನೀ ಕಾವ್ಯ ॥ ಎಂದು ಹೇಳಿಕೊಂಡಿದ್ದಾನೆ.

ನಿಂಗಭಟ್ ಜೋಶಿಯವರು ಶೂನ್ಯ ಸಿಂಹಾಸನದ ಅಧ್ಯಕ್ಷರಾದ, ಅಲ್ಲಮ ಪ್ರಭುಗಳನ್ನೂ, ಅದ್ವೈತಾಚಾರ್ಯ ಶಂಕರರನ್ನೂ, ದ್ವೈತ ಪ್ರತಿಪಾದಕ ಮಧ್ವಾಚಾರ್ಯರನ್ನೂ, ಉಳಿದ ಸಿದ್ಧಾಂತ ಪ್ರತಿಪಾದಕರಲ್ಲಿ ಪ್ರಾರ್ಥಿಸಿ, ''ತಾವು ಕೀರ್ತಿವಂತರಾಗಬೇಕೆಂಬ, ಅಹಂಕಾರದಿಂದಾಗಲೀ, ಹಣಗಳಿಸಬೇಕೆಂಬ, ದುರಾಸೆಯಿಂದಾಗಲೀ ಈ ಕೃತಿ ರಚಿಸದೇ, ತಮ್ಮ ಜನ್ಮ ಸಾರ್ಥಕವಾಗಲೆಂದು,'' ಈ ಕೃತಿ ರಚನೆ ಮಾಡುತ್ತಿದ್ದೇನೆ'' ಎಂದು ಕಿಂಕರತ್ವ ವ್ಯಕ್ತಪಡಿಸಿ ಧನ್ಯರಾಗಿದ್ದಾರೆ,

ಈ ಭಕ್ತ ಕವಿಯು, ಮಲ್ಲಾರಿಯ ವ್ಯಕ್ತಿತ್ವವನ್ನು ಕುರಿತು, ವೇದ ಪ್ರೀಯ ನೀನೇಂಬುದೂ ಸಟೆ । ನಾದ ಪ್ರೀಯ ನೀನೆಂಬುದೂ ಸಟೆ । ವೇದನಾದಗಳೆರೆಡು ಸಾಧನ ಮಾತ್ರ ಮೆಚ್ಚುಗೆಗೆ ॥ ವಾದವಿಲ್ಲದ ಶುದ್ಧ ಭಕ್ತಿಯೇ । ಸಾಧನಾಗಿದೆ ನಿನ್ನ ಒಲುಮೆಗೆ । ಆದಕಾರಣ ಭಕ್ತರೆಮ್ಮನು ರಕ್ಷಿಸೈ ಶಿವನೇ ॥ ಎಂದು ನುಡಿಸಿದ್ದಾರೆ.

ನ್ಯಾಯ ನಿಷ್ಠುರ ದಾಕ್ಷಿಣ್ಯ ಪರರಾಗದ ಕವಿಗಳು, ಸತ್ಯವಾದುದನ್ನೇ ಪ್ರತಿಪಾದಿಸಿದ್ದಾರೆ. ಇದರಲ್ಲಿ ಪರಶಿವನ ಪಂಚವಿಂಶತಿ ಲೀಲೆಗಳನ್ನು ಪ್ರತಿನಿಧಿಸುವಂತೆ ಇಪ್ಪತ್ತೈದು ಅಧ್ಯಾಯಗಳಿವೆ. ಈ ಕಾವ್ಯವು ಬಹುಸೋಗಸಾಗಿ ಹೆಣೆಯಲ್ಪಟ್ಟದೆ. ಸತತ ಪರಿಶ್ರಮದಿಂದ ಪರಮ ಪಾವನ ಮಲ್ಲಾರಿ ಚರಿತೆಯನ್ನು ಪ್ರಕಾಶನಗೊಳಿಸುವ ಸೇವೆ, ಶ್ಲಾಘನೀಯವಾದದ್ದು.

ಕೊಡುವಿಯಾದರೆ ನೀಡುವರವನು । ಬಿಡದೇ ನಿನ್ನರ್ಚಿಸುವ ಸುಜನರಿ । ಗೆಡರು, ಬಡತನ ಬಾರದಂತಿರಲೆಂಬ ಹರಕೆಯನು ॥ ಮಡದಿ ಮಕ್ಕಳು ಸುಖದಿ ಬಾಳಲಿ । ಗಡ ಚಲಿಸದಾ ಲಕ್ಷ್ಮಿ ನೆರಿಸಲಿ । ಬಿಡದೇ ಧರ್ಮಾಚರಣೆ ನಡೆಯಲಿ ಅವರ ಸುತರಿಂದ ॥

ಈ ದಿವ್ಯ ಲೀಲೆಯ ಮಹತ್ವವನ್ನು ಸಾರುವರ ಜೊತೆಗೆ ಫಲಶೃತಿಯನ್ನೇ ತಿಳಿಸಿರುವುದು. ಪುರಾಣದ ಹಿರಿಮೆಗೆ ಕಾರಣವಾಗಿದೆ. ಭಕ್ತಿವಂತರು ಈ ನವೀನ ಕೃತಿಯನ್ನು ಭಕ್ತಿಯಿಂದ ಓದಿ, ಕೇಳಿ, ಕೃತಾರ್ಥರಾಗಬೇಕು. ಕವಿಗಳು ಈ ಲೀಲೆಯನ್ನು ಭಕ್ತಿಯಿಂದ ಬರೆದು ತಮ್ಮ ಜನ್ಮವನ್ನು, ಹಾಗೂ ವಂಶವನ್ನು ಪವಿತ್ರಮಾಡಿಕೊಳ್ಳುತ್ತಿರುವುದು. ಅತ್ಯಂತ ಶ್ಲಾಘನೀಯ. ಹಾಗೂ ಆನಂದ ದಾಯಕವು. ''ಇವರ ಭಕ್ತಿ ಕಾವ್ಯಗಳು, ಸಲಿಲದಂತೆ ಹೆಚ್ಚಾಗಿ ಹರಿದು ಕನ್ನಡಮ್ಮನ ಉಡಿ ತುಂಬಲಿ, ಹಾಗೂ ಕನ್ನಡ ಸರಸ್ವತಿಯ ಮಣಿಮುಕುಟಕ್ಕೆ ಮತ್ತೊಂದು ರತ್ನವಿಟ್ಟಂತಾಗಲಿ!! ಅಂಥ ಶಕ್ತಿಯನ್ನು ಶ್ರೀ ಬಸವಾದಿ ಶರಣರು ಜೋಶಿಯವರಿಗೆ ಕೊಡಲೆಂದು'' ಆಶಿಸುತ್ತಾ, ಮಲ್ಲಾರಿಯ ಭಕ್ತಾಭಿಮಾನಿಗಳು ಈ ವಿನೂತನ ಕೃತಿಯನ್ನು ಶ್ರದ್ಧಾ ಭಕ್ತಿಯಿಂದ ತೆಗೆದುಕೊಂಡು ನಿತ್ಯವೂ ಪಠಿಸಿ ತಮ್ಮ ಜೀವನವನ್ನು ಸಾರ್ಥಕ ಪಡಿಸಿ ಕೊಳ್ಳಲೆಂದು ಹಾರೈಸುತ್ತೇವೆ.

**ಇತಿ ಶುಭ ಮಂಗಲಾಶಿರ್ವಾದಗಳು**

**ಶ್ರೀ ವಿರಕ್ತಮಠ ನಿರಂಜನ ಮಹಾಸ್ವಾಮಿಗಳು,**
**ಹೂವಿನ ಶಿಗ್ಲಿ ತಾ॥ ಸವಣೂರ ಜಿ॥ ಹಾವೇರಿ**

# ಲೇಖಕನ ಒಂದೆರಡು ಮಾತುಗಳು

ನಮ್ಮ ಮನೆತನಕ್ಕೆ ಶ್ರೀ ಮ್ಹಾಲಸಾ ಮಾರ್ತಾಂಡ ಭೈರವನು ಕುಲಸ್ವಾಮಿಯಾಗಿದ್ದು, ಆತನಲ್ಲಿ ನನಗೆ ಅನನ್ಯ ಭಕ್ತಿಯುಂಟು. ಯಾವುದೇ ರೀತಿಯಿಂದ "ಕುಲಸ್ವಾಮಿಗೊಂದು ಅಪೂರ್ವ ಸೇವೆ ಸಲ್ಲಿಸಿ, ಕೃತಾರ್ಥನಾಗಬೇಕೆಂದು" ನನಗೆ ಮೊದಲಿನಿಂದಲೂ ಆಸೆಯಿತ್ತು. ಆ ಮಹದಾಸೆ ಇಂದು ಮರವಾಗಿ ಚಿಗಿತು, ಘಮಘಮಿಸುವ ಚಂಪಕ ಕುಸುಮವಾಗಿ, ಈ ಸದ್ಗ್ರಂಥ ರೂಪದಲ್ಲಿ ತಮ್ಮೆಲ್ಲರ ಕೈ ಸೇರಿದೆ. ಈ ಮೊದಲು ನಾನು ನನ್ನ ಪೂಜ್ಯ ಗುರುಗಳಾದ ಶ್ರೀ ಮಲ್ಲಾರಿ ದೀಕ್ಷಿತರ ಕೃಪಾಶೀರ್ವಾದ ಬಲದಿಂದ, ಒಬ್ಬ ಶ್ರೇಷ್ಠ ನಾಟಕಕಾರನಾಗಿ, ರತ್ನಮಾಂಗಲ್ಯ, ಬಂಜೆ ತೊಟ್ಟಿಲು, (ತಾಯಿ ಚಿತ್ರಕಥೆ) ಚೆನ್ನಪ್ಪ ಚೆನ್ನೇಗೌಡ ಸಿಂಧೂರ ಸಿಂಹ ಲಕ್ಷ್ಮಣ, ಸಮಾಜಕ್ಕೇ ಸವಾಲು, ಮುಂತಾದ 25 ನಾಟಕಗಳನ್ನು ರಚಿಸಿ, ಶ್ರೇಷ್ಠ ನಾಟಕಕಾರನೆಂಬ ಕೀರ್ತಿ ಪಡೆದೆ. ನನಗೆ ನಾಟಕ ಅಕಾಡೆಮಿಯಿಂದ ಪ್ರಶಸ್ತಿಯೂ (1994 ರಲ್ಲಿ) ಲಭಿಸಿತು, ಅನೇಕ ಚಾರಿತ್ರಿಕ ಗ್ರಂಥಗಳನ್ನು, ರಚಿಸಿಯೂ ಕೀರ್ತಿಪಡೆದೆ. ತಾಲೂಕ ಮಟ್ಟದಿಂದ ಮೊದಲ್ಗೊಂಡು, ರಾಜ್ಯ ಪ್ರಶಸ್ತಿಯ ವರೆಗೆ ಎಲ್ಲ ಪ್ರಶಸ್ತಿಗಳೂ ಲಭ್ಯವಾದವು, ಆದರೆ ಪರಮಾತ್ಮನಾದ ಕುಲಸ್ವಾಮಿ ಮಾರ್ತಾಂಡ ಭೈರವನಿಂದ ಮಾತ್ರ ಇದು ವರೆಗೂ ಪ್ರಶಸ್ತಿ ನನಗೆ ದೊರೆತಿರಲಿಲ್ಲಾ ; ನನ್ನ ಜನ್ಮ ಸಾರ್ಥಕತೆ ಪಡೆದಿರಲಿಲ್ಲ, ಈಗ ಶ್ರೀ ಮ್ಹಾಲಸಾ ಮಾರ್ತಾಂಡ ಭೈರವ ಚರಿತ್ರೆಯನ್ನು ಭಾಮಿನಿ ಷಟ್ಪದಿಯಲ್ಲಿ ರಚಿಸಿ, ನಾನು ಕೃತಕೃತ್ಯನಾಗಿದ್ದೇನೆ. ನನ್ನ ಜೀವನ ಸಫಲವಾಗಿದೆ. ಇನ್ನು ಆ ಮಹಾದೇವ ಮಲ್ಲಾರಿಯು, ನನ್ನನ್ನು ಕರೆದಾಗ, ನಾನು ಹೊರಡುವದಕ್ಕೂ ಸಿದ್ಧನಾಗಿದ್ದೇನೆ. ಮಾನವ ಜನ್ಮದ ಮೂಲ ಧೇಯವಾದ ಧರ್ಮ, ಅರ್ಥ, ಕಾಮಗಳಲ್ಲಿಯ ಸಾಕಷ್ಟು ಸುಖ ದುಃಖಗಳಕ್ಕನುಭವಿಸಿದೆ. ಕೊನೆಗೆ ಸವಿಯುಂಡು, ಈ ಪ್ರಪಂಚಗಲ್ಲಿ ಶಾಶ್ವತ ಸುಖವಿಲ್ಲವೆಂಬುದನ್ನರಿತುಕೊಂಡು, ಮೋಕ್ಷ ಪಥಗತ್ತ ಸಾಗುವ ಪ್ರಯತ್ನ ಮಾಡತೊಡಗಿದ್ದೇನೆ. ಅದರ ಫಲವೇ "ಶ್ರೀ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣವಾಗಿ, ತಮ್ಮ ಕೈ ಸೇರಿದೆ. "ನಾನು" ಎಂದರೆ ಯಾರು ? ಎಂಬ ಆಧ್ಯಾತ್ಮಿಕ ಚಿಂತನೆಯೂ ಈ ಗ್ರಂಥದಲ್ಲಿ ವಿವರವಾಗಿ ತಿಳಿಸಲ್ಪಟ್ಟಿದೆ. "ಅಯಮಾತ್ಮಾ ಬ್ರಹ್ಮ" "ಅಹಂ ಬ್ರಹ್ಮಾಸ್ಮಿ" ಎಂಬ ಅದ್ವೈತ ತತ್ವಗಳು, ಈ ಗ್ರಂಥವನ್ನು ಮನಃ ಪೂರ್ವಕವಾಗಿ ಓದಿದವರಿಗೆ ಅರ್ಥವಾಗದಿರಲಾರವು. ನಾನು ಈ ಮೊದಲೇ ಪದ್ಯರೂಪದಲ್ಲಿ ತಿಳಿಸಿದಂತೆ, ನಾನು ದೊಡ್ಡವನೆನಿಸಿಕೊಳ್ಳಬೇಕೆಂಬ ಹೆಮ್ಮೆಯಿಂದ ಈ ಮಹಾಕಾವ್ಯವನ್ನು ರಚಿಸಲಿಲ್ಲ; ಕುಲಸ್ವಾಮಿಯಾದ ಮಾರ್ತಾಂಡ ಭೈರವನಿಗೆ ಸಾಹಿತ್ಯಸೇವೆ ಸಲ್ಲಿಸಿ, ನನ್ನ ಜನ್ಮ ಸಾರ್ಥಕ್ಯ ಪಡಿಸಿಕೊಳ್ಳಬೇಕೆಂಬ ಒಂದೇ ಒಂದು ಮಹದಾಸೆಯಿಂದ ಈ ಪ್ರಯತ್ನಕ್ಕೆ ಕೈ ಹಾಕಿದೆ. ಗುರುಕರುಣೆಯಿಂದ ಈಗ ಅದೆಲ್ಲವೂ ಸಫಲವಾಯಿತು. ಕರ್ನಾಟಕದ ಸದ್ಭಕ್ತ ವೃಂದವು ಈ ಮಹತೋ ಮಹಿಮ ಮಲ್ಲಾರಿಯ ಚರಿತ್ರೆಯನ್ನೋದಿ, ಅರಗಿಸಿಕೊಂಡು, ಆನಂದ ಪಟ್ಟರೆ, ನಿಮ್ಮ ಆನಂದದಲ್ಲಿಯೇ ನಾನು ಮೋಕ್ಷ ಸುಖವನ್ನನುಭವಿಸುತ್ತೇನೆ. ಇನ್ನು ಈ ಪೂಜ್ಯ ಗ್ರಂಥ ಪ್ರಕಾಶನಕ್ಕಾಗಿ, ಬಹಳಷ್ಟು ಸದ್ಭಕ್ತರು ಬಹಳ ರೀತಿಯಿಂದ ಆರ್ಥಿಕ ನೆರವು ನೀಡಿ, ಪುಣ್ಯ

ಭಾಗಿಗಳಾಗಿದ್ದಾರೆ. ಅವರೆಲ್ಲರಿಗೂ ಮಲ್ಲಾರಿಯು ಅಖಂಡ ಸುಖ-ಸೌಭಾಗ್ಯ, ಆಯುರಾರೋಗ್ಯ ಭಾಗ್ಯಗಳನ್ನಿತ್ತು, ಕಾಪಾಡಲೆಂದು, ನಾನು ಸ್ವಾಮಿಯಲ್ಲಿ ಅನನ್ಯ ಭಕ್ತಯಿಂದ ಪ್ರಾರ್ಥಿಸಿಕೊಳ್ಳುತ್ತಿದ್ದೇನೆ. ಈ ಪುರಾಣವು ಪ್ರಕಟವಾಗುವದಕ್ಕೆ ಉತ್ತರ ಕರ್ನಾಟಕದ ಬಹಳಷ್ಟು ಜನ ಆರ್ಥಿಕ ನೆರವು ನೀಡಿ, ಕೃತಾರ್ಥರಾಗಿದ್ದಾರೆ. ಮುಖ್ಯವಾಗಿ ಸವಣೂರಿನ ಗಣ್ಯ ವ್ಯಕ್ತಿಗಳೂ, ಸಾಹಿತ್ಯಾಭಿಮಾನಿಗಳೂ ಆದ ರಾಜಶೇಖರ ಸಿಂಧೂರರವರು, ಅಯಾಚಿತವಾಗಿ ಆರ್ಥಿಕನೆರವು ನೀಡಿ ತಮ್ಮ ಮನೆತನದ ದೀಕ್ಷಾಗುರುಗಳಾದ ಮತ್ತು ಹಾನಗಲ್ ಕುಮಾರಸ್ವಾಮಿಗಳ ಶಿಷ್ಯರಾದ ಶ್ರೀ ಮ.ಘ.ಚ. ಶಾಂತವೀರ ಮಹಾಸ್ವಾಮಿಗಳು ಸಿಂದಗೀಮಠ, ಹಾವೇರಿ. ಇವರ ಸ್ಮರಣಾರ್ಥವಾಗಿ ನೀಡಿ, ನನಗೆ ಮಹೋಪಕಾರ ಮಾಡಿದ್ದಾರೆ. ಇಚ್ಚಂಗಿಯ ಮಲ್ಹಾರಿಯ ಸದ್ಭಕ್ತ ಶ್ರೀ ಆನಂದಪ್ಪ ಅಕ್ಕೂರ ಇವರು, ಈ ಪುರಾಣ ಪುಸ್ತಕಕ್ಕೆ ೫೫೦೦೧/- ರೂಪಾಯಿ ಖರ್ಚುಮಾಡಿ, ಸುಂದರವಾದ ಮುಖಚಿತ್ರ ರಚಿಸಿಕೊಟ್ಟು, ತಮ್ಮ ತಂದೆ, ದಿ|| ಮಲ್ಲಪ್ಪನವರ ಆತ್ಮಕ್ಕೆ ಶಾಂತಿಕೋರಿದ್ದಾರೆ.

ಅದರಂತೆಯೇ ಹಾವೇರಿಯ ಶಾಸಕರಾದ ಶ್ರೀ ಬಸವರಾಜ ಶಿವಣ್ಣನವರು (ಶಾಸಕರು ಹಾವೇರಿ) ೫೦೦೧/- ರೂಪಾಯಿಗಳನ್ನು, ತಮ್ಮ ತಾಯಿ ಶ್ರೀಮತಿ ಪುಟ್ಟಮ್ಮನವರ ಸ್ಮರಣಾರ್ಥವಾಗಿ, ಈ ಪುಸ್ತಕ ಪ್ರಕಾಶನಕ್ಕಾಗಿ, ದಾನವಾಗಿತ್ತಿದ್ದಾರೆ. ಇದಲ್ಲದೆ ಇನ್ನೂ ಕೆಲವು ಜನ ಪ್ರತಿಷ್ಠಿತ ವ್ಯಕ್ತಿಗಳು ''ಈ ಪುರಾಣ ಪುಸ್ತಕ ಪ್ರಕಾಶನವಾಗುವದಕ್ಕೆ ಧನ ಸಹಾಯ ಮಾಡುವೆವೆಂದು'' ಆಶ್ವಾಸನೆಯನ್ನಿತ್ತಿದ್ದಾರೆ. ಭಗವಂತ ಶ್ರೀ ಮ್ಹಾಲಸಾ ಮಾರ್ತಾಂಡ ಭೈರವನು, ಆ ದಾನಿಗಳಿಗೆಲ್ಲ ಸುಖಜೀವನವನ್ನು ಕರುಣಿಸಲೆಂದು, ನಾನು ಪ್ರಾರ್ಥಿಸುತ್ತೇನೆ. ಈ ಸದ್ಗ್ರಂಥ ರಚನಾ ಸಮಯದಲ್ಲಿ ನನಗೆ ನೆರವಾದ ಶ್ರೀ ಆರ್. ಡಿ. ಕುಲಕರ್ಣಿಯವರನ್ನೂ ಹಾಗೂ ಡಾ|| ದೇವಾಡಿಗರನ್ನು ಈ ಸಮಯದಲ್ಲಿ, ನಾನು ಸ್ಮರಿಸದಿರಲಾರೆ. ಹೀಗೆ ಸಲಹೆ-ಸೂಚನೆಗಳನ್ನಿತ್ತ ಪ್ರತಿಯೊಬ್ಬ ಮಹಾನು ಭಾವರಿಗೂ ನಾನು ಋಣಿಯಾಗಿದ್ದೇನೆ. ಈ ಸದ್ಗ್ರಂಥ ಪ್ರಕಟವಾಗುವದಕ್ಕೆ ಮೊದಲೇ, ನಾನು ರಸೀದಿ ಮೂಲಕವಾಗಿ, ಹಣ ಶೇಖರಿಸತೊಡಗಿದೆ. ಆಗ ನನ್ನಲ್ಲಿ ವಿಶ್ವಾಸವಿಟ್ಟು, ಪುಸ್ತಕ ರಸೀದಿ ಪಡೆದು, ದುಡ್ಡುಕೊಟ್ಟ, ಹಾವೇರಿ, ಧಾರವಾಡ, ಮುಂತಾದ ಜಿಲ್ಹೆಯ ಪ್ರತಿಯೊಬ್ಬ ಮೈಲಾರೇಶ್ವರನ ಸದ್ಭಕ್ತರ ಹಿರಿಕರುಣೆಯನ್ನು ನಾನು ಸದಾ ನೆನಪಿನಲ್ಲಿಟ್ಟುಕೊಂಡಿರುತ್ತೇನೆ. ನನಗೆ ಪ್ರತ್ಯಕ್ಷವಾಗಿ, ಪರೋಕ್ಷವಾಗಿ, ಉಪಕಾರ ಮಾಡಿದ ಸಹೃದಯರೆಲ್ಲರ ಹೆಸರನ್ನು ಸೂರಿದರೆ, ಅದು ಮುಖಸ್ತುತಿ ಎನಿಸೀತು. ಅಂಥ ಎಲ್ಲ ಸದ್ಭಕ್ತರಿಗೂ ನಮನ ಸಲ್ಲಿಸುತ್ತ ಈ ನನ್ನ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

ಇತಿ, ವಿದ್ವಜ್ಜನ ವಿಧೇಯ

ಚಿಲ್ಲೂರ ಬಡ್ನಿ

ಸಾಹಿತ್ಯ ರತ್ನಾಕರ ನಿಂಗಭಟ್ ಜೋಶಿ

ತಾ|| 5-10-2001



ನಮ್ಮ ದೀಕ್ಷಾ ಗುರುಗಳು ಹಾಗೂ ಹಾನಗಲ್ ಕುಮಾರ ಸ್ವಾಮಿಗಳ ಶಿಷ್ಯರಾದ
ಪೂಜ್ಯ ಲಿ. ಸಿಂದಗಿ ಶ್ರೀ ಶಾಂತವೀರ ಪಟ್ಟಾಧ್ಯಕ್ಷರು, ಹಾವೇರಿ ಇವರ ಸ್ಮರಣಾರ್ಥ
ಶ್ರೀ ಗುರುಸಿದ್ಧಪ್ಪ ಪು. ಸಿಂಧೂರ ಹಾಗೂ ಮಕ್ಕಳು ಇವರ ಕೊಡುಗೆ



ಮಾತೋಶ್ರೀ
ಶ್ರೀಮತಿ ಪುಟ್ಟಮ್ಮ ಶಿವಣ್ಣವರ
ಇವರ ಸ್ಮರಣಾರ್ಥವಾಗಿ
ಶ್ರೀ ಬಸವರಾಜ ಶಿವಣ್ಣವರ
(ಶಾಸಕರು ಹಾವೇರಿ)
ಇವರ ಸೇವೆ



ಪೂಜ್ಯ ತಂದೆಯವರಾದ
ದಿ. ಶ್ರೀ ಮಲ್ಲಪ್ಪ ಅಕ್ಕೂರ
ಇವರ ಸ್ಮರಣಾರ್ಥವಾಗಿ
ಶ್ರೀ ಆನಂದಪ್ಪ ಅಕ್ಕೂರ
(ಜಿ. ಪ. ಹಾವೇರಿ ಸಾ|| ಇಚ್ಚಂಗಿ)
ಇವರ ಸೇವೆ

ಶ್ರೀ ಮಾಲತೀಶ ಪ್ರಸನ್ನ

ನಿಂಗಭಟ್ ಜೋಶಿ ವಿರಚಿತ

# ಶ್ರೀ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣಂ



ಶಬ್ದಾರ್ಥ, ಭಾವಾರ್ಥ ಗಳಿಂದೊಡಗೂಡಿದ ಸಚಿತ್ರ ಪಾರಾಯಣ ಗ್ರಂಥ

ಪ್ರಕಾಶಕರು : ಶ್ರೀ ಮಾಲತೀಶ ಪ್ರಕಾಶನ ಚಿಲ್ಲೂರ ಬಡ್ನಿ, ತಾ. ಸವಣೂರ - 581 118 ಜಿ. ಹಾವೇರಿ.

☎ : 66070 (08378)

ಬ್ರಾಂಚ ಆಫೀಸ್ : ಕಣವಿ ತಾ. ಗದಗ

# ಶ್ರೀ ಮೈಲಾರ ಮಾರ್ತಾಂಡ ಭೈರವ ಪುರಾಣಂ

ಶಬ್ದಾರ್ಥ ಭಾವಾರ್ಥ ಗಳಿಂದೊಡಗೂಡಿದ ಸಚಿತ್ರ ಪಾರಾಯಣ ಗ್ರಂಥ

ಲೇಖಕರು : **ಸಾಹಿತ್ಯ ರತ್ನಾಕರ ನಿಂಗಭಟ್ ಜೋಶಿ** ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ ವಿಜೇತರು



ಪ್ರಕಾಶಕರು : **ಶ್ರೀ ಮಾಲತೀಶ ಪ್ರಕಾಶನ** ಚಿಲ್ಲೂರ ಬಡ್ನಿ, ತಾ. ಸವಣೂರ – 581 118
ಜಿ. ಹಾವೇರಿ : 66070 (08378)

ಬ್ರಾಂಚ್ ಆಫೀಸ್ : **ಕಣವಿ ತಾ. ಗದಗ**

ಪ್ರಥಮ ಮುದ್ರಣ : 2001

ಪ್ರತಿಗಳು : 2000

ಪುಟಸಂಖ್ಯೆ : 16 + 264 = 280

ಬೆಲೆ : **60 - 00** ರೂಪಾಯಿಗಳು

ಅಕ್ಷರ ಜೋಡಣೆ : **ಗೋಧಿ ಆಫ್‌ಸೆಟ್ ಪ್ರಿಂಟರ್ಸ್**, ಸವಣೂರ ✆ : 65687

ಮುದ್ರಣ : **ಭಾಂಡಗೆ ಆಫ್‌ಸೆಟ್ ಪ್ರಿಂಟರ್ಸ್**, ಬ್ಯಾಂಕರೋಡ, ಗದಗ ✆ : 37227

# ಪರಿವಿಡಿ ( ವಿಷಯಾನುಕ್ರಮಣಿಕೆ )

## ಈ ಪವಿತ್ರ ಗ್ರಂಥ ಪಾರಾಯಣ ಮಾಡುವ ಸದ್ಭಕ್ತರಿಗೊಂದು ಕಿವಿಮಾತು.

ಶ್ರೀ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣವು ಅತ್ಯಂತ ಪವಿತ್ರವಾದದ್ದೂ, ಭಕ್ತರ ಇಷ್ಟಾರ್ಥಗಳನ್ನು ತಕ್ಷಣವೇ ಪೂರೈಸಿಕೊಡುವ ಸಾಮರ್ಥ್ಯ ಪಡೆದದ್ದೂ ಆಗಿರುತ್ತದೆ. ಈ ಪುರಾಣ ಪಠಣ ಮಾಡುವವರು ಶುದ್ಧಾಂತಃ ಕರುಣೆಯುಳ್ಳವರಾಗಿರಬೇಕು. ಸದ್ಗುರುವಿನ ಕೃಪಾಶೀರ್ವಾದ ಪಡೆದವರಾಗಿರಬೇಕು! ನವರಾತ್ರಿಯ ಸಮಯದಲ್ಲಾಗಲೀ, ಚಂಪಾ ಷಷ್ಟಿಯ ಸಮಯದಲ್ಲಾಗಲೀ, ಭಾರತ ಹುಣ್ಣಿಮೆಯ ಸಮಯದಲ್ಲಾಗಲೀ ಈ ಪೂಜ್ಯ ಗ್ರಂಥವನ್ನು ಪಾರಾಯಣ ಮಾಡುವವರು, ನಿತ್ಯದಲ್ಲಿ ಒಂದೇ ಸಲ ಊಟ ಮಾಡುವದು ಶ್ರೇಯಸ್ಕರವೆನಿಸುವದು. ಹಾಗೆ ಪಾರಾಯಣ ಮಾಡಲಿಚ್ಛಿಸುವ ಸದ್ಭಕ್ತರು, ಪ್ರತಿದಿನ ಪ್ರಾತಃಕ್ಕಾಲದಲ್ಲಿ ಬೇಗನೇ ಎದ್ದು ಪೂರ್ವ, ಅಥವಾ ಉತ್ತರಾಭಿಮುಖವಾಗಿ ಹಾಸಿಗೆಯ ಮೇಲೆ ಕುಳಿತತುಕೊಂಡು, ತನ್ನ ಎರಡೂ ಹಸ್ತ ( ಅಂಜಲಿ) ನೋಡಿಕೊಳ್ಳುತ್ತ, ಕೆಳಗೆ ತಿಳಿಸಿದ ಮಂತ್ರ ಪಠಣ ಮಾಡಬೇಕು.

**॥ಮಂತ್ರ॥**

ಕರಾಗ್ರೇ ವಸತೇ ಲಕ್ಷ್ಮೀ । ಮಧ್ಯೆ ದೇವಿ ಸರಸ್ವತಿ ।
ಕರಮೂಲೇ ಸ್ಥಿತಾ ಗೌರೀ । ಪ್ರಭಾತೇ ಕರದರ್ಶನಂ ॥

ಎಂದು ಶ್ಲೋಕ ಪಠಿಸಿ, ಮಾರ್ತಾಂಡ ಭೈರವನಿಗೆ ನಮಸ್ಕರಿಸಬೇಕು. ನಂತರ ತನ್ನ ಗುರುಗಳೂ, ಹಾಗೂ ಹಿರಿಯರನ್ನು ಮನಸ್ಸಿನಲ್ಲಿ ಸ್ಮರಿಸಿ ನಮಸ್ಕರಿಸಬೇಕು. ಬಲಗೈಯ್ಯನ್ನು ನೆಲಕ್ಕೆ ಊರಿ, ಮೇಲೇಳಬೇಕು. ನಂತರ ಬಹಿರ್ದೆಸೆಗೆ ಹೋಗಿ ಬಂದು, ಸ್ವಚ್ಛವಾಗಿ ಕೈ ಕಾಲುಮುಖ ತೊಳೆದುಕೊಳ್ಳಬೇಕು. ಹಲ್ಲುಗಳನ್ನು ಉಜ್ಜುವ ಸಲುವಾಗಿ, ಸಾಧ್ಯವಾದರೆ ಉತ್ತರಾಣಿ ಕಡ್ಡಿ, ಅತ್ತಿ, ಆಲ, ಮಾವು, ಹಲಸು, ವೇವು, ನೀರಲ, ಇವುಗಳಲ್ಲಿ ಯಾವುದಾದರೊಂದು ಕಡ್ಡಿಯನ್ನು ಪಯೋಗಿಸುವದು ಹೆಚ್ಚು ಸೂಕ್ತ. ನಂತರ ಪೂರ್ವ ಅಥವಾ ಉತ್ತರ ದಿಕ್ಕಿಗೆ ಮುಖಮಾಡಿಕೊಂಡು ಕುಳಿತು, ಶುದ್ಧ ನೀರಿನಿಂದ ಸ್ನಾನ ಮಾಡಬೇಕು.

**॥ಸ್ನಾನಕ್ಕೆ ಮಂತ್ರ॥**

ಆಪೋೀಹಿಷ್ಠಾ ಮಯೋ ಭುವಃ . ತಾನ ಊರ್ಜೇ ದಧಾತನ ।
ಮೆಹರಣಾಯ ಚಕ್ಷಸೆ. ಯೋವಃ । ಶಿವತಮೋರಸಃ ।
ತಸ್ಯ ಭಾಜಯತೇ ಹನಃ। ಉಶತೀರಿವ ಮಾತರಃ ।
ತಸ್ಮಾ ಆರಂಗ ಮಾಮವೋ । ಯಸ್ಯಕ್ಷಯಾಯ ಜಿನ್ವತಃ ।
ಆಪೋಜಿನ ಯಥಾಚನಃ ॥

ಈ ಮಂತ್ರವನ್ನುಚ್ಚರಿಸುತ್ತ ಸ್ನಾನ ಮಾಡಬೇಕು. ನಂತರ ಮಡಿ ಬಟ್ಟೆಯನ್ನು ಧಾರಣ ಮಾಡಬೇಕು.

## ॥ಅದಕ್ಕೆ ಮಂತ್ರ॥

**ಪವಿತ್ರಂ ನಿರ್ಮಲಂ ಶುದ್ಧಂ । ಲಜ್ಞಾಯ ರಕ್ಷಣಂ ಪರಂ ।**
**ಶೀತವಾತೋಷ್ಣ ಸಂಹಾರಂ । ಸುವಸ್ತ್ರಂ ಧಾರಯಾಮ್ಯಹಂ॥**

ಈ ಮಂತ್ರವನ್ನು ಚ್ಚರಿಸುತ್ತ ಮಡಿಬಟ್ಟೆ ಧಾರಣ ಮಾಡಿಕೊಳ್ಳಬೇಕು.
ನಂತರ, ಪೂರ್ವ ಅಥವಾ ಉತ್ತರಕ್ಕೆ ಅಭಿಮುಖವಾಗಿ ಕೂಡ್ರಲು ಬರುವಂತೆ, ಕೃಷ್ಣಾಜಿನ, ಅಥವಾ ಬಿಳಿಯ ಕಂಬಳಿಯನ್ನು ಹಾಸಿ, ಗದ್ದುಗೆ ಮಾಡಿರಬೇಕು, ಮಡಿನೀರಿನಿಂದ, ಪೂಜಾ ದ್ರವ್ಯಗಳಿಗೂ ಕೂಡ್ರುವ ಸ್ಥಳಕ್ಕೂ ಚಿಮುಕಿಸುತ್ತ ಮಂತ್ರ ।

**ಪೃಥ್ವೀ ತ್ವಯಾ ಧೃತಾಲೋಕಾ । ದೇವಿತ್ವಂ ವಿಷ್ಣುನಾಧೃತಾ ।**
**ತ್ವಂಚ ಧಾರಯ ಮಾಂ ದೇವೀ । ಪವಿತ್ರಂ ಕುರುಚಾಸನಂ॥**

ಎಂದು ಪೂಜಾ ಸಲಕರಣೆಗಳಿಗೆಲ್ಲ ನೀರು ಚಿಮುಕಿಸಿ, ಪದ್ಮಾಸನ ಹಾಕಿ, ನೀಟಾಗಿ ಕುಳಿತುಕೊಳ್ಳಬೇಕು.

## ॥ ಅದಕ್ಕೆ ಮಂತ್ರ ॥

**ಓಂ ಅಪಸರ್ಪಂತು ಏ ಭೂತಾ। ಏ ಭೂತಾ ಬೂಮಿ ಸಂಸ್ಥಿತಾ ।**
**ಏಭೂತಾ ವಿಘ್ನಕರ್ತಾರ ಸ್ತೇನಸ್ಯಂತು ಶಿವಾಜ್ಞಯಾ ॥**

ಹೀಗೆ ಪೂಜೆಗೆ ಕೂಡ್ರುವಾಗ ಮೇಲಿನ ಮಂತ್ರ ಉಚ್ಚರಿಸುತ್ತ ನೀರು ಚಿಮುಕಿಸಿಯೇ ಕೂಡ್ರಬೇಕು! ''ಇಲ್ಲವಾದರೆ, ಪೂಜೆ, ತಪಸ್ಸು, ಆರಾಧನೆಗಳ ಫಲವನ್ನು ರಾಕ್ಷಸರು ಅಪಹರಿಸುತ್ತಾರೆಂದು'' ಅನುಭಾವಿಗಳು ಹೇಳುತ್ತಾರೆ.
ನಂತರ ಮಣೆಯಮೇಲೆ ಮಾಲತೀಶನ ಪೋಟೋವನ್ನಾಗಲೀ, ಅಥವಾ ಈ ಪುಸ್ತಕವನ್ನಾಗಲಲಿ ಸ್ಥಾಪಿಸಿ, ಆಚಮ್ಯ, ಪ್ರಾಣಾಯಾಮ, ಸಂಕಲ್ಪಾದಿಗಳನ್ನು ಉಚ್ಚರಿಸಬೇಕು.
ನಂತರ ವಿಘ್ನೇಶ್ವರನ ಪೂಜೆಯೊಂದಿಗೆ, ಪಾರಾಯಣ ಗ್ರಂಥವನ್ನು ಪೂಜಿಸಬೇಕು!
ಒಂದು ಕೊಬ್ಬರಿ ಬಟ್ಟಲದಲ್ಲಿ ಅಡಿಕೇ ಬೆಟ್ಟೆಯನ್ನಿಟ್ಟು, ಅದನ್ನೇ ಗಣಪತಿಯೆಂಬ ಪರಿಶುದ್ಧ ಭಾವನೆಯಿಂದ ಪೂಜಿಸತಕ್ಕದ್ದು.

## ॥ ಗಣಪತಿ ಪೂಜಾ ಮಂತ್ರ. ॥

ಸುಮುಖಶ್ಚೈಕ ದಂತಶ್ಚ. ಕಪಿಲೋ ಗಜಕರ್ಣಕಃ।
ಲಂಬೋದರಶ್ಚ ವಿಕಟೋ । ವಿಘ್ನನ ನಾಶೋ ಗಣಾಧಿಪಃ।

ಧೂಮಕೇತುರ್ಗಣಾಧ್ಯಕ್ಷೋ ಬಾಲಚಂದ್ರೋ ಗಜಾನನಃ ।
ದ್ವಾದಶೈತಾನಿ ನಾಮಾನಿ । ಯಃ ಪಠೇತ್ ಶೃಣುಯಾದಪಿ ।
ವಿದ್ಯಾರಂಭೇ ವಿವಾಹೇಚ । ಪ್ರವೇಶೇ ನಿರ್ಗಮೇ ತಥಾ।
ಸಂಗ್ರಾಮೇ ಸಂಕಟೇಚೈವ । ವಿಘ್ನಸ್ತಸ್ಯ ನಜಾಯತೇ ॥
ಶ್ರೀಮನ್ ಮಹಾಗಣಾಧಿಪತಯೇನಮಃ ॥ ಷೋಡಶೋಪಚಾರ ಪೂಜಾಂ ಸಮರ್ಪಯಾಮಿ ॥
ಅಕ್ಷತೆ ಏರಿಸಿ, ಪೂಜೆಮಾಡಿ, ನೀರು ಬಿಡಬೇಕು

॥ ಪ್ರಾರ್ಥನಾ ॥

ವಕ್ರತುಂಡ ಮಹಾಕಾಯ । ಸೂರ್ಯಕೋಟಿ ಸಮಪ್ರಭ ।
ನಿರ್ವಿಘ್ನಂ ಕುರುಮೇ ದೇವ। ಪೂಜಾಕಾರ್ಯೇಷು ಸರ್ವದಾ ॥
ಇತಿ ಪ್ರಾರ್ಥನಾಂ ಸಮರ್ಪಯಾಮಿ ॥ (ನೀರು ಬಿಡಬೇಕು)
ಅನೇನ ಪೂಜಾ ವಿಧಾನೇನ ಶ್ರೀಮನ್ ಮಹಾ ಗಣಪತಿಃ ಸಂಪ್ರೀತೋಭವತು ॥
ಮತ್ತೊಮ್ಮೆ ಅರ್ಘ್ಯ ಬಿಟ್ಟು ಮಾಲತೀಶನ ಪೂಜೆ ಪ್ರಾರಂಭಿಸತಕ್ಕದ್ದು ।
ಆಗಮಾರ್ಥಂತು ದೇವಾನಾಂ। ಗಮನಾರ್ಥಂತು ರಾಕ್ಷಸಾನ್ ।
ಕುರ್ವೆ ಘಂಟಾರವಂ ತತ್ರ ದೇವತಾಹ್ವಾನ ಲಾಂಛನಂ ।
(ಗಂಟೆ ಬಾರಿಸಬೇಕು)
ಶ್ರೀ ಮ್ಹಾಲಸಾ ಮಾರ್ತಾಂಡ ದೇವತಾಭ್ಯೋ ನಮಃ ॥
ಆಹ್ವಾನಂ ಸಮರ್ಪಯಾಮಿ ॥ (ಅಕ್ಷತೆ ಹಾಕಬೇಕು)
ಆಸನಂ ಸಮರ್ಪಯಾಮಿ ॥ (ಅಕ್ಷತೆ ಹಾಕಬೇಕು)
ಪಾದಯೋಃ ಪಾದ್ಯಂ ಸಪರ್ಮಯಾಮಿ ॥ (ನೀರು ಬಿಡಬೇಕು)
ಅರ್ಘ್ಯಂ ಸಮರ್ಪಯಾಮಿ (ನೀರು ಬಿಡಬೇಕು)
ಆಚಮನೀಯಂ ಸಮರ್ಪಯಾಮಿ ॥ (ನೀರು ಬಿಡಬೇಕು)

॥ ಸ್ನಾನಂ ॥

ಗಂಗಾ ಸರಸ್ವತಿ ರೇವಾ । ಕಾವೇರಿ ನರ್ಮದಾ ಜಲೈಃ ।
ಸ್ನಾಪಿತಾಮಿ ಮಮಸ್ವಾಮೀ । ತಥಾ ಶಾಂತಿಃ ಕುರುಷ್ವಮೇ

ಎದು ಉಚ್ಚರುಸುತ್ತ ಹೂವಿನಲ್ಲಿ ಮಡಿನೀರನ್ನೆದ್ದಿ, ಫೋಟೋ, ಅಥವಾ ಪುಸ್ತಕಕ್ಕೆ ಸಿಂಪಡಿಸ ಬೇಕು.

॥ ಗೆಜ್ಜೆ ವಸ್ತ್ರ ॥

ತಪ್ತಕಾಂಚನ ವರ್ಣಭಿಃ । ಅನರ್ಘ್ಯ ಮೃದುತೀ ಶುಭೆ ॥
ಪಾಹಿಮಾಂ ಕೃಪಯಾದೇವ । ವಾಸಸೀ ಪ್ರತಿಗೃಹ್ಯತಾಂ ॥

॥ ಗಂಧ - ಭಂಡಾರ ಏರಿಸಲು ಮಂತ್ರ ॥

ಗಂಧದ್ವಾರಾ ದುರಾದರ್ಷಾಂ । ನಿತ್ಯ ಪುಷ್ಪಾಂ ಕರೀಷಿಣೀಂ।
ಈಶ್ವರ ಸರ್ವ ಭೂತಾನಾಂ । ತಾಮಿ ಹೋಪ ಸ್ವಯೇ ಶ್ರೀಯಂ ॥

॥ ಪತ್ರಿ ಪುಷ್ಪಗಳ ಪೂಜೆ ॥

ಸುಗಂಧಿನೀ ಸುಪುಷ್ಪಾಣೀ । ಪತ್ರಾಣಾಂಚೈಕ ವಿಂಶತಿ ।
ಮಯಾಹೃತಾನೀ ಪೂಜಾರ್ಥಂ ಗೃಹಾಣ ಪರಮೇಶ್ವರ ॥
ಹೂವು ಪತ್ರಿಗಳನ್ನು ಏರಿಸತಕ್ಕದ್ದು

॥ ಮಂತ್ರಾಕ್ಷತೆ ॥

ಅಕ್ಷತಾಸ್ತಂಡುಲಾಃ ಶುಭ್ರಾಃ । ಕುಂಕುಮೇನ ವಿರಾಜಿತಾಃ ।
ಮಯಾ ನಿವೇದಿತಾ ಭಕ್ತ್ಯಾ। ಗೃಹಾಣ ಸರ್ವೇಶ್ವರ॥
( ಅಕ್ಷತೆಗಳನ್ನು ಏರಿಸತಕ್ಕದ್ದು)

॥ ಧೂಪ ॥

ಸಾಜ್ಯಂ ತ್ರಿವರ್ತಿ ಸಂಯುಕ್ತಂ । ವಹ್ನಿನಾ ಯೋಜಿತಂ ಮಯಾ ।
ಗ್ರಹಾಣ ಮಂಗಲಂ ದೀಪಂ । ವರದಾ ಪರಮೇಶ್ವರ ॥
( ತುಪ್ಪದ ದೀಪವನ್ನು ಹಚ್ಚಿ ಗಂಟೆ ಬಾರಿಸುತ್ತ ಬೆಳಗ ಬೇಕು)
ಆಗಮಾರ್ಥಂತು ದೇವಾನಾಂ । ಗಮಾನಾರ್ಥಂತು ರಾಕ್ಷಸಾನ್ ।
ಕುರ್ವೇ ಘಂಟಾರವಂ ತತ್ರ। ದೇವತಾಹ್ವಾನ ಲಾಂಛನಂ ॥

॥ ನೈವೇದ್ಯ ॥

ನೈವೇದ್ಯಂ ಸಫಲಂಚೈವ . ಭಕ್ಷ್ಯ ಭೋಗ್ಯಶ್ಚ ಸಂಯುತಂ ।
ದಧ್ಯಾ ಘೃತೇನ ಸಂಯುಕ್ತಂ । ಗೃಹಾಣ ಪರಮೇಶ್ವರ ॥

( ಗಾಯತ್ರಿ ಮಂತ್ರೋಪಚಾರದೊಂದಿಗೆ ನೈವೇದ್ಯವನ್ನು ಸಮರ್ಪಿಸ ಬೇಕು)

॥ ತಾಂಬೂಲ ॥

ಕರ್ಪೂರರ್ಕೈಲಾಲವಂಗಾದಿ । ತಾಂಬೂಲ ದಲ ಸಂಯುತಂ।
ಪೂಗೀ ಫಲಾದಿ ಸಂಯುಕ್ತಮ್ । ತಾಂಬೂಲಂ ಪ್ರತಿ ಗೃಹತಾಂ ॥

( ಎಲೆ ಅಡಿಕೆ, ಅಷ್ಟ ತಾಂಬೂಲಗಳ ನೈವೇಧ್ಯ ಸಮರ್ಪಿಸಬೇಕು )

॥ ಮಂತ್ರಪುಷ್ಪ ॥

ಓಂ ತತ್ಪುರುಷಾಯ ವಿದ್ಮಹೇ । ಮಹಾದೇವಾಯಧೀ ಮಹೆ।
ತನ್ನೋ ರುದ್ರಃ ಪ್ರಚೋದಯಾತ್ ॥ ಇತಿ ಮ್ಹಾಲಸಾ ಮಾರ್ತಾಂಡ ದೇವತಾಭ್ಯೋ ನಮಃ ।
ಮಂತ್ರಪುಷ್ಪಂ ಸಮರ್ಪ ಯಾಮಿ ॥

( ಎಂದು ಉಚ್ಚರಿಸುತ್ತ ಪ್ರದಕ್ಷಿಣೆ ನಮಸ್ಕಾರ ಹಾಕತ್ಕದ್ದು )

## ॥ ಆರುತಿ-ಹಾಡು ॥

# ಶುಭಂ

ಶ್ರೀ ಮಾಲತೀಶಾರ್ಪಣ ಮಸ್ತು (ಲೇಖಕ)

ಶ್ರೀ ಸುಮುಖ ಹೇರಂಬ ಗಜಮುಖ । ಪಾಶ ಅಂಕುಶಧಾರಿ ವಿಘ್ನವಿ।
ನಾಶನೆನಗೀಯುವದು ಮತಿ ಮಲ್ಲಾರಿ ಚರಿತೆಯನು ॥
ದೋಷ ಕಾಣದ ರೀತಿಯಲಿ ಬ । ಣ್ಣೈಸಿ ಪೇಳುವ ಪರಿಯ ತೋರ್ ಕಪಿ ।
ಲೇಶ ನಿನ್ನಡಿದಾವರೆಯ ಕಂಪಿರಿಸು ಕವನದೊಳು ॥ ೧॥

ಕರಿವದನ ಕರುಣಾಳು ಕರುಣಿಸು । ಬರೆಸು ಕುಲದೇವರ ಚರಿತ್ರೆಯ।
ಸುರಿಸು ಸುಧೆ ಸಾಹಿತ್ಯ ಲೆಕ್ಕಣಿಯೊಳಗೆ ಅವತರಿಸು ॥
ಪರಿಹರಿಸು ಪರಿಪರಿಯ ಕಂಟಕ । ಸರಿಸಿ ದೂರೀ ಕರಿಸು ದಾಸನ ।
ಹರಸು ವೇದ ವ್ಯಾಸ ಶಕ್ತಿಯ ಮಸ್ತಕಕ್ಕಿಳಿಸು ॥ ೨॥

ಶಬ್ದಾರ್ಥ - ಸುಮುಖ, ಹೇರಂಬ, ಗಜಮುಖ, ಪಾಶ ಅಂಕುಶಧಾರಿ, ವಿಘ್ನ ವಿನಾಶ, ಕಪಿಲ, ಕರಿವದನ, ಇವೆಲ್ಲಾ ಗಣಪತಿಯ ಹೆಸರುಗಳಾಗಿವೆ. ಮತಿ = ಬುದ್ಧಿ; ಈಯು = ಕೊಡು; ವಿಘ್ನ = ತೊಂದರೆ; ಬಣ್ಣೈಸಿಪೇಳು = ಬಣ್ಣಿಸೀಹೇಳು; ಮಲ್ಲಾರಿ = ಮಲ್ಲದೈತ್ಯನನ್ನು ಕೊಂದ ಮಾಲತೀಶ; ಪರಿ = ರೀತಿ; ತೋರ್=ತೋರಿಸು; ಅಡಿದಾವರೆ = ಪಾದಕಮಲ ; ಕಂಪು = ಮಾಧುರ್ಯ; ಕವನ = ಹಾಡು; ಅವತರಿಸು = ಇಳಿ; ಕಂಟಕ = ವಿಘ್ನ; ಹರಸು = ಆಶೀರ್ವದಿಸು; ವೇದವ್ಯಾಸ = ವೇದ-ಬರೆದ ಯತಿ; ಮಸ್ತಕ = ತಲೆ (ಹಣೆ) ಕುಲದೇವರು = ಮನೆಯ ದೇವರು;

ಭಾವಾರ್ಥ :- ಈ ಎರಡೂ ನುಡಿಗಳಲ್ಲಿ ಕವಿಯು ತನ್ನ ಕುಲದೇವರಾದಂಥ ಮ್ಹಾಲಸಾ ಮಾರ್ತಾಂಡ ಭೈರವನ ಚರಿತ್ರೆಯನ್ನು ಬರೆಯುವದಕ್ಕೆ ತನಗೆ ನಿಷ್ಕಳಂಕ ಜ್ಞಾನ ನೀಡಿ ಆಶೀರ್ವದಿಸಬೇಕೆಂದು, ಗಣಪತಿಯನ್ನು ಅನನ್ಯ ಭಕ್ತಿಯಿಂದ ಸ್ತೋತ್ರ ಮಾಡಿ ಪ್ರಾರ್ಥಿಸಿಕೊಂಡಿದ್ದಾನೆ. ಸಾಹಿತ್ಯದ ಅಮೃತವನ್ನೇ ತನ್ನ ಲೆಕ್ಕಣಿಕೆಗೆ ಬರೆಯುವ ಸಾಧನಮಾಡಿ, ಈ ಕಾವ್ಯದ ಕಂಪು, ಇಂಪು, ಸೊಂಪುಗಳನ್ನು ಹೆಚ್ಚಿಸಬೇಕೆಂದೂ, ವೇದ ವ್ಯಾಸರಂಥ ಅಮೋಘ ಬುದ್ಧಿ ಶಕ್ತಿಯನ್ನು ತನಗಿತ್ತು, ಈ ಕಾವ್ಯವನ್ನು ರಸಮಯವನ್ನಾಗಿ ಮಾಡಬೇಕೆಂದೂ, ಕಾವ್ಯ ರಚನಾ ಸಮಯದಲ್ಲಿ ಯಾವದೇ ರೀತಿಯ ತೊಂದರೆಗಳು ಬಾರದಂತೆ ಕಾಪಾಡಬೇಕೆಂದೂ, ವಿಘ್ನ ನಾಶಕನಾದ ಆ ಗಣಪತಿಯಲ್ಲಿ ''ದಾಸೋಹಂ'' ಎಂಬ ಕಿಂಕರತ್ವವನ್ನು ಪ್ರಕಟಿಸಿ, ಈ ಮಲ್ಲಾರಿ ಚರಿತ್ರೆಯೆಂಬ ಮಹಾ ಕಾವ್ಯವನ್ನು ಬರೆಯೋದಕ್ಕೆ, ಉದ್ಯುಕ್ತನಾಗ್ತಾ ಇದ್ದಾನೆ.

ವಾಣಿ ವೀಣಾಪಾಣಿ ವಿದ್ಯಾ। ರಾಣಿ ರಾಜತ್ ಬುದ್ಧಿ ದಾಯಿನಿ ।
ಕಾಣೆ ನಿನ್ನನ್ನುಳಿದು ಕರುಣಾಳುಗಳ ಮಮಜನನಿ ॥
ಜಾಣೆ ನೀ ಮೂಲೋಕ ವಂದಿತೆ। ಜಾಣರಾಮನ ಮೆಚ್ಚುವಂದದಿ।
ವಾಣಿ ನೀಡೌ ಶುಭದ ಮತಿಯನು ಕಾವ್ಯ ರಚಿಸಲ್ಕೆ॥ ೩॥

ಒಡಲ ಕಂದನು ತೊದಲು ನುಡಿದರೆ । ನುಡಿಯ ನಾಲಿಸಿ ಅಂಬೆ ನಗುವೋಲ್।
ಸಡಗರದಲೀ ಗಡಣೆಯಡಿಯೋಳ್ ಧರಿಪುದೌ ಮಾತೆ ॥
ಜಡಿಧಿಯಿದು ಮಲ್ಲಾರಿ ಮಹಿಮೆಯು। ಜಡಮತಿಯು ನಾನೇನು ಬಣ್ಣಿಪೆ।
ಮೃಡನರಸಿ ಮೈದಳೆದು ನುಡಿಸೌ ನನ್ನ ರಸನೆಯಲಿ ।೪॥

ಶಬ್ದಾರ್ಥ - ವಾಣಿ, ವೀಣಾಪಾಣಿ, ವಿದ್ಯಾರಾಣಿ, ಬುದ್ಧಿದಾಯಿನಿ, ಇವೆಲ್ಲ ಸರಸ್ವತಿಯ ನಾಮಗಳು; ಮಮ = ನನ್ನ; ಧ್ಯಾನಿಪೇಂ = ಧ್ಯಾನಿಸುವೆ; ಹೃದ್ಬಾನುಲಿ = ಹೃದಯವೆಂಬ ಆಕಾಶ ವಾಣಿ; ಅಂಬೆ = ತಾಯಿ; ಗಡಣೆ = ಪದ್ಯ, (ಮಾಲೆ) ಅಡಿ = ಪಾದ; ಸಡಗರ = ಸಂಭ್ರಮ; ಜಡಧಿ = ಸಮುದ್ರ; ಮೃಡನರಸಿ = ಗೌರಿ; ರಸನೆ = ನಾಲಿಗೆ, ಮೈದಳೆದು = ಒಳಹೊಕ್ಕು; ನುಡಿಸು = ಮಾತಾಡಿಸು.

**ಭಾವಾರ್ಥ :--** ಈ ಎರಡೂ ನುಡಿಗಳಲ್ಲಿ ಕವಿಯು ಶಕ್ತಿ ಸ್ವರೂಪಿಯಾದ ಸರಸ್ವತಿ ಹಾಗೂ ಪಾರ್ವತಿಯರನ್ನು ಸ್ತೋತ್ರ ಮಾಡಿದ್ದಾನೆ. ಶಾರದೆಗೆ ''ಅಮ್ಮಾ! ನಿನ್ನನ್ನುಳಿದು ಕರುಣಾಳುಗಳ ಕಾಣೆ'' ಎಂದು ಅನನ್ಯ ಭಕ್ತಿಯಿಂದ ಭಿನ್ನ ವಿಸಿಕೊಂಡಿದ್ದಾನೆ. ತನ್ನ ಹೃದಯಾಕಾಶದಲ್ಲಿ ನೀನೇ ಅಂತರ್ಯಾಮಿಯಾಗಿ ಆಕಾಶವಾಣಿಯಂತೆ ನುಡಿಸಿ '' ಈ ಕವನವನ್ನು ಸಮರ್ಥ ಕಾವ್ಯವಾಗುವಂತೆ ನನ್ನಿಂದ ಬರಿಸು !'' ಎಂಬುದಾಗಿ ಪ್ರಾರ್ಥಿಸಿ ಕೊಳ್ತಾ ಇದ್ದಾನೆ. ಅಲ್ಲದೇ ಗೌರಿಯನ್ನು ಗುರಿತು, '' ಅಮ್ಮಾ! ಹೊಟ್ಟೆಯಲ್ಲಿ ಹುಟ್ಟಿದ ಮಗುವು ತೊದಲು ತೊದಲಾಗಿ ಮಾತಾಡಿದರೂ ಸಹಿತ, ತಾಯಿಯು ಯಾವ ರೀತಿಯಿಂದ ಸಡಗರ ಪಡ್ತಾಳೋ, ಅದೇ ತೆರನಾಗಿ, ನಾನೂ ನಿನ್ನ ಮಗನೇ ಆದ್ದರಿಂದಾ ಈ ಕೃತಿ ಕುಸುಮವನ್ನು ನಿನ್ನ ಅಡಿದಾವರೆಗಳಲ್ಲಿ ಧರಿಸಿ, ನನ್ನನ್ನು ಉದ್ಧಾರಗೊಳಿಸು !'' ಎಂಬುದಾಗಿ ಕೇಳಿಕೊಳ್ತಾ ಇದ್ದಾನೆ, '' ಯಾಕೆಂದರೆ ಮಲ್ಲಾರಿಯ ಮಹಿಮೆ ಅನ್ನೋದು, ಅಪಾರವಾದ ಸಾಗರವಿದ್ದಂತೆ; ನನ್ನಂಥಾ ಒಬ್ಬ ಪಾಮರ ಕವಿ, ಅದನ್ನು ವರ್ಣಿಸಿ ಹೇಳೋದು ಅಸಾಧ್ಯವೇ ಸರಿ; ಆದರೂ ಸಹಿತ, ನನ್ನ ಬುದ್ಧಿಗೆ ನಿಲುಕಿದಷ್ಟನ್ನು ಮಾತ್ರ ಹೇಳ್ತಾ ಇದ್ದೀನೀ...... ದಯವಿಟ್ಟು ಈ ಕೃತಿ ಕುಸುಮಕ್ಕೆ ನಿನ್ನ ಅಡಿದಾವರೆಯಲ್ಲಿ ಆಶ್ರಯ ನೀಡೂಽ'' ಹಾಗೂ ನೀನೇ ನನ್ನ ನಾಲಿಗೆಯಲ್ಲಿ ಕುಳಿತು ನುಡಿಸಿ, ಈ ಕಾವ್ಯವನ್ನು ಸುಂದರಗೊಳಿಸು ! ಅಂತಾ ಗೌರಿಯಲ್ಲಿ ಪ್ರಾರ್ಥನೆ ಮಾಡಿಕೊಳ್ತಾ ಇದ್ದಾನೆ ಈ ಕಾವ್ಯ ರಚಿಸಿದ ಕವಿ.

**ಗುರು ಚಿದಂಬರ ಶಿವಚಿದಂಬರ । ಹರ ಚಿದಂಬರ ಶ್ರೀ ಚಿದಂಬರ ।**
**ಕರೆವ ಭಕ್ತೋದ್ಧಾರ ತ್ರಿಗುಣಾ ತೀತ ಸಾಕಾರಾ ॥**
**ಹರಿಹರಾದ್ವೈತವನು ಬಿಂಬಿಸೆ । ಧರೆಗಿಳಿದ ಆರಾಧ್ಯ ಭಾಸ್ಕರ ।**
**ವರದ ಹಸ್ತವ ನಿರಿಸು ಕಂದನ ಕೃತಿಗೆ ಗುರುವರ್ಯಾ ॥ ೩॥**

ಶಬ್ದಾರ್ಥ - ಭಾಸ್ಕರ = ಸೂರ್ಯ; ತ್ರಿಗುಣಾತೀತ = ಪರಬ್ರಹ್ಮ.

**ಭಾವಾರ್ಥ -** ಕವಿಯು ಇಲ್ಲಿ ತನ್ನ ಆರಾಧ್ಯದೇವತೆಯಾದ ಚಿದಂಬರನ ಸ್ತೋತ್ರ ಮಾಡುತ್ತಾ ತನ್ನಕೃತಿಗೆ ವರದ ಹಸ್ತ ಇಡುವಂತೆ ಪ್ರಾರ್ಥಿಸಿ ಕೊಳ್ತಾ ಇದ್ದಾನೆ.

**ನಮ್ಮ ಕುಲದೈವತದ ಪೆಸರೆ । ನಿಮ್ಮದಾಗಿದೆ ಗುರುವರೇಣ್ಯರೆ ।**
**ಬೊಮ್ಮಗ್ಯಾನವ ಬೆಸೆದ ಶ್ರೀ ಮಲ್ಲಾರಿ ದೀಕ್ಷಿತರೆ ॥**
**ನಿಮ್ಮ ಕುರುಪೇ ಕುಲದ ದೈವದಿ। ಬಿಮ್ಮಿಸಿರುವದ ಕಂಡು ರಚಿಸಿದೆ ।**
**ನಿಮ್ಮ ಹರಕೆಯದಿರಲಿ ಗುರುವರ ರಮ್ಯ ವೀ ಕೃತಿಗೆ ॥ ೬॥**

ಶಬ್ದಾರ್ಥ- ಪೆಸರು = ಹೆಸರು ; ಗುರುವರೇಣ್ಯ = ಶ್ರೇಷ್ಠ ಗುರು; ಮೊಮ್ಮಗ್ಯಾನ = ಬ್ರಹ್ಮಜ್ಞಾನ. ಬೆಸೆದ = ಹೇಳಿದ;
ಕುರುಪು = ಕುರುಹು; ಬಿಮ್ಮಿಸು =ಬಿಂಬಿಸು; ರಮ್ಯ = ಶೋಭೆ.

**ಭಾವಾರ್ಥ-** ಕವಿಯು ಈ ನುಡಿಯಲ್ಲಿ ತನಗೆ ಬ್ರಹ್ಮಜ್ಞಾನವನ್ನು ಬೋಧಿಸಿದ ಮಲ್ಲಾರಿ ದೀಕ್ಷಿತರನ್ನು ಪ್ರಾರ್ಥಿಸಿಕೊಂಡಿದ್ದಾನೆ. ಗುರುನಾಥಾ! ನಿಮ್ಮ ಹೆಸರೇ ನನ್ನ ಕುಲ ದೈವದ್ದಾಗಿರುವದರಿಂದಲೂ; ನಿಮ್ಮ ಚೈತನ್ಯವನ್ನೇ ಆ ಕುಲಸ್ವಾಮಿಯಲ್ಲಿ ಕಂಡದ್ದರಿಂದಲೂ, ನಾನು ಈ ಕೃತಿ ರಚನೆಗೆ ಪ್ರಾರಂಭಿಸುತ್ತಿದ್ದೇನೆ. ಇದಕ್ಕೆ ನಿಮ್ಮ ಆಶೀರ್ವಾದವು ಶೋಭಾಯ ಮಾನವಾಗಿರಲೀ'' ಎಂದು ಪ್ರಾರ್ಥಿಸಿ ಕೊಳ್ತಾ ಇದ್ದಾನೆ.

**ಸಲಿಲ ತುಂಗೆಯ ಬಲದ ತಟದಲಿ । ನೆಲಿಸಿ ಭಕ್ತೋದ್ಧಾರ ಗೈಯ್ಯುತ ।**
**ತುಲಸಿ ಬನದೋಳ್ ಯೋಗ ನಿದ್ರೆಯೊಳಿರುವ ಗುರು ಮೂರ್ತಿ ॥**
**ಅಳಿಲು ರಾಮನ ಸೇವೆ ಗೈ ವೋಲ್। ಉಲಿಯಲಾಸಿಪೆ ನೀಚರಿತ್ರೆಯ।**
**ಒಲಿದು ಆಶೀರ್ವದಿಸು ವಂದಿಪೆ ರಾಘವೇಂದ್ರ ಯತಿ ॥ ೭॥**

**ಭಾವಾರ್ಥ-** '' ತುಂಗಾನದಿಯ ಬಲ ದಂಡೆಯ ಮೇಲೆ ತುಳಸೀ ವನದಲ್ಲಿ ಯೋಗ ನಿದ್ರೆಯಲ್ಲಿದ್ದುಕೊಂಡು, ಭಕ್ತೋದ್ಧಾರ ಗೈಯ್ಯುತ್ತಿರುವ ರಾಘವೇಂದ್ರ ಗುರು ಮೂರ್ತಿಯೇ! ಕ್ಷುದ್ರ ಪ್ರಾಣಿಯಾದ ಅಳಿಲು, ರಾಮನ ಸೇವೆ ಮಾಡಲೆತ್ನಿಸಿದಂತೆ, ನಾನು ಮಲ್ಲಾರಿ ಚರಿತ್ರೆಯೆಂಬ ಈ ಮಹಾಕಾವ್ಯ ರಚಿಸಲು ದ್ಯುಕ್ತನಾಗಿದ್ದೇನೆ ಇದಕ್ಕೆ ನಿನ್ನ ಆಶೀರ್ವಾದ ವಿರಲಿ!'' ಎಂಬುದಾಗಿ ಕವಿ ಪ್ರಾರ್ಥನೆ ಮಾಡಿಕೊಳ್ತಾ ಇದ್ದಾನೆ.

**ರಾಮ ರಾಮಾ ರಾಮ ಲಿಂಗಾ । ರಾಮ ಶಂಕರ ರಾಮ ರಾಜಾ।**
**ರಾಮ ನಾಮವ ಜಪಿಸಿ ಪ್ರಾರಂಭಿಸುವೆ ನೀ ಕಾವ್ಯಾ ॥**
**ನೇಮದಿಂದಲಿ ನಿನ್ನ ಸೇವೆಯ । ಪಾಮರನು ನಾನೇನು ಗೈವೇಂ।**
**ಈ ಮಹಾ ಶರಧಿಯನು ದಾಂಟಿಸು ಸೋಮಶೇಖರನೇ ॥ ೮॥**

**ಭಾವಾರ್ಥ-** ಕವಿಯು ರಾಮನಾಮ ಜಪದೊಂದಿಗೆ ಈ ಕಾವ್ಯ ಪ್ರಾರಂಭಿಸುತ್ತಾನೆ, ಮತ್ತೂ, "ಪಾಮರನಾದ ನನ್ನಿಂದ ಸರಿಯಾಗಿ ನಿನ್ನ ಸೇವೆ ಮಾಡುವದಾಗದಿದ್ದರೂ, ಕರುಣಾಳುವಾದ ನೀನು ರಕ್ಷಣೆ ನೀಡಬೇಕೆಂದು" ಸೋಮಶೇಖರನಲ್ಲಿ ಪ್ರಾರ್ಥನೆ ಮಾಡಿಕೊಳ್ತಾ ಇದ್ದಾನೆ.

**ಮಲ್ಲ ಮಣಿಕಾಸುರರ ಕೊಲ್ಲಲು । ಬಲ್ಲಿದಾಶ್ವದ ಬೆನ್ನ ನೇರುತ ।**
**ಬಿಲ್ಲ ಝೇಂಕರಿಸುತ್ತ ಧರಣಿಗೆ ಇಳಿದ ಮಾರ್ತಾಂಡ ॥**
**ಫಲ್ಲಣದಿ ಸಬಳವನು ಪಿಡಿಯತೆ । ಸಲ್ಲುತಿಹಳೀ ಮಾತೆ ಮ್ಹಾಲಸೆ ।**
**ಲಲ್ಲೆಯಿರಿಸಿರಿ ಸುತಗೆ ಲಾಘವನಿತ್ತು ಹರಸುತ್ತ ॥ ೯॥**

**ಶಬ್ದಾರ್ಥ -** ಬಲ್ಲಿದ = ಬಲವಾದ; ಅಶ್ವ = ಕುದುರೆ; ಮಾರ್ತಾಂಡ = ಸೂರ್ಯ; ಮ್ಹಾಲಸೆ = ಗಂಗಿಮಾಳವ್ವ.

**ಭಾವಾರ್ಥ-** ಮಲ್ಲಾಸುರ ಮತ್ತು ಮಣಿಕಾಸುರರನ್ನು ಕೊಲ್ಲುವದಕ್ಕಾಗಿ ಬಲವಾದ ಕುದುರೆಯ ಬೆನ್ನ ಮೇಲೇರಿಕೊಂಡು, ಬಲವಾದ ಶಿವಧನುಸ್ಸನ್ನು ಝೇಂಕರಿಸುತ್ತ ನೀನು ಭೂಮಿಗೆ ಇಳಿದು ಬಂದಿ! ನಿನ್ನ ಜೊತೆಯಲ್ಲಿಯೇ ಕೈಯ್ಯಲ್ಲಿ ಭರ್ಚಿಯನ್ನು ಹಿಡಿದು ಕೊಂಡು ನನ್ನ ತಾಯಿಯೆನಿಸುವ ಗಂಗೆ ಮಾಳವ್ವನು ಶೋಭಿಸುತ್ತಿರುವಳು. ನೀವಿಬ್ಬರೂ ಕಂದನಾದ ನನ್ನ ಮೇಲೆ ಕೃಪೆದೋರಿ ಈ ಕೃತಿ ರಚನೆಗೆ ಪ್ರೋತ್ಸಾಹ ನೀಡಿ ಹರಸಬೇಕು! ಎಂಬುದಾಗಿ ಕವಿಯು ಈ ನುಡಿಯಲ್ಲಿ ಮ್ಹಾಲಸಾ ಮಾರ್ತಾಂಡರನ್ನು ಪ್ರಾರ್ಥಿಸುತ್ತಿದ್ದಾನೆ.

ಯಂತ್ರದಂತಿದು ಎನ್ನ ಕಾಯವು । ಯಂತ್ರ ವಾಹಕ ನೀನು ಒಳಗಿಹೆ ।
ಮಂತ್ರ ನಿನ್ನದು ತೈಲವೆನಿಪುದು ಯಂತ್ರ ಸಾಗಲ್ಕೇ ॥
ತಂತ್ರ ನಿನ್ನದು ಇಂತು ಇರೆ ಸ್ವಾ । ತಂತ್ರ್ಯವೆಲ್ಲಿದೆ ತಂದೆ ನನಗೀ ।
ಯಂತ್ರದಂತರ್ಯಾಮಿ ನೀನೇ ಮಲ್ಲ-ಮಣಿಕಾರೀ ॥ ೧೦॥

**ಶಬ್ದಾರ್ಥ-** ಯಂತ್ರ=ಎಂಜಿನ್; ತೈಲ=ಎಣ್ಣೆ (ಪೆಟ್ರೋಲ್) ಕಾಯ=ದೇಹ; ಮಂತ್ರ=ಜಪ; ಅಂತರ್‌ಯಾಮಿ = ಒಳಗಿರುವ ಪರಮಾತ್ಮ; ಮಲ್ಲ ಮಣಿಕಾರಿ = ಮಾಲತೀಶ.

**ಭಾವಾರ್ಥ-** ''ಈ ನನ್ನ ದೇಹವು ಒಂದು ಯಂತ್ರವಿದ್ದಂತಿದೆ; ಇದನ್ನು ಸಾಗಿಸುವ ನೀನು ಒಳಗಿರುವಿ! ನಿನ್ನ ಮಂತ್ರವೇ ಈ ಯಂತ್ರವು ಮುನ್ನಡೆಯುವದಕ್ಕೆ ಸಾಧನವಾಗಿರುತ್ತದೆ. ಹೀಗೆ ನಿನ್ನ ತಂತ್ರವಿರುವಾಗ ನನಗೆ ಸ್ವಾತಂತ್ರ್ಯವೆಂಬುದು ಇರುವದಾದರೂ ಎಲ್ಲಿ? ಸರ್ವಾಂತರ್‌ಯಾಮಿಯಾಗಿ ಈ ಜಗತ್ತನ್ನಾಳುವ ಮಾಲತೀಶನೇ! ನಾನು, ನನ್ನದು ಎಂಬುವದೆಲ್ಲ ನಿಮಿತ್ತ ಮಾತ್ರವಾಗಿದೆ ನನ್ನ ರೂಪದಿಂದ ನೀನೇ ಈ ಕಾವ್ಯ ಕೃತಿಯನ್ನು ಪೂರ್ಣಗೊಳಿಸು'' ಎಂಬುದಾಗಿ ಕವಿಯು ಈ ನುಡಿಯಲ್ಲಿ ಅನನ್ಯ ಭಕ್ತಿಯಿಂದ ತನ್ನ ಕುಲದೇವರಾದ ಮಲ್ಲಾರಿಯಲ್ಲಿ ಪ್ರಾರ್ಥಿಸಿಕೊಳ್ಳುತ್ತಿದ್ದಾನೆ.

ರವಿಯು ನೀ ರವಿ ರಸ್ಮಿ ನನ್ನದು । ಕವಿಯು ನಾ ಕವಿಶಕ್ತಿ ನಿನ್ನದು।
ಭುವಿಯ ಬೀಂಜಾಂಕುರಕೆ ಕಾರಣ ಗಂಗೆಯವತರಣ ॥
ಅವಘರಿಸು ಅವಧಾರುಮಿದು ಮೇಣ್ । ಅವಗಡಿಸು ಅವಕೃಪೆಯ ಗೈಯ್ಯದೆ।
ಅವಗಡವ ನೀಂ ದೂರಿಸೈ ಮಲ್ಲಾರಿ ಮಣಿಕಾರೀ ।।೧೧।।

**ಶಬ್ದಾರ್ಥ-** ರಸ್ಮಿ=ಕಿರಣ; ರವಿ =ಸೂರ್ಯ; ಬೀಜಾಂಕುರ = ಬೀಜ ಮೊಳಕೆಯೊಡೆಯುವದು ಗಂಗೆಯವತರಣ = ಮಳೆಯಾಗುವದು; ಅವಘಡ = ತೊಂದರೆ; ಅವಧಾರು = ಆಲಿಸು ಅವ ಕೃಪೆಯ ಗೈಯ್ಯದೆ = ಕೃಪಾದೃಷ್ಟಿ ಬೀರಿ; ಮೇಣ್ = ಮತ್ತೂ; ನೀಂ = ನೀನು; ದೂರಿಸು = ದೂರಮಾಡು

**ಭಾವಾರ್ಥ-** " ನೀನು ಸೂರ್ಯನು! ನಾನು ನಿನ್ನ ಕಿರಣ ಮಾತ್ರನಾಗಿರುವೆ. ನಾನು ಕವಿಯು; ಆದರೆ ಕವಿಶಕ್ತಿ ಮಾತ್ರ ನಿನ್ನದೇ ಆಗಿದೆ. ಭೂಮಿಯಲ್ಲಿ ಬೀಜ ಬಿದ್ದಿದ್ದರೂಸಹಿತ ಮಳೆಯಾಗುವವರೆಗೂ ಅದಕ್ಕೆ ಹುಟ್ಟುವ ಚೈತನ್ಯ ವಿರುವದಿಲ್ಲ ಇದನ್ನೆಲ್ಲಾ ಅರಿತ ಸರ್ವಜ್ಞನಾದ ನೀನು, ಈ ಕೃತಿ ರಚನೆಗೆ ಆತಂಕಾದಿಗಳನ್ನು ನಿರ್ಮೂಲನ ಮಾಡಿ ಕೃಪಾದೃಷ್ಟಿ ಬೀರಿ, ನನ್ನನ್ನು ವಿಜಯ ಶಾಲಿಯಾಗುವಂತೆ ಮಾಡೂ" ಅಂತಾ ಕವಿ ಕಳಕಳಿಯಿಂದ ತನ್ನ ಕುಲದೇವರಾದ ಮ್ಹಾಲಾಸಾ ಮಾರ್ತಾಂಡನಲ್ಲಿ ಪ್ರಾರ್ಥನೆ ಮಾಡಿಕೊಳ್ತಾ ಇದ್ದಾನೆ.

**ಮಾನ್ಯ ಶಂಕರ ಮಧ್ವರಾರ್ಯರ । ಶೂನ್ಯ ಸಿಂಹಾಸನದ ಅಲ್ಲಮ ।**
**ಅನ್ಯಮತದೋದ್ಧಾರಕರ ಕೃಪೆ ಇರಲಿ ಈ ಕೃತಿಗೆ ॥**
**ಮಾನ್ಯ ನಾಗುವ ಹಮ್ಮು ಎನಗಿ । ಲ್ಲನ್ಯ ಕವಿಗಳ ಕಿಂಕರನು ನಾಂ ।**
**ಧನ್ಯನಾಗುವದೊಂದೆ ಗುರಿಯಿಂ ಬರೆವೆ ನೀ ಕಾವ್ಯ ॥ ೧೨ ॥**

ಶಬ್ದಾರ್ಥ - ಅನ್ಯ = ಬೇರೆ; ಮಾನ್ಯ = ಮರ್ಯಾದೆವಂತ; ಕಿಂಕರ = ಸೇವಕ; ಧನ್ಯ = ಕೃತಾರ್ಥ.

**ಭಾವಾರ್ಥ-** "ಶೂನ್ಯ ಸಿಂಹಾಸನದ ಅಲ್ಲಮ ಪ್ರಭುಗಳು, ಅದ್ವೈತಾಚಾರ್ಯ ಆದಿಶಂಕರರೂ. ದ್ವೈತ ಪ್ರತಿಪಾದಕ ಮಧ್ವಾಚಾರ್ಯರೂ, ಇತರ ಶಕ್ತಿ ವಿಶಿಷ್ಟಾದ್ವೈತಾದಿ ಆರೂ ಮತಗಳ ಸಂಸ್ಥಾಪಕರ ಶ್ರೀ ರಕ್ಷೆಯು ಈ ನನ್ನ ಕಾವ್ಯಕ್ಕಿರಲೀ" ಎಂದು ಬಯಸಿದ ಕವಿಯು, ತಾನು ಕೀರ್ತಿವಂತನಾಗಬೇಕೆಂಬ ಅಹಂಕಾರದಿಂದ ಈ ಕಾವ್ಯವನ್ನು ಬರೆಯುತ್ತಿಲ್ಲಾ; ನಾನು ಯಾವತ್ತೂ ಕವಿಗಳಲ್ಲಿ ಕಿಂಕರತ್ವ ಭಾವ ಹೊಂದಿದವನಾಗಿದ್ದೇನೆ; ಆದರೆ ಕುಲಸ್ವಾಮಿಯಾದ ಮಲ್ಲಾರಿಚರಿತ್ರೆಯನ್ನು ಬರೆದು ಕೃತ ಕೃತ್ಯನಾಗಬೇಕೆಂಬ ಒಂದೇ ಒಂದು ಭಕ್ತಿಯ ಆಸೆಯಿಂದ ಮಾತ್ರ ಈ ಕವನವನ್ನು ನಿರೂಪಿಸ್ತಾ ಇದ್ದೇನೆ" ಎಂದು ಹೇಳಿ "ತಾನು ಎಲ್ಲರಿಗಿಂತ ಸಣ್ಣವನು" ಎಂಬ ಭಾವವನ್ನು ಈ ನುಡಿಯಲ್ಲಿ ಬಿತ್ತರಿಸ್ತಾ ಇದ್ದಾನೆ.

**ಕಿರಿಯ ಕವಿ ನಾಂ ಕರವ ಮುಗಿಯುವೆ । ಗರುವ ವಿಲ್ಲದೆ ಬುಧರ ಬಳಗಕೆ ।**
**ಜರಿಯದೀ ಕೃತಿ ಪರಿ ಗೃಹಿಸಿ ನೃಪ ಹಂಸ ನ್ಯಾಯದಲಿ ॥**
**ಹಿರಿಯ ಕವಿಗಳ್ ರನ್ನ ಪಂಪರ । ಮೆರೆದ ಸರ್ವಜ್ಞಾದಿ ಕನಕರ ।**
**ಹರಕೆ ಇರಲೀಕೃತಿಗೆ ಕುವರಂವ್ಯಾಸರಿತ್ಯಾದೀ ॥ ೧೩॥**

ಶಬ್ದಾರ್ಥ- ಗರುವ = ಸೊಕ್ಕು; ಬುಧ = ಜ್ಞಾನಿ; ಜರಿ = ತಿರಸ್ಕರಿಸು ; ಪರಿಗೃಹಿಸು = ಸ್ವೀಕರಿಸು; ಕುವರಂವ್ಯಾಸ = ಕುಮಾರವ್ಯಾಸ; ನೃಪಹಂಸನ್ಯಾಯ = ಹಂಸಕ್ಷೀರ ನ್ಯಾಯ.

**ಭಾವಾರ್ಥ-** ಕಿರಿಯ ಕವಿಯಾಥ ನಾನು ನಿಗರ್ವಿಯಾಗಿ ಜ್ಞಾನಿಗಳಿಗೆ ಕೈಮುಗಿದು ಕೇಳಿ ಕೊಳ್ಳುತ್ತೇನೆ. ನನ್ನ ಈ ಕಲಾಕೃತಿಯನ್ನು ದಯವಿಟ್ಟು ಸ್ವೀಕಾರ ಮಾಡಿರಿ. ಹಂಸಕ್ಷೀರ ನ್ಯಾಯದಂತೆ ಒಳ್ಳೇದನ್ನು ಗೃಹಿಸಿ ಕೆಟ್ಟದ್ದನ್ನು ಬಿಟ್ಟು ಬಿಡಿರಿ. ಈ ಕವನ ಕುಸುಮಕ್ಕೆ ಹಿರಿಯ ಕವಿಗಳಾದ ರನ್ನ ಪಂಪ, ಸರ್ವಜ್ಞ ಕನಕದಾಸ ಕುಮಾರವ್ಯಾಸಾದಿಗಳಂಥ ಮಹಾಕವಿಗಳ ಆಶೀರ್ವಾದ ವಿರಲೆಂದು, ಕವಿಯು ಈ ನುಡಿಯ್ಯಲ್ಲಿ ಪ್ರಾರ್ಥನೆಯನ್ನು ಮಾಡಿಕೊಂಡಿದ್ದಾನೆ.

**ಆಮೆ ಮೊಲಗಳ ಕಥೆಯಿದಲ್ಲವು । ಸೋಮಶೇಖರ ಭೂಮಿಗಿಳಿದತಿ।**
**ನೇಮ ಕೆಡಿಸಿದ ಖೂಳ ದೈತ್ಯರ ಕೊಂದ ಸತ್ಯ ಕಥಾ॥**
**ನೇಮ ಬೇಕೀ ಚರಿತೆಯೋದಲು । ಕಾಮಿತಾರ್ಥಗಳೆಲ್ಲ ದೊರೆವವು।**
**ಹೋಮ ಶತಗಳ ಪುಣ್ಯ ಬಪ್ಪುದು ಓಮ್ಮೆ ಪಠಿಸಿದರೆ ॥ ೧೪ ॥**

**ಅಡಿ ಹುಡಿಂಗಳಲಿಕ್ಕ ಕೂಡದು। ಮಡಿಯಲಿಲ್ಲದೆ ಓದಕೂಡದು।**
**ಕೊಡಲು ಕೂಡದು ನೀಚ ಕರ್ಮಿಂಗಳಿಗೆ ಈ ಕಾವ್ಯಾ ॥**
**ಬಡವ ಬಲ್ಲಿದರಾರೆ ಇರಲಿ । ಬಿಡದೆ ಆರಾಧಿಸಲು ಇಹಸುಖ ।**
**ದಿಡುತ ಮೇಣ್ ನೀಡುವನು ಮುಕುತಿಯ ಮಣಿಕ ಮಲ್ಲಾರೀ ॥ ೧೫ ॥**

ಶಬ್ದಾರ್ಥ - ಸೋಮಶೇಖರ = ಶಿವ; ನೇಮ = ಧರ್ಮ; ಖೂಳ = ಕೆಟ್ಟ; ದೈತ್ಯ = ದಾಕ್ಷಸ; ಕಾಮಿತಾರ್ಥ = ಇಷ್ಟಾರ್ಥ;
ಹೋಮ = ಯಜ್ಞ; ಶತ = ನೂರು; ಪಠಿಸು = ಓದು; ಮಡಿ = ಪವಿತ್ರವಾಗಿರು; ಬಲ್ಲಿದ = ಶ್ರೀಮಂತ;
ನೀಚಕರ್ಮಿ = ಕೆಟ್ಟದ್ದನ್ನು ಮಾಡುವವ; ಮುಕುತಿ = ಮುಕ್ತಿ; ಮೇಣ್ = ಮತ್ತು ಕಾವ್ಯ = ಕವನ.

**ಭಾವಾರ್ಥ-** ಕವಿಯು ಈ ಎರಡೂ ನುಡಿಗಳಲ್ಲಿ ಈ ಪವಿತ್ರ ಗ್ರಂಥದ ಬಗ್ಗೆ ಹೇಳಿದ್ದಾನೆ. ಈ ಮಲ್ಲಾರಿ ಮಹಿಮೆಯು, ಆಮೆ - ಮೊಲಗಳ ಕಥೆಯಂತೆ ಕೇಳಿ ಮರೆತು ಬಿಡುವ ಚರಿತ್ರೆಯಲ್ಲಾ! ಪ್ರತ್ಯಕ್ಷ ಪರಮಾತ್ಮನೇ ಧರ್ಮವನ್ನು ಕೆಡಿಸುತ್ತಿರುವಂಥ ಕೆಟ್ಟ ರಾಕ್ಷಸರನ್ನು ಕೊಲ್ಲುವದಕ್ಕಾಗಿ, ಭೂಮಿಯಲ್ಲಿ ಅವತರಿಸಿದಂಥ ಸತ್ಯ ಕಥೆಯಾಗಿದೆ. ಈ ಪವಿತ್ರ ಗ್ರಂಥವನ್ನು ಓದುವದಕ್ಕೆ ಮಡಿ ಮೈಲಿಗೆಯ ಆಚರಣೆ ಕಡ್ಡಾಯವಾಗಿ ಬೇಕೇ ಬೇಕು ! ಶುದ್ಧ ಮನಸ್ಸಿನಿಂದ ಸ್ನಾನ ಮಾಡಿ, ಮಡಿ ವಸ್ತ್ರಧರಿಸಿ, ಬಿಳಿಯ ಕಂಬಳಿ ಅಥವಾ ಚಿಗರಿಯ ಕರ್ಮವನ್ನು ಆಸನಮಾಡಿ ಕೊಂಡು, ಆಚಮನ ಪ್ರಾಣಾಯಾಮ ಸಂಕಲ್ಪ ಮಾಡಿಕೊಂಡು ಭಂಡಾರ ಧರಿಸಿ, ಪಾರಾಯಣಮಾಡತಕ್ಕದ್ದು. ಬಡವ, ಶ್ರೀಮಂತ ಯಾರೇ ಆಗಿದ್ದರೂ. ಈ ಚರಿತ್ರೆಯೋದಿದರೆ ಕುಲಸ್ವಾಮಿ ಮೈಲಾರೇಶನು ಅವರವರ ಸಂಕಲ್ಪಾನುಸಾರವಾಗಿ ಇಹದಲ್ಲಿ ಸರ್ವ ಸುಖ ಭೋಗಗಳನ್ನಿತ್ತು, ಅಂತ್ಯಕಾಲದಲ್ಲಿ ಅವರಿಗೆ ಮುಕ್ತಿಯನ್ನು ದಯಪಾಲಿಸುತ್ತಾನೆ. ಈ ಪವಿತ್ರ ಗ್ರಂಥವನ್ನು ಅಡಿಹುಡಿಗಳಲ್ಲಿ ಎಂದೆಂದೂ ಇಡಬಾರದು. ದುಷ್ಟ ಕಾರ್ಯ ಮಾಡುವವರಿಗೆ ಈ ಚರಿತ್ರೆಯನ್ನು ಕೊಡಕೂಡದು! ಈ ಪವಿತ್ರ ಗ್ರಂಥವನ್ನು ಒಂದೇ ಒಂದು ಸಲ ಪಾರಾಯಣ ಮಾಡಿದರೆ, ಅದರಿಂದಾ ನೂರು ಯಜ್ಞಮಾಡಿದಂಥಾ ಅಮೋಘ ಪುಣ್ಯ ಪ್ರಾಪ್ತವಾಗ್ತಾ ಇದೆ. ಇದು ಅವರಿವರು ಹೇಳಿದ ಮಾತಲ್ಲಾ; ಪ್ರತ್ಯಕ್ಷ ಪರಮಾತ್ಮನೇ ಪಾರ್ವತಿಗೆ ಕೊಟ್ಟ ವಚನವಾಗಿದೆ.'' ಅಂತಾ ಕವಿಯು ಈ ಗ್ರಂಥದ ಪಾವಿತ್ರ್ಯತೆಯ ಬಗ್ಗೆ ಜನರಲ್ಲಿ ಅರಿಕೆ ಮಾಡಿಕೊಳ್ತಾ ಇದ್ದಾನೆ.

ಧರಣಿಯೊಳ್ ಕರ್ನಾಟ ರಾಜ್ಯದ। ಲಿರುವ ಸವಣೂರ್ ಪರಗಣೆಯ ವಶ ।
ಕಿರುವ ಚಿಲ್ಲೂರ್ ಬಡಣಿ ಶಿವಜೋಯಿಸಿರ ಮನೆತನದಾ॥
ಕಿರಿಯ ಸುತನಾಂ ನಿಂಗಭಟ್ಟನು । ವರದ ಗೌತಮ ಗೋತ್ರ ನನ್ನದು ।
ಬರೆದೆ ನೀಕೃತಿ ನಿನಗೆ ಅರ್ಪಿತ ಹರಸು ಮಲ್ಲಾರೀ ॥ ೧೬॥

ಬರೆದೆನೀ ಮೊದಲಿಂಗೆ ಮಂಟೂರ್ । ಗುರುವು ಶ್ರೀ ರಾಮ್ಲಿಂಗ ಚರಿತೆಯ ।
ಒರೆವೆ ನೀಗೀ ಕುಲದ ದೈವದ ಚಾರು ಚರಿತೆಯನು ॥
ಜರಿಯದೇ ಪರಿಗೃಹಿಸಿ ಕನ್ನಡ । ಸರಸ ಭಾಷೆಯದಾಗಿ ಬೆಳಗಲಿ ।
ಗುರುವೆ ಕರುಣಿಸು ಎನ್ನ ಮನದಾಸೆಯನು ಸಂತಸದೀ ॥ ೧೭ ॥

ಶಬ್ದಾರ್ಥ – ಧರಣಿ = ಭೂಮಿ; ಪರಗಣೆ = ತಾಲೂಕು; ವರದ = ಶ್ರೇಷ್ಠ; ಮೊದಲಿಂಗೆ = ಮೊದಲಿಗೆ :
ಒರೆವೆ = ಹೇಳುವೆ; ಚಾರು = ಸುಂದರವಾದ; ಪರಿಗೃಹಿಸು = ಸ್ವೀಕಾರ ಮಾಡು.

**ಭಾವಾರ್ಥ**– ಕವಿಯು ಈ ಎರಡೂ ನುಡಿಗಳಲ್ಲಿ ಕೃತಿ ರಚನೆಯ ಬಗ್ಗೆ ಹೇಳಿ ಕೊಂಡಿದಾದನೆ. ಕನ್ನಡ ನಾಡಿನಲ್ಲಿ ಸವಣೂರು ತಾಲೂಕಿಗೆ ಒಳಪಟ್ಟಿರುವ ಚಿಲ್ಲೂರ ಬಡ್ನಿ ಗ್ರಾಮದ ಶಿವ ಜೋಯಿಸಿರ ಮನೆತನದ ಕಿರಿಯ ಮಗ ತಾನಾಗಿದ್ದು, ನಿಂಗಭಟ್ಟನೆಂಬುವದು ತನ್ನ ಹೆಸರಾಗಿದೆಯೆಂದೂ, ತಾನು ಗೌತಮ ಗೋತ್ರದವನೆಂದು ತಿಳಿಸಿದ್ದಲ್ಲದೆ, ತಾನು ಬರೆದಂಥಾ ಈ ಮಲ್ಲಾರಿ ಚರಿತ್ರೆಯು, ಕುಲದೇವರಾದ ಮಲ್ಲಾರಿಗೇ ಅರ್ಪಿತವಾಗಲೆಂದು ಸಮರ್ಪಣೆ ಮಾಡಿದ್ದಾನೆ. ಅಲ್ಲದೇ ತಾನು ಈ ಮುಂಚಿತವಾಗಿ ಮಂಟೂರಿನ ಶ್ರೀಗುರು ರಾಮಲಿಂಗ ಚರಿತ್ರೆಯನ್ನು ಬರೆದಿದ್ದೇನೆ. ಈಗ ಕುಲಸ್ವಾಮಿಯಾದ ಮೈಲಾರೇಶನ ಸುಂದರ ಚರಿತ್ರೆಯನ್ನು ಹೇಳುತ್ತಿದ್ದೇನೆ. ತಾವುಗಳೆಲ್ಲ ಕನ್ನಡ ಭಾಷೆ ಸರಸ ಭಾಷೆಯಾಗಿ ಮೆರೆಯುವದಕ್ಕಾಗಿ ಈ ಚರಿತ್ರೆಯನ್ನು ಸ್ವೀಕರಿಸಿರಿ. ''ಶ್ರೀ ಗುರುವು ನನ್ನ ಈ ಮನದಾಸೆಯನ್ನು ಈಡೇರಿಸಿ ಕೊಡಲೀ'' ಎಂಬುದಾಗಿ ಪ್ರಾರ್ಥಿಸಿ ಕೊಂಡಿದ್ದಾನೆ.

**ಪೂರ್ಣ ನಾನಲ್ಲೆಂಬುದೂ ಪುಸಿ । ಪೂರ್ಣ ನೀನಿರೆ ಸರ್ವವ್ಯಾಪಕ ।**
**ಪೂರ್ಣ ನೀನೇ ನಾನು ಆಗಿಹೆ ಜ್ಞಾನ ದಿಟ್ಟಿಯಲೀ ॥**
**ಪೂರ್ಣವೇ ನಿನ್ನಿರವು ಇಂತಿರೆ । ಪೂರ್ಣ ಪೂರ್ಣಾತ್ ಪೂರ್ಣವೆನ್ನುತ ।**
**ಪೂರ್ಣಗೊಳಿಸುವೆ ನೀಚರಿತ್ರೆಯ ಪ್ರಾರ್ಥನಾ ಸಂಧೀ ॥ ೧೮॥**

**ಶಬ್ದಾರ್ಥ** - ಪೂರ್ಣ = ಪರಿಪೂರ್ಣ; ಇರವು = ಅವಸ್ಥೆ.

**ಭಾವಾರ್ಥ -** ಪರಮಾತ್ಮಾ ! ನಾನು ಪರಿಪೂರ್ಣನೆಲ್ಲವೆಂಬುದೂ ಒಂದು ದೃಷ್ಟಿಯಿಂದ ಸುಳ್ಳೆನಿಸುತ್ತದೆ. ಯಾಕೆಂದರೆ ನೀನು ಸರ್ವರಲ್ಲಿಯೂ ವ್ಯಾಪಿಸಿ ಪರಿಪೂರ್ಣನಾಗಿರುವಿ. ಜ್ಞಾನ ದೃಷ್ಟಿಯಿಂದ ವಿಚಾರಿಸಿದರೆ ನಿನ್ನಲ್ಲಿಯೇ ನಾನು ಅಡಗಿರುವೆ "ಪೂರ್ಣದಿಂದ ಪೂರ್ಣಕ್ಕೆ ಗುಣಿಸಿ ಭಾಗಿಸಿ, ಪೂರ್ಣವನ್ನು ಸೇರಿಸಿ ಪೂರ್ಣವನ್ನು ಕಳೆದರೂ ಪೂರ್ಣವೇ ಉಳಿಯುವಂತೆ, ನಿನ್ನಿರವು ಪರಿಪೂರ್ಣವೇ ಆಗಿದೆ, ಎಂದು ವರ್ಣಿಸುತ್ತ ಕವಿಯು ಈ ಚರಿತ್ರೆಯ ಪ್ರಾರ್ಥನಾ ಸಂಧಿಯನ್ನು ಮಹಾದೇವ ಮಲ್ಲಾರೀ ಮಾರ್ತಾಂತ ಭೈರವನ ಚರಣ ಸನ್ನಿಧಿಗೆ ಸಮರ್ಪಿಸುತ್ತಾ ಇದ್ದಾನೆ.

ಇತಿ ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್ ಜೋಶಿ, ವಿರಚಿತ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್
ಪ್ರಾರ್ಥನಾಸಂಧಿರ್ನಾಮಕ ಪ್ರಥಮೋಧ್ಯಾಯಃ ॥
ಅಧ್ಯಾಯ ೧ ಕ್ಕಂ, ಪದ ೧೮ ಕ್ಕ ಮಂಗಲಮಸ್ತು.

**ಏಳು ಕೋಟಿ ! ಏಳು ಕೋಟಿ !! ಏಳು ಕೋಟಿ ಗೋ !!! ಸಾಂಗಬಲೋ !!**





# ಅಧ್ಯಾಯ -೨. ಅಥ ದ್ವಿತೀಯೋಧ್ಯಾಯ : ಶಿವ-ಪಾರ್ವತೀ ಸಂವಾದ.



ಸೂಚನೆ:**ಮುನಿ ಸನತ್ ಕೌಮಾರನುಸುರಿದ । ಘನತರದ ತೀರ್ಥಗಳ ಮಹಿಮೆಯ।**
**ಚಿನುಮಯಾತ್ಮಕ ಶಿವನು ಶೈಲಜೆಗೊರೆದ ಕರುಣೆಯಲಿ ॥**

ಸೂಚನಾ ಪದ್ಯದ ಅರ್ಥ :- "ಮಹಾ ಮುನಿಯಾದ ಸನತ್ಕುಮಾರನು ಹೇಳಿದಂಥ ಶ್ರೇಷ್ಠ ತೀರ್ಥಗಳ ಮಹಿಮೆಯನ್ನು, ಪರಶಿವನು ಒಂದು ಸಲ ಪಾರ್ವತಿಗೆ ಕರುಣಾಮಯನಾಗಿ ಹೀಗೆ ಹೇಳ್ತಾನೆ" ಎಂಬ ನಾಂದಿಯೊಂದಿಗೆ, ಕವಿಯು ಈ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣವನ್ನು ಪ್ರಾರಂಭಿಸುತ್ತಿದ್ದಾನೆ.

**ಕೇಳಿದಳು ಶಿವೆಯೊಂದು ಸಮಯದಿ । ಪೇಳು ನಾಥನೆ ಪ್ರೀತಿ ಪಾವನ ।**
**ವೇಳು ಜನ್ಮದ ಪಾಪ ಕಳೆಯುವ ತೀರ್ಥಕ್ಷೇತ್ರವದೂ ॥**
**ಫಾಲನೇತ್ರನೆ ಎನ್ನ ಸಹಿತದಿ । ಲೀಲೆದೋರಿದ ದಿವ್ಯ ಚರಿತೆಯ ।**
**ಪೇಳೆನಲು ಶಿವ ನಗುತ ನುಡಿದನು ಕ್ಷೇತ್ರ ಮಹಿಮೆಯನೂ ॥ ೧॥**

ಶಬ್ದಾರ್ಥ - ಪ್ರಿತಿ ಪಾವನ = ಕೇಳುವದಕ್ಕೆ ಆಸಕ್ತಿಯುಳ್ಳದ್ದೂ, ಅತ್ಯಂತ ಪವಿತ್ರವಾದದ್ದೂ ಯಾವುದೋ ಅದು.

**ಭಾವಾರ್ಥ-** ಒಂದಾನೊಂದು ಸುಸಮಯದಲ್ಲಿ ಕೈಲಾಸದಲ್ಲಿ ವಿರಾಮವಾಗಿ ಕುಳಿತಿರುವಾಗ ಪಾರ್ವತಿಯು ಪರಮೇಶ್ವರ ನಿಗೆ ಪ್ರಶ್ನೆಮಾಡ್ತಾಳೆ; ಸ್ವಾಮೀ! ಏಳು ಜನ್ಮಾಂತರಗಳ ಪಾಪ ಕಳೆಯುವಂಥದ್ದೂ. ಕೇಳಲು ಹರ್ಷ ಹುಟ್ಟಿಸುವಂಥದ್ದೂ. ಭಕ್ತೋದ್ಧಾರಕ್ಕಾಗಿನೀನು ನನ್ನೊಂದಿಗೆ ಅವತಾರ

ತಾಳಿ, ನಿನ್ನ ಆಗಾಧವಾದ ಲೀಲೆಯನ್ನು ತೋರಿಸಿ, (ಅಲ್ಲಿಯೇ ನೆಲಿಸಿದ) ದಂತಹ ಪವಿತ್ರವಾದ ಚರಿತ್ರೆಯೊಂದನ್ನು ಹೇಳೆಂದು, ಪ್ರಶ್ನೆ ಮಾಡಿದಳು. ಆಗ ಶಿವನು ಅತ್ಯಂತ ಹರ್ಷಿತನಾಗಿ ಮುಗುಳ್ನಗುತ್ತ, ಅಂಥ ಪವಿತ್ರವಾದ ಕ್ಷೇತ್ರ ಮಹಿಮೆಯನ್ನು ಈ ರೀತಿಯಾಗಿ ವರ್ಣಿಸಿ ಹೇಳ್ತಾ ಇದ್ದಾನೆ. ಅದೇನೆಂದರೆ

**ಕೇಳು ಪ್ರಿಯೆ ಯುಗದಂತರದ ಕಥೆ । ಏಳು ಜನರಾ ಧರ್ಮ ಸುತರಿಗೆ ।**
**ಪೇಳಿದಾ ಚಾರಿತ್ರ್ಯ ಏದು ಸನಕಾದಿ ವಂದಿತರೂ ॥**
**ಹೇಳಿದರ್ ಮಣಚೂಲ ಪರ್ವತ । ಮೇಲೆದೋರಿದ ದಿವ್ಯ ಕ್ಷೇತ್ರದ ।**
**ಸಾಲು ಮಹಿಮೆಯನುಸುರುವೆನು ಕೇಳೆಂದ ಪಶುಪತಿಯೂ ॥ ೨ ॥**

**ಭಾವಾರ್ಥ-** ದೇವಿ ಪಾರ್ವತಿಯೇ ಕೇಳು ! ಇದು ಯುಗಯುಗಾಂತರದ ಕಥೆ ! ಏಳು ಜನ ಧರ್ಮ ಸುತರಾದ ಮುನಿಗಳಿಗೆ, ಸನತ್ಕುಮಾರರು ಹೇಳಿದ ದಿವ್ಯ ಚರಿತ್ರೆ !! ಪರಮ ಪಾವನವಾದ ಮೈಲಾರಗಿರಿಯ ಮಹಾ ಮಹಿಮೆಯನ್ನು ಸವಿಸ್ತಾರವಾಗಿ ಬಣ್ಣಿಸಿದ ಕಥಾನಕ !!! ಅದನ್ನೇ ನಾನೀಗ ನಿನ್ನ ಪ್ರೀತಿಗೋಸ್ಕರ ಹೇಳುತ್ತಿದ್ದೇನೆ; ಲಕ್ಷವಿಟ್ಟು ಆಲಿಸು !'' ಎಂಬುದಾಗಿ ನುಡಿದು, ಶಿವನು ಆ ಚರಿತ್ರೆಯನ್ನು ಪಾರ್ವತಿಗೆ ಹೇಳ್ತಾ ಇದ್ದಾನೆ.

**ಹಿಂದೆ ಕೃತಯುಗ ದಾದಿಯಲಿ ಆ । ನಂದ ಕುಂದಿದ ಏಳು ಮುನಿಗಳ ।**
**ನಂದು ಇಳುಹಿದ ಇಂದ್ರನಾಮಣಚೂಲ ಪರ್ವತಕೇ ॥**
**ಹೊಂದಿದಾ ಕುಂದುಗಳ ಕಳೆಯಲು । ಇಂದ್ರನಾಣತಿಯಂತೆ ಮುನಿಗಣ ।**
**ನಿಂದು ತಪಗೈಯ್ಯಲ್ಕೆ ಆಶ್ರಮ ರಚಿಸಿಕೊಂಡಿರಲೂ ॥ ೩ ॥**

ಶಬ್ದಾರ್ಥ - ಆದಿಯಲಿ = ಪ್ರಾರಂಭದಲ್ಲಿ; ಆನಂದ ಕುಂದಿದ =ಪುಣ್ಯ ತೀರಿದ ; ಕುಂದು = ಕಲೆ (ಪಾಪ) ಆಣತಿ = ಅಪ್ಪಣೆ; ಮುನಿಗಣ = ಮುನಿಸಮೂಹ.

**ಭಾವಾರ್ಥ** - ಹಿಂದೆ ಕೃತಯುಗದ ಪ್ರಾರಂಭ ಕಾಲದಲ್ಲಿ. ಪುಣ್ಯ ತೀರಿದ ಏಳು ಜನ ಧರ್ಮಸುತರಾದ ಮುನಿಗಳನ್ನು ಇಂದ್ರನು ಮಣಿಚೂಲ ಪರ್ವತಕ್ಕೆ ಇಳಿಸಿದನು. ಆ ಮುನಿಗಳು ಇಂದ್ರನ ಅಪ್ಪಣೆಯಂತೆ ಅಲ್ಲಿ ಉಳಿದು ಪುಣ್ಯ ಸಂಪಾದಿಸುವದಕ್ಕಾಗಿಯೂ. ಜಗತ್ ಕಲ್ಯಾಣಕ್ಕಾಗಿಯೂ ಅವಶ್ಯವಾಗಿರುವ ತಪಸ್ಸನ್ನಾಚರಿಸುವದಕ್ಕಾಗಿ ಅಲ್ಲಿಯೇ ಆಶ್ರಮ ರಚಿಸಿಕೊಂಡು ಉಳಿದಿದ್ದರು.

**ಚಾರು ಕುಟಿರಗಳೇಳು ಸಂಖೆಯ । ಚಾರು ಮಂಟಪ ಯಜ್ಞ ಶಾಲೆಯು ।**
**ಚಾರು ಗೋಗಳ ಶಾಲೆ ಪಾಠ ಪ್ರವಚನದ ಶಾಲೆ ॥**
**ಚಾರು ಗೋಗಳ ಸಂಖ್ಯವಾಗಿರೆ । ಚಾರು ವಟುಗಳ ಹದಿ ಬದೆಯರಾ ।**
**ಚಾರು ಚಾರಿತ್ರ್ಯದ ಮಹಾಪುರವಾಗಿ ಮೆರೆದಿತ್ತು ॥ ೪ ॥**

**ಸುತ್ತ ಮುತ್ತಲು ಮಲ್ಲಿ ಸಂಪಿಗೆ । ಮತ್ತೆ ಮುತ್ತಲ ಬನ್ನಿ ಬಿಲ್ವದ ।**
**ಎತ್ತರೆತ್ತರ ಆಲ ಅಶ್ವತ್ಥಾದಿ ವೃಕ್ಷಗಳೂ ॥**
**ಚಿತ್ತ ಸೆಳೆಯುವ ಮಾವು ಫೇರಲ । ಎತ್ತರಾಗಿಹ ತೆಂಗು ಪೂಗಿಯ ।**
**ಉತ್ತರಾಣೀ ಸಸ್ಯ ತುಲಸೀ ಬನದೊಳೊಡಗೂಡಿ ॥ ೫ ॥**

**ಚೆಂದ ಚೆಂದದ ಹೂವು ತುಂಬಿದ । ಅಂದದಂಗಣ ಈಜುವಾಕೊಳ ।**
**ಮಂದ ಮಾರುತದಿಂದ ತಿರುಗುವ ಯಂತ್ರ ಜೋಡಣೆಯ ॥**
**ಹೊಂದಿ ಕೊಂಡಿಹ ಶಿಲೆಯ ಆಸನ । ಗಂಧದಾಮರ ಲತೆಯ ಮಂಟಪ ।**
**ದಿಂದ ಶೋಭಿಸುತ್ತಿತ್ತು ಆ ಮಣಿಚೂಲದಾಶ್ರಮವೂ ॥ ೬ ॥**

**ಭಾವಾರ್ಥ** - (೪+೫+೬) ಮುನಿಗಳು ಅಲ್ಲಿ ವಾಸಮಾಡುವದಕ್ಕಾಗಿ ಏಳು ಪರ್ಣಕುಟಿರಗಳನ್ನು ರಚಿಸಿಕೊಂಡಿದ್ದರು ಅವು ಬಲು ಅಂದವಾಗಿದ್ದವು, ಸುಂದರವಾದ ಯಜ್ಞಶಾಲೆ, ಯಜ್ಞ ಮಂಟಪಗಳನ್ನು ರಚಿಸಿಕೊಂಡಿದ್ದರು (ಅದರಾಚೆ) ಗೋಶಾಲೆ ಸುಂದರವಾಗಿತ್ತು. ವಿದ್ಯಾರ್ಥಿವಟುಗಳಿಗೆ, ವೇದ, ಶಾಸ್ತ್ರ ಪಾಠ ಪ್ರವಚನಗಳನ್ನು ಹೇಳಿಕೊಡುವ ಪಾಠಶಾಲೆಯನ್ನು ಅತ್ಯಂತ ಸುಂದರವಾಗಿ ರಚಿಸಿಲಾಗಿತ್ತು. ಕಾಮಧೇನು ಸದೃಶವಾದ ಅಸಂಖ್ಯ ಸುಂದರ ಆಕಳುಗಳು ಆ ಆ ಶ್ರಮದಲ್ಲಿದ್ದವು. ಬಾಲ ಸೂರ್ಯರಂತೆ ಪ್ರಕಾಶಮಾನರಾಗಿರುವ ವಟುಗಳೂ, ಪತಿವ್ರತೆಯರಾದ ಮತ್ತು ಪತಿಗಳ ತಪಸ್ಸಿಗೆ ಸರ್ವರೀತಿಯಿಂದಲೂ ಅನುಕೂಲ ಒದಗಿಸಿಕೊಡುವಂಥಾ ಸಚ್ಚಾರಿತ್ರ್ಯದ ಋಷಿ ಪತ್ನಿಯರೂ, ಹೀಗೆ ಸರ್ವತೋಮುಖದಿಂದ ಆ ಆಶ್ರಮವು ಸಚ್ಚಾರಿತ್ರ್ಯೆಯ ಮಹಪೂರವಾಗಿ ಕಂಗೊಳಿಸ್ತಾ ಇತ್ತು.

(೫) ಆಶ್ರಮದ ಸುತ್ತಮುತ್ತಲೂ, ಮಲ್ಲಿಗೆ ಸಂಪಿಗೆ, ಮುಂತಾದ ಹಲವಾರು ರೀತಿಯ ಪುಷ್ಪ ಸಸ್ಯಗಳು, ಮುತ್ತಲ ಬನ್ನಿ ಬಿಲ್ವ ಎತ್ತರವಾದ ಆಲದ ಮರ, ಅರಳಿಯ ಮರ, ಕೆಂದಳಿರುಗಳಿಂದ ಸುಂದರವಾಗಿ ಗೋಚರಿಸುವ ಮಾವಿನಮರ, ಪೇರಲ ವೃಕ್ಷ, ಎತ್ತರವಾಗಿ ಬೆಳೆದುನಿಂತ ತೆಂಗು, ಅಡಿಕೆಗಳ ವೃಕ್ಷ ಸಮೂಹದಿಂದ ಆಶ್ರಮದ ಸೌಂದರ್ಯ ಮನಸ್ಸಿಗೆ ಸಂತೋಷವನ್ನುಂಟು ಮಾಡ್ತಾ ಇತ್ತು ವೃಕ್ಷಗಳ ಅಡಿಯಲ್ಲಿ ಬೆಳೆದು ನಿಂತ ಉತ್ತರಾಣೀ ಸಸ್ಯಗಳಿಂದಲೂ, ತುಳಸೀ ವನಗಳಿಂದಲೂ ಆಶ್ರಮದ ಸೌಂದರ್ಯಕ್ಕೆ ಮೆರಗು ಬಂದಂತಾಗಿತ್ತು ಮತ್ತೂ.

(೬) ಅಂದ ಚೆಂದವಾಗಿರುವಂಥ ಬಕುಳ, ಸೇವಂತಿಗೆ, ಸುಗಂಧ ಪುಷ್ಪಗಳಿಂದ ಎದುರಿಗಿರುವ ಅಂಗಳವು ಸುಂದರವಾಗಿ ಕಂಗೊಳಿಸ್ತಾ ಇತ್ತು. ಆ ವಿಶಾಲವಾದ ಬೈಲಿನಲ್ಲಿ, ಈಜುಗೊಳ, ಕುಳಿತು ಕೊಳ್ಳುವದಕ್ಕೆ ಶಿಲಾಸನ, ಇತ್ಯಾದಿಗಳನ್ನು ನಿರ್ಮಿಸಲಾಗಿತ್ತು. ಮಂದ ಗಾಳಿಗೆ ತನ್ನಿಂದ ತಾನೇ ತಿರುಗುವಂಥ ಯಂತ್ರಗಳ ಜೋಡಣೆ, ಆಕರ್ಷಕವಾಗಿತ್ತು. ಅದಕ್ಕೆ ಹೊಂದಿಕೊಂಡು ಶಿಲಾಸನಗಳೂ, ಶ್ರೀ ಗಂಧದ ಮರಗಳೂ, ಲತಾಮಂಟಪಗಳೂ ಕಂಗೊಳಿಸ್ತಾ ಇದ್ದವು, ಹೀಗೆ, ಆ ಮಣಿ ಚೂಲ ಪರ್ವತಾಶ್ರಮದ ಸೌಂದರ್ಯ ಮನ ಮೋಹಕವಾಗಿತ್ತು.

**ಎಸೆದುದ್ದೈ ಮಣಿ ಚೂಲ ಪರ್ವತ । ಶಶಿಯ ಕಾಂತದ ಬಿಳಿಯ ಶಿಲೆಯಲಿ ।**
**ಅಸಮವಾಗಿಹ ಬೆನಕ ರಾಶಿಯ ಭವ್ಯ ದಿಬ್ಬದಲೀ ॥**
**ಮುಸುಕಿದಾರಣ್ಯದೊಳು ಬೆಳೆದಿಹ । ಮುಸುಕಿ ಗಗನವ ಚುಂಬಿಸುತ್ತಿಹ ।**
**ಎಸೆವ ನೀರೂಟಿಗಳ ಬದಿಯೋಳ್ ಬೆಳೆದ ದರ್ಭೆಗಳಾ ॥ ೭ ॥**

**ಭಾವಾರ್ಥ -** ಆ ಮಣಿಚೂಲ ಪರ್ವತ ಪ್ರದೇಶವು ಶಶಿಕಾಂತದ ಬಿಳಿಯ ಕಲ್ಲುಗಳಿಂದಲೂ ಸಣ್ಣ ದೊಡ್ಡ ಪ್ರಮಾಣದ ಬೆನಕಗಳ ದಿಬ್ಬಗಳಿಂದಲೂ. ಆವೃತವಾಗಿದ್ದಿತು, ಸುತ್ತಲೂ ಗಗನವನ್ನು ಚುಂಬಿಸುವಷ್ಟು ಎತ್ತರವಾಗಿ ನೆಲ್ಲಿ, ನೀರಲ, ತೇಗು, ಹೊನ್ನೆ, ಶ್ರೀ ಗಂಧ, ನಂದಿ, ಮತ್ತಿ ಮುಂತಾದ ಕಾಡು ವೃಕ್ಷಗಳು ಬೆಳೆದು ನಿಂತಿದ್ದವು. ಅಲ್ಲಲ್ಲಿ ಬಸಿಯುತ್ತಿರುವ ಕೊಳಗಳ ದಂಡೆಯಲ್ಲಿ ಬಹಳ ರೀತಿಯ ದರ್ಭೆಗಳು ಕಂಗೊಳಿಸುತ್ತಿದ್ದವು.

**ಬೆಕ್ಕು ಬಾವುಲಿ ಪಕ್ಷಿಸಂಕುಳ । ಇಕ್ಕೆಲದ ಮರಗಳಲಿ ಜಗಿಯುವ ।**
**ಸೊಕ್ಕಿದಾ ಮಂಗಗಳ ಚಿಲಿಪಿಲಿಗುಟ್ಟುವಾ ಪಕ್ಷೀ ॥**
**ಮಿಕ್ಕಿ ಹಾರುವ ಪಾರಿವಾಳ್ಗಾ । ಲಕ್ಕಿ ಕುಣಿಯುವ ನವಿಲ ನರ್ತನ ।**
**ಉಕ್ಕಿ ಹಾಡುವ ಕೋಗಿಲಿಂಚರ ಗಿಳಿಗಳಾದಿಗಳಾ ॥ ೮ ॥**

ಭಾವಾರ್ಥ - ಆ ಪ್ರದೇಶದಲ್ಲಿ ಬೆಕ್ಕು, ಬಾವುಲಿ, ಅಸಂಖ್ಯಾತವಾದ ಪಕ್ಷಿಗಳು, ವಾಸವಾಗಿದ್ದವು. ಮರದಿಂದ ಮರಕ್ಕೆ ಜಿಗಿದಾಡುವ ಕೊಬ್ಬಿದ ಮಂಗಗಳೂ, ಚಿಲಿಪಿಲಿ ಗುಟ್ಟುವ ಪಕ್ಷಿಗಳೂ, ಪಾರಿವಾಳ, ಹಾಲಕ್ಕಿ, ಬೆಳ್ಳಕ್ಕಿ ಮುಂತಾದವುಗಳಿಂದ ಆ ಪ್ರದೇಶ ಶೋಭಾಯ ಮಾನವಾಗಿತ್ತು. ಅಲ್ಲಲ್ಲಿ ನವಿಲುಗಳು ನೃತ್ಯ ಮಾಡುತ್ತಿದ್ದವು. ಕೋಗಿಲೆ, ಗಿಳಿವಿಂಡುಗಳು ಗಾನ ಹಾಡುತ್ತಿದ್ದವು.

ಇಲಿಯು ಬೆಕ್ಕಿನ ಬೆನ್ನನೇರುತ । ಹುಲಿಯು ಜಿಂಕೆಯ ಮರಿಗೆ ತಾನೇ ।
ಮೊಲೆಯ ನುಣಿಸುತ ನಲಿಯು ತಿರ್ದವು ಆ ತಪೋವನದೀ ॥
ಕುಲದ ವೈರವ ಮರೆತು ಮುಂಗುಲಿ । ಅಲೆಯುತಿರ್ದವು ಹಾವಿನೊಂದಿಗೆ ।
ನಲಿಯುತಿರ್ದವು ವೈರವಿಲ್ಲದೆ ಆ ತಪೋವನದೀ ॥ ೯ ॥

ಭಾವಾರ್ಥ - ಪುಣ್ಯಕರವಾದ ತಪೋವನದ ಮಹಿಮೆ ಹೇಗಿತ್ತೆಂದರೆ, ಅಲ್ಲಿ ಇಲಿಗಳು ಬೆಕ್ಕಿನ ಮೇಲೆ ಕುಳಿತು ಸವಾರಿ ಮಾಡುತ್ತಿದ್ದವು. ಅಲ್ಲಿಯ ಹುಲಿಗಳು ಚಿಗರೆಯ ಮರಿಗಳಿಗೆ ತಾವೇ ಹೋಗಿ ಹಾಲು ಕುಡಿಸುತ್ತಿದ್ದವು. ಕುಲದ ವೈರತ್ವ ಮರೆತ ಮುಂಗುಲಿಗಳು, ಹಾವುಗಳೊಂದಿಗೆ ಚಲ್ಲಾಟವಾಡುತ್ತಿದ್ದವು.

ಕೋಳಿ ಕೂಗುವ ಮುನ್ನವೇಳುತ । ಶೂಲಿ ಹರಿ ಬ್ರಹ್ಮರನು ನೆನೆಯುತ ।
ಸಾಲು ಮನೆ ಗುಡಿಗಿಕ್ಕು ತಿರ್ದರು ರಂಗವಲ್ಲಿಗಳಾ ॥
ಮೇಲೆ ಮೈದೊಳೆದಾದ ನಂತರ । ಕಾಲಿಗೊಂದಿಸಿ ತಮ್ಮ ಪತಿಗಳ ।
ಲೋಲ ಸತಿಯರ್ ಪಾಡುತಿರ್ದರು ಸುಪ್ರಭಾತವನೂ ॥ ೧೦ ॥

ಶಬ್ದಾರ್ಥ - ಶೂಲಿ = ಶಿವ; ಹರಿ = ವಿಷ್ಣು; ವಿಘ್ನ = ತೊಂದರೆ; ಸುಪ್ರಭಾತ = ಬೆಳಗಿನಲ್ಲಿ ಮಾಡುವ ಸ್ತೋತ್ರ.

**ಭಾವಾರ್ಥ** – ಋಷಿ ಪತ್ನಿಯರು ಕೋಳಿ ಕೂಗುವದಕ್ಕಿಂತ ಮುಂಚಿತವಾಗಿಯೇ ಎದ್ದು, ತ್ರಿಮೂರ್ತಿಗಳ ಧ್ಯಾನ ಮಾಡಿ, ಮುಖಮಾರ್ಜನ ಮಾಡಿಕೊಂಡು, ಎಲ್ಲಾ ಕುಟಿರಗಳಿಗೂ, ದೇವಾಲಯಗಳಿಗೂ, ಸಾರಿಸಿ ರಂಗವಲ್ಲಿ ಯನ್ನಿಕ್ಕುತ್ತಿದ್ದರು. ನಂತರ ಮೈತೊಳೆದುಕೊಂಡು ತಮ್ಮ ತಮ್ಮ ಪತಿಗಳ ಪಾದ ಮುಟ್ಟಿ ನಮಸ್ಕರಿಸಿ, ಸುಪ್ರಭಾತ ಗೀತೆಗಳನ್ನು ಹಾಡತೊಡಗುತ್ತಿದ್ದರು.

ಸುಪ್ರಭಾತದ ಸ್ವರವನಾಲಿಸಿ । ವಿಪ್ರರೇಳ್ವರು ವಟು ಸಮೇತದಿ ।<br>
ಸುಪ್ರಭಾತದ ಕಾರ್ಯ ಸ್ನಾನಾದಿಗಳ ತೀರಿಸುತ ॥<br>
ಸ್ವ ಪ್ರಯತ್ನದಲೊಟುಗಳೋಡ್ವರು । ವಿಪ್ರರಾಹ್ನಿಕ ಪೂಜೆ ಗೈಯ್ಯಲು ।<br>
ಸಪ್ರಮಾಣದ ಪುಷ್ಪತುಲಸೀ ಬಿಲ್ವ ಸಮಿಧಗಳ ॥ ೧೧ ॥

ಶಬ್ದಾರ್ಥ – ವಟು = ಅಭ್ಯಾಸ ಮಾಡುವಬ್ರಹ್ಮಚಾರಿ; ಆಹ್ನಿಕ = ಹೋಮ; ಸಮಿಧ = ಅರಳೆಕಟ್ಟಿಗೆ; ಬಿಲ್ವ = ಪತ್ರೀದಳ.

ತಂದು ಹೊಂದಿಸಿ ಇಟ್ಟಿರಲ್ ವಟು । ವೃಂದ ಸೂರ್ಯಂಗರ್ಘ್ಯವಿತ್ತು ಸು ।<br>
ನಂದದಿಂದಲಿ ವೇದ ಪಾಠಕ್ಕೋಡುವರು ಜವದೀ ॥<br>
ನಂದದಗ್ನಿಗೆ ಆಜ್ಯ ಸಮಿಧಾ । ಗಂಧಜೆಕ್ಕೆಯ ನಿಡುತ ನಿತ್ಯಾ ।<br>
ನಂದದಾಯಕ ಅಗ್ನಿಗಾಹುತಿ ನೀಡ್ವರೈದಿನವೂ ॥ ೧೨ ॥

ವೇದವೇ ಸರ್ವಕ್ಕೆ ಮೂಲವು । ವೇದವೇ ಸರ್ವಾರ್ಥ ಸಾಧಕ ।
ವೇದವೇ ಪರಮಾತ್ಮ ಪೂರ್ಣಬ್ರಹ್ಮನೆಂದರಿತೂ ॥
ವೇದ ಘೋಷವು ಮುಗಿಲ ಮುಟ್ಟರೆ । ವೇದ ವೇದಾಂಗಗಳ ಅಧಿಪತಿ ।
ಮೋದಗೊಳ್ಳುತಲಿರ್ದರನು ದಿನವಿಂತು ಸಾಗಿರಲೂ ॥ ೧೩ ॥

ಶಾಂತವಾತಾವರಣ ದರ್ಭದ । ಅಂತ ಮತಿವಟು ಸರ್ವವೇದದ ।
ಅಂತ ತಲುಪಿರೆ ಋಷಿಗಳೆಲ್ಲರು ಶಾಂತಿ ಸಂಭ್ರಮದೀ ॥
ಕಂತು ಹರನಾನಂತ ಕರುಣೆಯ । ನೆಂತು ಬಣ್ಣಿಪುದೆಂದೆನುತ ಸು ।
ಶ್ಯಾಂತರಾಗಿಯೆ ನೆನೆಯುತಿರ್ದರು ಶಿವನ ಮಹಿಮೆಯನೂ ॥ ೧೪ ॥

**ಭಾವಾರ್ಥ –** (೧೧ ರಿಂದ ೧೪) ಋಷಿ ಪತ್ನಿಯರ ಸುಪ್ರಭಾತದ ಸ್ವರವನ್ನು ಕೇಳಿದೊಡನೆಯೇ ಏಳೂಜನ ಮುನಿಗಳೂ ಮತ್ತೂ ವಟು ಸಮೂಹವೂ ಎದ್ದೇಳುತ್ತಿತ್ತು. ಋಷಿಗಳು ತಮ್ಮ ದೈನಂದಿನ ಕರ್ಮತೀರಿಸಿ ಸ್ನಾನ ಸಂಧ್ಯಾವಂದನೆಗಳನ್ನು ಮಾಡುತ್ತಿದ್ದರು. ವಟುಗಳು ಯಾರ ಪ್ರೇರಣೆಯೂ ಇಲ್ಲದೇ, ತಾವೇ ಸ್ವತ: ಋಷಿಗಳ ಪೂಜೆ ಆಹ್ನಿಕಾದಿಗಳಿಗೆ ಅವಶ್ಯವಾಗಿರುವಂಥ ಸಾಕಷ್ಟು ಪ್ರಮಾಣದ ಹೂವು ತುಳಸೀದಳ, ಅರಳೀ ಕಟ್ಟಿಗೆ, ಬಿಲ್ವ ಪತ್ರಿ, ಮುಂತಾದವುಗಳನ್ನು ಸಂಗ್ರಹಿಸುವದಕ್ಕಾಗಿ ಸಮೀಪದಲ್ಲಿಯೇ ಇದ್ದ ಅರಣ್ಯಕ್ಕೆ ಹೊರಟು ಹೋಗುತ್ತಿದ್ದರು. ವಟುಗಳು ಅವುಗಳನ್ನೆಲ್ಲಾ ತಂದು ಹೊಂದಿಸಿಟ್ಟು, ಸ್ನಾನಮಾಡಿ ಸೂರ್ಯನಿಗೆ ಪ್ರಾಥ: ಕಾಲದ ಆರ್ಘ್ಯವನ್ನು ಕೊಟ್ಟು, ವೇದಾಧ್ಯಯನಕ್ಕಾಗಿ ಪಾಠಶಾಲೆಗೆ ಹೋಗುತ್ತಿದ್ದರು.
ಋಷಿಗಳು ಯಜ್ಞ ಮಂಟಪಕ್ಕೆ ಬಂದು, ಸುತ್ತಲೂ ಕುಳಿತು, ನಿತ್ಯಾಗ್ನಿಯನ್ನು ಪ್ರಜ್ವಲಿಸಿ, ತುಪ್ಪ, ಅರಳೀಕಟ್ಟಿಗೆ, ಗಂಧದ ಚೆಕ್ಕಿಗಳನ್ನಿಟ್ಟು, ನಿದ್ಯಾನಂದದಾಯಕನಾದ ಅಗ್ನಿದೇವನಿಗೆ ಆಹುತಿ ನೀಡುತ್ತಿದ್ದರು. ಶಾಸ್ತ್ರೋಕ್ತವಾಗಿ ಈ ಪದ್ಧತಿಯು ನಿತ್ಯವೂ ನಡೆಯುತ್ತಿತ್ತು ಯಾಕೆಂದರೆ ವೇದವೇ

ಸರ್ವಕ್ಕೂ ಮೂಲವೆಂಬದನ್ನು, ವೇದವೇ ಎಲ್ಲ ಇಷ್ಟಾರ್ಥಗಳನ್ನೂ ಪೂರೈಸಿಕೊಡುವದಕ್ಕೆ ಸಮರ್ಥವಾಗಿದೆ ಎಂಬುದನ್ನು, ಅಲ್ಲದೇ ವೇದವೇ ಸಾಕ್ಷಾತ್ ಪರಮಾತ್ಮ ಅರ್ಥಾತ್ ಪೂರ್ಣಬ್ರಹ್ಮವಾಗಿದೆ ಎಂಬುದನ್ನೂ ಅವರು ಅರಿತು ಕೊಂಡವರಾಗಿದ್ದರು. ಹೀಗಾಗಿ ಆ ತಪೋವನದಲ್ಲಿ ವೇದಗಳ ಘೋಷಣೆಯು ಮುಗಿಲಿಗೆ ಮುಟ್ಟುವಂತೆ ಉಚ್ಚರಿಸಲ್ಪಡುತ್ತಿದ್ದಿತು. ಅದರಿಂದಾಗಿ ವೇದಾಂಗಗಳ ಅಧಿಪತಿಗಳಾದ ಅಷ್ಟದಿಕ್ಪಾಲಕರೂ, ನವಗ್ರಹಗಳೂ, ತ್ರಿಮೂರ್ತಿಗಳೂ ಅದರಿಂದ ಸಂತುಷ್ಟರಾಗುತ್ತಿದ್ದರು. ಹೀಗೆ ಸಪ್ತರ್ಷಿಗಳ ಜೀವನವು ಅತ್ಯಂತ ಪವಿತ್ರವಾಗಿತ್ತು.

ಪ್ರಶಾಂತವಾದ ವಾತಾವರಣ ; ಕುಶಾಗ್ರಮತಿಗಳಾದ ವಟುವೃಂದವು ಸರ್ವ ವೇದಗಳನ್ನು ಅಭ್ಯಸಿಸಿ ಕೊನೆಯ ಭಾಗಕ್ಕೆ ಬಂದು ತಲುಪಿದ್ದರು. ಹೀಗಾಗಿ ಆ ಏಳೂ ಜನ ಋಷಿಗಳು ಅತ್ಯಂತ ಸಂತುಷ್ಟರಾಗಿದ್ದರು. ಇಷ್ಟೆಲ್ಲಾ ಅವಕಾಶಗಳನ್ನು ತಮಗೆ ಪೂರೈಸಿಕೊಟ್ಟ ಪರಮಾತ್ಮನ ಹಿರಿ ಕರುಣೆಯನ್ನು, ಹೇಗೆ ಸ್ತುತಿಸಬೇಕೆಂದು ಅವರು ನಿರ್ಮಲ ಚಿತ್ತರಾಗಿ ಭಗವಂತನ ನಾಮಸ್ಮರಣೆಯಲ್ಲಿಯೇ ತಲ್ಲೀನರಾಗಿ ಸುಖಶಾಂತಿಯಿಂದ ಕಾಲ ಕಳೆಯುತ್ತಿದ್ದರು.

ಇತಿ ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್ ಜೋಶಿ ವಿರಚಿತ, ಮಾಲ್ಹಸಾಮಾರ್ತಾಂಡ ಭೈರವ ಪುರಾಣ ದೋಳ್
ಶಿವಪಾರ್ವತೀ ಸಂವಾದೋ ನಾಮಕ ದ್ವಿತೀಯೋಧ್ಯಾಯಃ ॥

ಅಂತು ಅಧ್ಯಾಯ ೨ಕ್ಕಂ, ಪದ ೧೪ ಕ್ಕಂ, ಒಟ್ಟು ಪದ ೩೨ ಕ್ಕಂ, ಮಂಗಲ ಮಸ್ತು.

ಏಳು ಕೋಟಿ ! ಏಳು ಕೋಟಿ !! ಏಳು ಕೋಟಿಗೋ !!!..... ಸಾಂಗಬಲೋ !!.....



**ಸೂಚನೆ:**

**ದುಷ್ಟ ರಕ್ಕಸಮಣಿಕ ಮಲ್ಲರು । ತಟ್ಟನೆರಗಿದರಾ ಸುಕ್ಷೇತ್ರಕೆ ।**
**ಕುಟ್ಟಿದರ್ ಮುನಿದಾರ ಸಂತತಿ ಅಗ್ನಿ ಸಹಿತಾಗೀ ॥**

ಸೂಚನೆ - ದುಷ್ಟದೈತ್ಯರಾದ ಮಣಿಕಾಸುರ, ಮಲ್ಲಾಸುರ ರೆಂಬವರು, ಒಮ್ಮಿಂದೊಮ್ಮಿಲೇ ಆ ಮಣಿ ಚೂಲ ಪರ್ವತದ ಪುಣ್ಯಾಶ್ರಮಕ್ಕೆ ದಾಳಿಯಿಟ್ಟರು. ಅವರು ಸಕಲ ಮುನಿಗಳನ್ನೂ, ಅವರ ಪತ್ನಿಯರನ್ನೂ, ವಟುಗಳನ್ನೂ, ಮನದಣಿಯೆ ಬಡಿದದ್ದಲ್ಲದೇ, ಯಜ್ಞಾಗ್ನಿಗೆ ನೀರು ಸುರುವಿ ನಂದಿಸಿದರು.

**ಸತ್ಯ ಗುಣ ಸಂಕೇತ ಸುರರಿಗ । ಸತ್ಯವಾದಿಗಳಾದ ದೈತ್ಯರು ।**
**ನಿತ್ಯ ಕಾಲದಿ ವೈರ ಸಾಧನೆ ಗೊಂಡು ಬಂದಿರಲೂ ॥**
**ಸತ್ಯ ಸೂರೆಯ ಗೈವ ಹಟದಿಂ । ನಿತ್ಯವೂ ದೌರ್ಜನ್ಯ ವೆಸಗುತ ।**
**ಸತ್ಯ ಜೀವಿಗಳನ್ನು ಕಾಡುವದವರ ಕರ್ತವ್ಯ ॥ ೧ ॥**

**ಇಂತು ಕೃತಯುಗದಾದಿಯಿಂದಲು । ಆಂತು ಬಂದಿದೆ ದುಷ್ಟರುದಯವು।**
**ಕಂತು ಹರವಿಧಿ-ಹರಿಯ ಮೆಚ್ಚಿಸಿ ಘೋರ ತಪದಿಂದಾ ॥**
**ನಿಂತು ತುದಿಗಾಲಿಂದ ತಪವಾ। ನಂತ ಕಾಲದಿ ಎಸಗಿ ವಿಧಿಯಿಂ।**
**ಅಂತ ಕಾಂತಕನಿಂದ ಮರಣವು ಎಂದು ವರಪಡೆದಾ ॥ ೨ ॥**

**ಮಲ್ಲ ಮಣಿಕದ್ವಯರು ಮೆರೆದರು । ಎಲ್ಲೆ ನಮಗಿಲ್ಲೆಂದು ದಿವಿಜರ ।**
**ನೆಲ್ಲ ಸೋಲಿಸಿ ಕಪ್ಪುಕಾಣಿಕೆ ಪಡೆದರವರಿಂದಾ ॥**
**ಸೊಲ್ಲನಡಗಿಸಿ ಸರ್ವರಾಜರಿ। ಗೆಲ್ಲ ಅಧಿಪತಿಯಾಗಿ ಮೆರೆಯುತ ।**
**ಫುಲ್ಲ ತುಂಗೆಯ ತೀರದಲಿ ಸಾಮ್ರಾಜ್ಯವನು ರಚಿಸೀ ॥ ೩ ॥**

**ಶಬ್ದಾರ್ಥ-** ಇಂತು = ಹೀಗೆ ; ಆದಿ = ಪ್ರಾರಂಭ; ಅಂತು ಬಂದಿದೆ = ನಡೆದು ಬಂದಿದೆ; ಕಂತುಹರ = ಶಿವ; ಹರಿ = ವಿಷ್ಣು; ವಿಧಿ = ಬ್ರಹ್ಮ; ಅಂತಕಾಂತಕ = ಪರಮೇಶ್ವರ; ಎಲ್ಲೆ = ಸರಿಸಾಟಿ; ದಿವಿಜ = ದೇವತೆಗಳು ; ಸೊಲ್ಲನಡಗಿಸಿ = ಸೊಕ್ಕನ್ನಿಳಿಸಿ; ಫುಲ್ಲ = ತುಂಬಿದ; ಅಧಿಪತಿ = ಚಕ್ರವರ್ತಿ; ರಚಿಸಿ = ನಿರ್ಮಾಣಮಾಡಿ.

**ಭಾವಾರ್ಥ-** ಸತ್ವಗುಣ ಪ್ರಧಾನರಾದ ದೇವತೆಗಳನ್ನು, ಅಸತ್ಯವಾದಿಗಳಾದಂಥಾ ದೈತ್ಯರು ಕೃತಯುಗದ ಆದಿಕಾಲದಿಂದಲೂ ದ್ವೇಷಿಸುತ್ತ ವೈರಕಟ್ಟಿಕೊಂಡೇ ಬಂದಿರುತ್ತಾರೆ. ಇದು ಸರ್ವಪುರಾಣಗಳಲ್ಲಿಯೂ ಕೇಳಿಬರುವ ಶತಸ್ಸಿದ್ಧವಾದ ಮಾತು! ದೇವತೆಗಳ ಸತ್ವವನ್ನು ಸೂರೆಗೊಳ್ಳುವದಕ್ಕಾಗಿ ಹಟತೊಟ್ಟು, ದಿನನಿತ್ಯವೂ ಸಾತ್ವಿಕ ಜೀವಿಗಳನ್ನು ಕಾಡಿ, ತೊಂದರೆ ಕೊಡುವದೇ ದೈತ್ಯರ ಆದ್ಯ ಕರ್ತವ್ಯವೆಂದರೂ ತಪ್ಪಾಗಲಿಕ್ಕಿಲ್ಲಾ! ಇದು ಕೃತಯುಗದ ಆದಿಕಾಲದಿಂದಲೂ ನಡೆದುಕೊಂಡು ಬಂದಂಥಾ ವಿಷಯವಾಗಿದೆ. ತಮ್ಮ ಘನಘೋರವಾದ ತಪಸ್ಸಿನಿಂದ ಹರಿ, - ಹರ, ಬ್ರಹ್ಮಾದಿಗಳನ್ನು ಸಾಕ್ಷಾತ್ಕಾರ ಮಾಡಿಕೊಂಡು, ಅವರಿಂದಾ ಅಮೋಘವಾದ ವರಗಳನ್ನು ಪಡೆದುಕೊಂಡು, ನಂತರ ಅಜೇಯರಾಗಿ ಸೊಕ್ಕಿ ಮೆರೆಯುವದೇ ರಾಕ್ಷಸರ ಪದ್ಧತಿಯಾಗಿದೆ. ಇದೇ ರೀತಿಯಾಗಿ ಕೃತಯುಗದ ಆದಿ ಭಾಗದಲ್ಲಿ ಮಲ್ಲಾಸುರ, ಮಣಿಕಾಸುರರೆಂಬ ಇಬ್ಬರು ದೈತ್ಯ ಬಂಧುಗಳು, ಪಿತಾಮಹನೆನಿಸುವಂಥಾ ಬ್ರಹ್ಮದೇವರನ್ನು ಕುರಿತು, ಅಖಂಡ ಕಾಲ ಕೇವಲ ತುದಿ ಬೆರಳಿನ ಮೇಲೆಯೇ ನಿಂತುಕೊಂಡು, ಗಾಳಿಯನ್ನೇ ಆಹಾರವನ್ನಾಗಿ ಮಾಡಿಕೊಂಡು, ಅರ್ಥಾತ್ ನಿರಾಹಾರಿಗಳಾಗಿಯೇ ಬಹುಕಾಲದಿಂದ ತಪ್ಪವನ್ನಾಚರಿಸಿದರು. ತಮ್ಮ ಉಗ್ರ ತಪಸ್ಸಿನಿಂದ ಬ್ರಹ್ಮದೇವರನ್ನು ಮೆಚ್ಚಿಸಿಕೊಂಡು, ಕೇವಲ ನರರೂಪಿ ಶಿವನೊಬ್ಬನಿಂದಲೇ ತಮಗೆ ಮರಣ ಉಂಟಾಗಬೇಕೇ ಹೊರತು, ಬೇರೆಯಾರಿಂದಲೂ ನಮ್ಮನ್ನು ಗೆಲ್ಲೋದಕ್ಕೆ ಸಾಧ್ಯವಾಗಬಾರದೂ'' ಅಂತಾ

ಅಮೋಘವಾದ ವರ ಒಂದನ್ನು ಪಡೆದುಕೊಂಡರು, ಆ ನಂತರ ತಮಗೆ " ಸರಿ ಸಮಾನರಾದ ಶೂರರಾರೂ ಈ ಭೂಮಂಡಲದಲ್ಲಿ ಇಲ್ಲಾऽ " ಅನ್ನೋ ಗರ್ವದಿಂದಾ ಸ್ವರ್ಗಕ್ಕೆ ದಾಳಿಯಿಟ್ಟು ಅಷ್ಟದಿಕ್ಪಾಲಕರನ್ನು ಯುದ್ಧದಲ್ಲಿ ಸೋಲಿಸಿ, ಅವರಿಂದಾ ಹೇರಳವಾದ ಕಪ್ಪುಕಾಣಿಕೆಗಳನ್ನೂ ವಜ್ರ ವೈಢೂರ್ಯಾದಿ, ಅಗಣಿತವಾದ ಧನ ಸಂಫತ್ತನ್ನು ಪಡೆದುಕೊಂಡು ಭೂಮಿಗೆ ಬಂದರು. ಮತ್ತೂ ಭೂಲೋಕದಲ್ಲಿದ್ದಂಥಾ ಸಮಕಾಲೀನ ದೊರೆಗಳನ್ನೆಲ್ಲಾ ಸೋಲಿಸಿ, ತಾವೇ ಸಮ್ರಾಟರಾಗಿ ತುಂಗಭದ್ರಾ ನದಿಯ ದಂಡೆಯಮೇಲೆ ಸುಂದರವಾದ ಕೋಟೆಯೊಂದನ್ನು ನಿರ್ಮಿಸಿಕೊಂಡು, ತಾವೇ ವೈಭವದಿಂದಾ ರಾಜ್ಯಭಾರ ನಡಿಸಿಕೊಂಡು ಹೊರಟ್ಟಿದ್ದರು. ಅಂಥಾ ಪ್ರಸಂಗದಲ್ಲಿ ಏನಾಯ್ತೂ ಅಂದರೆ-

ಒಂದು ದಿನದೊಳು ಮಲ್ಲ ಮಣಿಕರು। ಹೊಂದಿ ಸತಿಸುತ ಮಂತ್ರಿ ಸೇನಾ ।
ವೃಂದ ಸಹಿತದಿ ಸಾಲು ಮೇಣೆಯ ನೇರಿ ಹೊರಟಿರಲು ॥
ಮಿಂದು ನದಿಯೋಳ್ ಕ್ರೀಡೆಯಾಡಿ ಸು।ನಂದದಿಂ ಮಣಿಚೂಲ ಪರ್ವತ ।
ದಂಡವನು ನೋಡುತ್ತ ಮೆಚ್ಚುತೆ ಮುಂದೆ ಸಾಗಿರಲು ॥೪॥

ಕೇಳಿತಾಗಲೆ ವೇದ ಘೋಷಣೆ । ತಾಳಿ ವಿಸ್ಮಯ ದೈತ್ಯ ನಿಕರವು ।
ಪೇಳಿದರ್ ದೊರೆಗಳಿಗೆ ಅಲ್ಲಿಹ ಕೌತುಕದ ವಾರ್ತೇ ॥
ಆಳನಟ್ಟಿಸಿ ಮಲ್ಲ ಮಣಿಕರು । ಕೇಳಿ ತಿಳಿದರು ಸರ್ವ ವಾರ್ತೆಯ ।
ಧೂಳಿ ಪಟ ಮಾಡುವದು ಆಶ್ರಮ ವೆಂದು ಬೆಸೆಯಲ್ಕೇ ॥ ೫ ॥

**ಸುಖ ವಿಹಾರವ ಮುಗಿಸಿ ಬರುತಿರೆ । ರಕುತ ದೊರಕಿತು ನರರದೆನ್ನುತ ।**
**ಕುಕುಬನಿಕ್ಕುತ ದೈತ್ಯ ಸೇನೆಯು ಹೊಕ್ಕಿತಾಶ್ರಮವಾ ॥**
**ನಿಕರಗೊಂಡಿಹ ದೈತ್ಯ ಕೇಕೆಗೆ । ಅಖಿಲ ಪಶುಗಳ್ ಬೆದರಿ ಜಿಗಿದವು ।**
**ಶುಕಪಿಕಾದಿಗಳೆಲ್ಲ ಭುರ‍್ರನೆ ಜಿಗಿದವಾಗಸಕೇ ॥ ೬ ॥**

ಶಬ್ದಾರ್ಥ - (೪ರಿಂದ೬) ಸೇನಾ ವೃಂದ = ಚತುರಂಗ ಬಲ; ಮೇಣೆ = ಪಲ್ಲಕ್ಕಿ; ಮಿಂದು = ಸ್ನಾನಮಾಡಿ; ಜಲಕ್ರೀಡೆ = ಈಜಾಟ; ಅಂದ = ಸೌಂದರ್ಯ; ನಿಕರ = ಗುಂಪು; ಧೂಳಿಪಟಮಾಡು = ನಾಶಮಾಡು; ಆಶ್ರಮ = ಋಷಿಗಳ ಪರ್ಣಕುಟಿರ; ಸುಖವಿಹಾರ = ವನವಿಹಾರ; ನರ = ಮನುಷ್ಯ ; ರಕುತ = ರಕ್ತ; ಕುಕುಬು = ಕೇಕೆ; ಆಗಸ = ಆಕಾಶ.

ಭಾವಾರ್ಥ- (೪ರಿಂದ೬) ಒಂದು ದಿವಸ ದೈತ್ಯ ಚಕ್ರವರ್ತಿಗಳಾಗಿದ್ದಂಥಾ ಮಲ್ಲಾಸುರ, ಮಣಿಕಾಸುರರು, ತಮ್ಮ ಹೆಂಡಿರು ಮಕ್ಕಳನ್ನೂ, ಮಂತ್ರಿ ಸೇನಾಪತಿಗಳನ್ನೂ, ಒಡಗೂಡಿಕೊಂಡು, ಸಾಲು ಸಾಲಾಗಿರುವ ಪಲ್ಲಕ್ಕಿಗಳಲ್ಲಿ ಕುಳಿತುಕೊಂಡು, ವನವಿಹಾರಕ್ಕೆಂದು ಹೊರಟರು. ಅವರು ಭವ್ಯವಾದಂಥಾ ತುಂಗಭದ್ರಾನದಿಯಲ್ಲಿ ಮನಸೋಕ್ತವಾಗಿ ಜಲಕ್ರೀಡೆಯಾಡಿ ಮಣಿಚೂಲ ಪರ್ವತದ ಸೃಷ್ಟಿ ಸೌಂದರ್ಯವನ್ನು ನೋಡುತ್ತ, ಆನಂದ ಪುಲಕಿತರಾಗಿ ಪ್ರಯಾಣ ಮಾಡುತ್ತಿದ್ದರು. ಆ ಸಮಯದಲ್ಲಿ ದೈತ್ಯ ಸೇನೆಯಲ್ಲಿದ್ದ ಕೆಲವರಿಗೆ, ವೇದಗಳನ್ನು ಘೋಷಿಸುತ್ತಿರುವಂಥಾ ಶಬ್ದವು ಕಿವಿಗೆ ಬಿತ್ತು. ಕೂಡಲೇ ಅವರು ತಮ್ಮ ಚಕ್ರವರ್ತಿಗಳಿಗೆ ಆ ವಿಸ್ಮಯ ವಾರ್ತೆಯನ್ನು ತಿಳಿಸಿದರು. ಮಲ್ಲಾಸುರನು ತಕ್ಷಣವೇ ಗುಪ್ತ ಚಾರರನ್ನಟ್ಟಿ ಆ ಆಶ್ರಮದ ವಾರ್ತೆಯನ್ನೆಲ್ಲಾ ಕೇಳಿ ತಿಳಿದುಕೊಂಡನು. ಮತ್ತೂ ತನ್ನ ಅನುಮತಿಯಿಲ್ಲದೇ ಅಲ್ಲಿ ಆಶ್ರಮ ರಚಿಸಿಕೊಂಡು, ದೈತ್ಯರಿಗೆ ನಿಷಿದ್ಧವಾಗಿದ್ದ ಯಜ್ಞಯಾಗಾದಿಗಳಂಥ ಪುಣ್ಯ ಕಾರ್ಯಗಳನ್ನು ಮಾಡುತ್ತಿರುವ ಋಷಿಗಳ ಬಗ್ಗೆ ಅವನಲ್ಲಿ ಕೋಪ ಉಂಟಾಯಿತು. ಆತನು ಹಿಂದು ಮುಂದಿನ ವಿಚಾರ ಮಾಡದೇ ''ಎಲೋ; ನೀವೆಲ್ಲಾ ಹೋಗಿ ಆ ಋಷ್ಯಾಶ್ರಮವನ್ನು ನಿರ್ಮೂಲ ಮಾಡಿ ಬಿಡಿರಿ !'' ಅಂತಾ ತನ್ನ ಸೇನಾನಿಗಳಿಗೆ ಆಜ್ಞೆ ಮಾಡಿ ಬಿಟ್ಟಾ !... ಕೂಡಲೇ ಕೇಳುವದೇನು; ? ಮೊದಲೇ ಕ್ರೂರ ರಕ್ಕಸರು ! ರಾಜನಿಂದ ಇಷ್ಟು ಅವಕಾಶ ಸಿಕ್ಕದ್ದೇ ಸಾಕಾಯ್ತು ! ''ನಾವು ಸುಖವಿಹಾರವನ್ನು ಮುಗಿಸಿಕೊಂಡು ಬರುವಷ್ಟರಲ್ಲಿಯೇ

ಮಾನವರ ರಕ್ತದ ಮಹಾ ಊಟಾ ನಮಗಾಗಿ ಕಾಯ್ದುಕೊಂಡು ಕುಳಿತಿದೆಯಲ್ಲಾ'' ಅಂತ ಅವರೆಲ್ಲಾ ಆನಂದದಿಂದಾ ಕೇಕೆ ಹಾಕಿದರು. ಮತ್ತು ಆ ಪವಿತ್ರ ಪುಣ್ಯಾಶ್ರಮಕ್ಕೆ ದಾಳಿಯಿಕ್ಕಿದರು. ದೈತ್ಯರ ಘನ ಘೋರವಾದ ಕೇಕೆಯ ಶಬ್ದಕ್ಕೆ ಆಶ್ರಮದಲ್ಲಿದ್ದ ಆಕಳುಗಳು, ಜಿಂಕೆ, ಕಡವೆ ಮುಂತಾದ ಸಾಕು ಪ್ರಾಣಿಗಳು ಬೆದರಿ ಕಿವಿ ನಿಮಿರಿಸಿಕೊಂಡು ಜಿಗಿದಾಡತೊಡಗಿದವು. ಆಶ್ರಮದ ಅಂಗಳದಲ್ಲಿದ್ದ ಗಿಳಿ, ಕೋಗಿಲೆ, ಪಾರಿವಾಳ ಮುಂತಾದ ಪಕ್ಷಿ ಸಮುದಾಯವು ಆ ದೈತ್ಯ ಕೇಕೆಯಿಂದ ತಲ್ಲಣಗೊಂಡು, 'ಭುರ್' ಅಂತಾ ಆಕಾಶದ ಕಡೆಗೆ ಒಮ್ಮಿಂದೊಮ್ಮಿಲೇ ಜಿಗಿದು ಕಣ್ಮರೆಯಾದವು.

ಕುಕ್ಕಿ ಕಡಿದರು ವೃಕ್ಷ ಸಂಪದ । ಇಕ್ಕಿದರು ಬೆಂಕಿಯನು ಕುಟಿರಕೆ ।
ಸಿಕ್ಕ ಋಷ್ಯಾಶ್ರಮದ ಸತಿಯರ ಮುತ್ತಿ ಕಾಡಿದರೂ ॥
ಲೆಕ್ಕವಿಲ್ಲದ ಬಾಲ ವಟುಗಳ । ನಿಕ್ಕರಿಸಿ ಎಳೆ ತಂದು ಬಾವುಗ ।
ಬೆಕ್ಕು ಮರಿ ಇಲಿ ಬೇಂಟೆಯಾಡಿದ ತೆರದಿ ಕುಕ್ಕುತಲೀ ॥ ೭ ॥

ಹಿಡಿದು ಚಂಡಿಕೆ ಹೊಡಿಸೆ ಡಿಕ್ಕಿಯ । ಒಡೆದು ರಾಮಾ ರಕ್ತವಾದವು ।
ಮಿಡುಕಿ ಗೋಳಿಟ್ಟವರ ನೂಕಿದರಾಳ ಕೂಪದಲಿ ॥
ಜಡಿದರ್ಕೈ ಹೆಂಗಳೆಯರೆಲ್ಲರ । ಜಡೆಯ ಜಗ್ಗುತ ಶೀಲ ತೀತದ ।
ನುಡಿಯ ನುಚ್ಚರಿಸುತ್ತ ಗೋಳಿಡಿಸಿದರು ನಗುನಗುತಾ ॥ ೮ ॥

**ಶಿಖಿಗೆ ಯಜ್ಞಾಹುತಿಯ ನಿಕ್ಕುವ । ಅಖಿಲ ಋಷಿಗಳಿಗಾಯ್ತು ದಿಗ್‌ಭ್ರಮೆ ।**
**ಸಖಿ ಸುತಾದಿಗಳ ಚೀತ್ಕಾರವನು ಕೇಳುತಲಿ ॥**
**ಟಕ ಮಕದಲತ್ತಿತ್ತ ನೋಡಲ್ । ಮುಕುರಿ ಕೊಂಡರು ಅಗ್ನಿಸುತ್ತಲು ।**
**ಮುಕುರಿ ಯಜ್ಞವ ಮಾಡುತಿರ್ಪಾಯತಿಗಳಾ ಬಳಿಗೆ ॥ ೯ ॥**

ಶಬ್ದಾರ್ಥ – (೭,೮,೯) ವೃಕ್ಷ ಸಂಪದ = ವನಸಂಪತ್ತು ; ಇಕ್ಕು = ಇಡು ; ಕುಟಿರ = ಆಶ್ರಮ; ವಟು = ಬ್ರಹ್ಮಚಾರಿ ; ಇಕ್ಕು = ಹೊಡೆ; ಇಕ್ಕರಿಸಿ = ಬಡಿದು; ಬಾವುಗ = ಗಂಡು ಬೆಕ್ಕು; ಬೇಂಟೆ = ಬೇಟೆ; ಮಿಡುಕಿ = ನೊಂದು; ಗೋಳಿಡೆ = ಗೋಳಿಟ್ಟಾಗ; ನೂಕು = ದೂಡು; ಆಳಕೂಪದಲಿ = ಆಳವಾದ ಕಂದಕಕ್ಕೆ; ಹೆಂಗಳೆ = ಹೆಣ್ಣುಮಕ್ಕಳು; ಜಡೆ = ಹೆಳಲು; ಶೀಲತೀತ = ಅಶ್ಲೀಲ; ನುಡಿ = ಮಾತು; ಉಚ್ಚರಿಸು = ಮಾತಾಡು ; ಗೋಳಿಡಿಸು = ಗೋಳಾಡಿಸು ಶಿಖಿ = ಅಗ್ನಿ; ಅಖಿಳ = ಎಲ್ಲ; ದಿಗ್ ಭ್ರಮೆ = ದಿಕ್ಕು ತೋಚದಂತಾಗು; ಸಖಿ = ಹೆಂಡತಿ; ಚೀತ್ಕಾರ = ಅಳುವಧ್ವನಿ; ಮುಕುರು = ಮುತ್ತು; ಅಗ್ನಿ = ಬೆಂಕಿ.

**ಭಾವಾರ್ಥ-** (೭,೮,೯) ಆ ರಾಕ್ಷಸರು ತಮ್ಮ ಖಡ್ಗಗಳಿಂದ ಆಶ್ರಮದ ವನಸಂಪತ್ತನ್ನೆಲ್ಲ ಕತ್ತರಿಸಿ ಹಾಕಿದರು. ಆಶ್ರಮದಲ್ಲಿದ್ದ ಪರ್ಣಕುಟಿರಗಳಿಗೆ ಬೆಂಕಿ ಹಚ್ಚಿದರು. ಕೈಗೆ ಸಿಕ್ಕ ಆಶ್ರಮದ ಸ್ತ್ರೀಯರನ್ನೆಲ್ಲ ಮುತ್ತಿಕೊಂಡು ಗೋಳಾಡಿಸ ತೊಡಗಿದರು. ಅಸಂಖ್ಯಾತರಾದ ಆಶ್ರಮದ ಬಾಲ ವಟುವಗಳನ್ನು ಹೊಡೆದು, ಎಳೆದು ತಂದರು. ಬಾವುಗ (ಗಂಡು ಬೆಕ್ಕು ) ಇಲೀ ಮರಿಗಳ ಬೇಟೆಯಾಡಿದಂತೆ ಅವರನ್ನೆಲ್ಲ ಕುಕ್ಕಿ ಕುಕ್ಕಿ ನೋಯಿಸ ತೊಡಗಿದರು. ಆ ಬಾಲ ವಟುಗಳ ಚಂಡಿಕೆಯನ್ನು ಹಿಡಿದು, ಒಬ್ಬರಿಂದೊಬ್ಬರಿಗೆ ಡಿಕ್ಕೀ ಹೊಡಿಸಿ ನಗತೊಡಗಿದರು. ಆ ಡಿಕ್ಕಿಗಳ ಹೊಡೆತದಿಂದಾಗಿ ಅದೆಷ್ಟೋ ವಟುಗಳ ತಲೆಗಳೊಡೆದು ರಾಮಾರಕ್ತವಾದವು. ಆ ನೋವಿನಿಂದ ಚೀತ್ಕಾರ ಮಾಡಿದವರನ್ನೆಲ್ಲ , ಆ ದುಷ್ಟರು ಆಳವಾದ ಕಂದಕದಲ್ಲಿ ನೂಕಿ ಬಿಟ್ಟರು. ಆಶ್ರಮದ ಹೆಣ್ಣು ಮಕ್ಕಳನ್ನೆಲ್ಲ ಜಡೆ ಹಿಡಿದು ಜಗ್ಗುತ್ತ, ಅವರಿಗೆ ಅಶ್ಲೀಲ ಮಾತುಗಳನ್ನಾಡುತ್ತ, ನಗುತ್ತ ಕೇಕೆ ಹಾಕಿದರು. ಅಗ್ನಿ ನಾರಾಯಣ ನಿಗೆ ಯಜ್ಞಾಹುತಿ

ಯನ್ನಿಕ್ಕುತ್ತಿರುವಂಥ ಮುನಿಗಳು, ಹೆಂಡರು ಮಕ್ಕಳ ಆ ಆರ್ತ ಸ್ವರವನ್ನು ಕೇಳಿ ದಿಘ್ಭ್ರಮೆಗೊಂಡುರು. "ಇದೇನಾಯಿತೆಂದು" ಅವರು ಅತ್ತಿತ್ತ ನೋಡುವಷ್ಟರಲ್ಲಿಯೇ ರಾಕ್ಷಸ ಸಮೂಹವು ಒಳಗೆ ಬಂದಿತು. ಅಗ್ನಿಯ ಸುತ್ತಲೂ ಕುಳಿತುಕೊಂಡು, ಯಜ್ಞ ಮಾಡುತ್ತಿರುವ ಋಷಿಗಳನ್ನು ಅವರು ಮುತ್ತಿಕೊಂಡರು.

ಕಾರುತಲಿ ಕೆಂಡವನು ಉಗ್ರರು । ಮೀರು ರಾಕ್ಷಸ ಮಣಿಕ ಮಲ್ಲರು ।
ಘೋರ ಸುತರಾ ಕುಂಭಶೂಲಾದಿಗಳು ಸಹಿತಾಗೀ ॥
ತೂರಿ ಒಗೆದರು ಸಪ್ತ ಋಷಿಗಳ । ಕಾರುತಲಿ ಕಿಡಿಗಳನು ಕಣ್ಣಲಿ ।
ಮೀರೆದಪ್ಪಿದ ಮಾತನಾಡುತ ಹೇಯ ನುಡಿಗಳಲೀ ॥ ೧೦ ॥

ದಾಡಿ ಜಟೆಗಳನೆಳೆದು ಅಲುಗಿಸಿ । ನೀಡಿ ಕೈ ಕೆಡಹಿದರು ಸರ್ವರ ।
ದಾಡಿಗಗ್ನಿಯ ನಿಟ್ಟು ನಕ್ಕರು ಕ್ರೂರತನದಿಂದಾ ॥
ಬಾಡಿದಾ ಮುನಿವರರು ಬೆಂಕಿಯ । ನೋಡಿ ಬೆಚ್ಚುತೆ ಹಿಂದೆ ಸರಿಯಲು ।
ನೀಡುವನು ಈ ಅಗ್ನಿ ತಂಪನು ಬೇಡಭಯವೆನು ತಾ ॥ ೧೧ ॥

ಖೋಡಿ ರಕ್ಕಸರ್ಧ್ವಾರಿ ನಗುತಲಿ । ತೀಡಿದರು ಕೆಂಪಾದ ಚುಚ್ಚುಗ ।
ದಾಡಿ ಮೇಲೆಳೆದೆಳೆದು ಅಗ್ನಿಗೆ ಬೇಡಿಕೊಳಿರೆನುತಾ ॥
ನೀಡಿ ಆಜ್ಯವ ಸುರಿದ ಅಗ್ನಿಯು । ನೀಡನೇ ನಿಮಗಭಯವೆನ್ನುತ ।
ಕೇಡಿಗಳ್ ಬಿರುನುಡಿಯನಾಡುತ ಗೋಳ ನಿಡಿಸಿದರೂ ॥ ೧೨ ॥

**ಏನು ಪೇಳಲಿ ಅವರ ಕ್ರೌರ್ಯವ । ಮಾನ ನಿಧಿಗಳು ಬೆಂದು ಪೋದರು ।**
**ಹೀನ ಪಶುಗಳ ತೆರದಿ ಎಳೆದರು ಪಾಶ ಸಿಕ್ಕಿಸುತ॥**
**ಪಾನದುದಕದಿ ಮುಳುಗಿಸುತ ಅನು। ಮಾನವಿಲ್ಲದೆ ಗೋಳ ಹೊಯ್ದರು।**
**ಧೇನ ಕೆಚ್ಚಲು ಕೊಯ್ದು ರಕುತವ ನೀಂಟಿದರು ಖಲರು ॥ ೧೩ ॥**

ಶಬ್ದಾರ್ಥ - (೧೦ರಿಂದ ೧೩ ) ಉಗ್ರರು = ಕೇಡಿಗರು ; ಮೇರು = ಮುಖ್ಯ ; ಘೋರ = ದುಷ್ಟ; ಹೇಯ ನುಡಿ = ಕೆಟ್ಟಮಾತು
ದಾಡಿ = ಗಡ್ಡ; ಜಟೆ = ತಲೆಗೂದಲು: ಆಲುಗಿಸು = ಅಲ್ಲಾಡಿಸು ಕೆಡಹು = ಕೆಳಕ್ಕೆ ಬಿಸಾಕು; ಬೆಚ್ಚು = ಹೆದರು;
ಹಾರಿನಗುತ = ಬಿದ್ದು ಬಿದ್ದು ನಗುತ್ತ; ತೀಡು = ತಿಕ್ಕು; ಆಜ್ಯ = ತುಪ್ಪ; ಖೋಡಿ = ಕೇಡಿ ; ಕೆಂಪಾದ ಚುಚ್ಚುಗ = ಕಾಯ್ದ ಸಳಿ;
ಆಭಯ = ರಕ್ಷಣೆ ; ಕೇಡಿ - ಕೆಟ್ಟವನು ಗೋಳನಿಡಿಸು = ಗೋಳಾಡಿಸು; ಕ್ರೌರ್ಯ = ಕ್ರೂರತನ;
ಮಾನ ನಿಧಿಗಳು = ಮರ್ಯಾದೆವಂತರು; ಗೋಣು = ಕುತ್ತಿಗೆ; ಉದಕ = ನೀರು.

**ಭಾವಾರ್ಥ-** (೧೦ರಿಂದ ೧೩) ಉಗ್ರರಾಕ್ಷಸರಾದ ಮಲ್ಲ ಮಣಿಕರೂ. ಮತ್ತು ಅವರ ಮಕ್ಕಳಾದ ಕುಂಭಶೂಲ ಮುಂತಾದ ದುಷ್ಟರು ಕೂಡಿಕೊಂಡು; ಮುನಿಗಳ ಮೇಲೆ ಕೆಂಡ ಕಾರುತ್ತ ಅವರನ್ನೆಲ್ಲ ಎಳೆದು ತೂರಿತೂರಿ ಒಗೆದರು. ಕೆಂಗಣ್ಣಿನಿಂದ ನೋಡುತ್ತ, ಕೆಟ್ಟ ಮಾತುಗಳನ್ನಾಡುತ್ತ, ಮುನಿಗಳ ಗಡ್ಡ ಜಡೆಗಳನ್ನು ಜಗ್ಗಾಡ, ತೊಡಗಿದರು. ಸಪ್ತರ್ಷಿಗಳನ್ನು ನೆಲಕ್ಕೆ ಕೆಡವಿ, ಅವರ ಗಡ್ಡಕ್ಕೆ ಬೆಂಕಿ ಹಚ್ಚಿ ನಗತೊಡಗಿದರು. ಕಂಗಾಲಾದ ಮುನಿಗಳು ಬೆಂಕಿ ಗಂಜಿ ದೂರ ಸರಿದಾಗ, ಬಿದ್ದು ಬಿದ್ದು ನಗತೊಡಗಿದರು. ಮತ್ತೂ ಆ ಮುನಿಗಳನ್ನು ಕುರಿತು, " ಈ ಬೆಂಕಿಗೇಕೆ ಅಂಜುವಿರಿ ? ನೀವು ಅಗ್ನಿಗೆ ತುಪ್ಪ ಸುರಿದು ಹೋಮ ಮಾಡಿದವರು !... ಅಂದ ಬಳಿಕ ಅಗ್ನಿನಾರಾಯಣನು ನಿಮ್ಮನ್ನು ರಕ್ಷಿಸಲಾರನೇ " ? ಎಂದು ಹಾಸ್ಯ ಮಾಡುತ್ತ ಅವರ ಗಡ್ಡಗಳಿಗೆ ಕಾಯ್ದ ಸಲಾಕೆಯಿಂದ ತಿಕ್ಕಿದರು. ಅಬ್ಬಾ! ಆ ರಾಕ್ಷಸರ ದುಷ್ಟತನವನ್ನು ಎಷ್ಟೆಂದು ವರ್ಣಿಸಲಿ? ಅವರ ದುಷ್ಟತನದಿಂದ ಮುನಿಗಳು ಮುಖ ಸುಟ್ಟುಕೊಂಡರು. ನಂತರ ಅವರನ್ನು ಅಷ್ಟಕ್ಕೇ ಕೈ ಬಿಡದೇ, ಏಳು ಹಗ್ಗಗಳನ್ನು ತರಿಸಿ, ಏಳೂ ಮುನಿಗಳ ಕೊರಳಿಗೆ ಉರುಲು ಹಾಕಿದರು. ಗಾಣದ ಎತ್ತಿನಂತೆ ಅವರನ್ನೆಲ್ಲಾ ಎಳೆಯುತ್ತಾ ಬಾವಿಯ ಬಳಿಗೆ ಬಂದು ಅವರ ಕೊರಳಿಗೆ ಉಕ್ಕಡ ಹಾಕಿ ನೀರಿನಲ್ಲಿ ಮುಳು ಮುಳುಗಿಸಿ ಎಬ್ಬಿಸತೊಡಗಿದರು.

ಬಳಿಕ ಆಜ್ಞೆಯನಿತ್ತ ಮಲ್ಲನು । ಒಳಿತು ಇವರನು ಕೊಲ್ಲಬೇಡಿರಿ ।
ಇಳೆಯೊಳಿರಲೀ ಜನರು ನಮ್ಮಯ ಕ್ರೀಡೆಗನುವಾಗೀ ॥
ಬಳಲಿ ಬೇಸರಗೊಂಡ ಸಮಯದಿ। ಬಲಿಯ ನಿಕ್ಕುವ ಮಾರಿಗಿವರನು ।
ಉಳಿಯಲಲ್ಲಿಯ ವರೆಗೆ ಜೀವನ್ಮೃತರ ತೆರನಾಗೀ ॥ ೧೪ ॥

ಒಡೆಯ ನಾಜ್ಞೆಗೆ ಸಕಲ ಸೈನಿಕ । ರೊಡೆಯರೊಪ್ಪುತ ತೂಗಿ ತಲೆಗಳ ।
ಬಿಡುತ ಅರೆ ಜೀವದಲಿ ಹೊರಟರು ದಂಡು ಶೇಖರಿಸಿ ॥
ಸುಡುವ ಅಗ್ನಿಂಗೆರಚಿ ನೀರನು । ಬಿಡದೇ ಆರಿಸಿ ಕುಳಿತು ಕಟ್ಟೆಗೆ ।
ಕುಡಿದರ್‍ಲೆ ಮದ್ಯವನು ಕುಂಡದಿ ಹೊಯ್ದು ಮೂತ್ರವನೂ ॥ ೧೫ ॥

ಮುರಿದು ರೆಂಬೆಯ ತರಿದು ಕಾಯ್ಗಳ । ನೆರಚಿ ಚಲ್ಲಾಪಿಲ್ಲಿಯಾಗಿರೆ ।
ಕರಿಗಳಂ ತಿರುವಿದರು ಮಾವುತರೆಲ್ಲ ಕೂಡುತಲಿ ॥
ತರುಗಳೆಲ್ಲವು ಮೊಟಕು ಗೊಂಡುವು । ತುರುಗಳೆಲ್ಲವು ಕೊಯ್ದು ಕೆಚ್ಚಲ ।
ದುರುಪಿನಿಂ ಗೋಳಿಟ್ಟು ಬೊಬ್ಬೆಯ ಹೊಡೆಯ ತೊಡಗಿದವು॥ ೧೬॥

ಶಬ್ದಾರ್ಥ - ಇಳೆ = ಭೂಮಿ; ಕ್ರೀಡೆಗನುವಾಗಿ = ಆಟಕ್ಕೆ ಅನುಕೂಲವಾಗಿ; ಮಾರಿ = ದುರ್ಗಾದೇವತೆ; ಬಲಿ = ಆಹುತಿ; ಜೀವನ್ಮೃತ = ಇದ್ದೂ ಸತ್ತವನು; ಶೇಖರಿಸು = ಕೂಡಿಸು; ಮದ್ಯ = ಸರಾಯಿ; ಕುಂಡದಿ = ಅಗ್ನಿ ಕುಂಡದಲ್ಲಿ; ಮೂತ್ರ = ಉಚ್ಚೆ; ರೆಂಬೆ = ಟೊಂಗೆ; ತರಿದು = ಹರಿದು; ಎರಚು = ಒಗೆ; ಚಲ್ಲಾಪಿಲ್ಲಿ = ಸೂರೆ; ಕರಿ = ಆನೆ; ಮಾವುತ = ಆನೆಯನ್ನು ನಡಿಸುವವ; ಮೊಟಕು = ಮೋಟ; ತುರು = ಆಕಳು; ಉರುಪು = ನೋವು ; ಬೊಬ್ಬೆಹೊಡೆ = ಶುಖವಾದ್ಯಮಾಡು.

**ಭಾವಾರ್ಥ** - (೧೪ರಿಂದ ೧೬) ನಂತರ ದೈತ್ಯ ಚಕ್ರವರ್ತಿಯಾದ ಮಲ್ಲಾಸುರನು; "ಒಳ್ಳೇದು ಇವರನ್ನು ಈಗಲೇ ಕೊಲ್ಲಬೇಡಿರಿ! ಇವರು ನಮ್ಮ ಕ್ರೀಡೆಗೆ ಅನುಕೂಲರಾಗಿ ಭೂಮಿಯಲ್ಲಿ ಜೀವಿಸಿರಲಿ! ನಾವುಗಳೆಲ್ಲ ಬಳಲಿ ಬೇಸರಗೊಂಡಾಗ, ಇವರನ್ನು ಮಾರೀದೇವಿಗೆ ಬಲಿಕೊಟ್ಟು ಮಾನವರಕ್ತ ಸೇವಿಸೋಣ ಅಲ್ಲಿಯ ವರೆಗೆ ಇವರೆಲ್ಲಾ ಜೀವನ್ಮೃತರಂತೆ ಬದುಕಿಕೊಂಡಿರಲಿ!" ಎಂದು ಆಜ್ಞೆ ಮಾಡಿದನು. ಚಕ್ರವರ್ತಿಯ ಆಜ್ಞೆಗೆ ಸೇನಾಧಿಕಾರಿಗಳೆಲ್ಲ ಒಪ್ಪಿ ತಲೆದೂಗಿದರು. ಹಾಗೂ ಮುನಿಗಳನ್ನೂ, ಅವರ ಪರಿವಾರವನ್ನೂ, ಅರೆಜೀವದಿಂದ ಬಿಟ್ಟು ತಮ್ಮ ತಮ್ಮ ಚತುರಂಗ ಬಲವನ್ನು ಒಂದುಗೂಡಿಸುವ ಕಾರ್ಯದಲ್ಲಿ ತತ್ಪರರಾದರು ಯಜ್ಞಕುಂಡದಲ್ಲಿ ಉರಿಯುತ್ತಿರುವ ಅಗ್ನಿಗೆ ನೀರು ಹೊಯ್ದು ನಂದಿಸಿ ಬಿಟ್ಟರು. ಕಟ್ಟೆಯ ಮೇಲೆ ಕುಳಿತುಕೊಂಡು ಮದ್ಯ ಸೇವನೆ ಮಾಡಿದರು. ಅಗ್ನಿ ಕುಂಡದಲ್ಲಿ ಮೂತ್ರ ಹೊಯ್ದು ಅಪವಿತ್ರ ಗೊಳಿಸಿದರು. ಅಷ್ಟರಲ್ಲಿ ಅವರ ಆನೆಗಳು ಆಶ್ರಮದ ತರು ಲತೆಗಳನ್ನೆಲ್ಲಾ ಮುರಿದು ಕಾಯಿಗಳನ್ನು ಹರಿದು ಆಶ್ರಮದ ಅಂಗಳದಲ್ಲೆಲ್ಲ ಚಲ್ಲಾಪಿಲ್ಲಿಯಾಗಿ ಸೂರೆ ಮಾಡಿದ್ದವು. ಮಾವುತರು ಆ ಆನೆಗಳನ್ನೆಲ್ಲಾ ಒಟ್ಟುಗೂಡಿ ಸತೊಡಗಿದರು. ರಾಕ್ಷಸರ ಚತುರಂಗ ಬಲವು ಆಶ್ರಮದಿಂದ ಕಾಲು ಕಿತ್ತಿತು (೧೬) ಮುರಿದು ಮೊಟಕುಗೊಂಡ ತರುಗಳಿಂದಲೂ, ಕಿತ್ತಿ ಎಸೆದ ಬಳ್ಳಿಗಳಿಂದಲೂ, ಹರಿದು ಬಿದ್ದ ಹೂವು ಕಾಯಿಗಳಿಂದಲೂ ಆಶ್ರಮದ ಅಂಗಳವು ಚಲ್ಲಾಪಿಲ್ಲಿಯಾಗಿತುಂಬಿ ಹೋಗಿತ್ತು. ರಾಕ್ಷಸರು ಆಶ್ರಮದಲ್ಲಿದ್ದ ಆಕಳುಗಳನ್ನೆಲ್ಲ ಕೆಚ್ಚಲು ಕೊಯ್ದು ಹಿಂಸಿಸಿದ್ದರಿಂದ. ಅವುಗಳೆಲ್ಲಾ ನೋವಿನಿಂದ 'ಅಂಬಾ' ಎಂದು ಒದರುತ್ತ ಶಂಖವಾದ್ಯ ಮಾಡತೊಡಗಿದ್ದವು.

**ನೋವು ಎಲ್ಲೆಡೆ ತುಂಬಿ ಹರಿಯಿತು । ನೋವಿನಿಂ ನರಳಿದರು ವಟುಗಳು ।**
**ನೋವನೀಂಟುತ ಬಿಕ್ಕಿ ಅತ್ತರು ಸಕಲ ವನಿತೆಯರೂ ॥**
**ನೋವನೆಂದಿಗು ಕಾಣಲಾರದ । ತೀವಿದಾಶ್ರಮ ವಾಸಿ ಋಷಿಗಳು ।**
**ನೋವ ಶಾಪವ ನಿಡದೆ ನಿಂದರು ತಪವ ಕಾಯಲ್ಕೇ ॥ ೧೭ ॥**

**ಮೇರು ಜ್ಞಾನಿಗಳಿಂದ ಮೆರೆದಿಹ । ಚಾರು ಚಾರಿತ್ರ್ಯದ ಸುತಾಣವು ।**
**ಘೋರ ರಕ್ಕಸರಿಂದ ಗಳಿಗೆಯೊಳಾಯ್ತು ನಿಸ್ತೇಜ ॥**
**ಸೋರು ರಕ್ತದ ನೋವಿನಿಂದಲಿ । ಮೀರಿದುದಕದ ಬಾಧೆಯಿಂದಲಿ ।**
**ಚಾರುವನ ಹಾಳಾಯ್ತು ನೊಂದರು ಸಕಲ ಜೀವಿಗಳೂ ॥ ೧೮ ॥**

ಶಬ್ದಾರ್ಥ - (೧೭ರಿಂದ೧೮) ವನಿತೆ = ಹೆಂಗಸು; ತೀವು = ತುಂಬು ; ಶಾಪವನಿಡು = ಶಾಪ ಕೊಡು; ನಿಂದರು = ನಿಂತರು;
ತಪವಕಾಯಲ್ಕೆ = ತಪಶ್ಶಕ್ತಿಯನ್ನು ನಾಶಮಾಡಿಕೊಳ್ಳಲಾರದೇ; ಚಾರು = ಸುಂದರವಾದ ;- ನೊಂದರು = ಸಂಕಟಪಟ್ಟರು.

ಭಾವಾರ್ಥ (೧೭,೧೮) ಆಶ್ರಮದ ಎಲ್ಲೆಡೆಯಲ್ಲಿಯೂ ನೋವೇನೋವಾಗಿ ಪರಿಣಮಿಸಿತು. ತಲೆಗಳೊಡೆದ ನೋವಿನಿಂದ ಬ್ರಹ್ಮಚಾರಿಗಳು ಬಾಧೆ ಪಡತೊಡಗಿದರು. ಹೆಂಗಸರಂತೂ ತಮಗಾದ ಕೇಡು ಅವಮಾನಗಳನ್ನು ಹೇಳಿಕೊಳ್ಳುವದಕ್ಕೂ ಮಾರ್ಗವಿಲ್ಲದೇ ಬಿಕ್ಕಿ ಬಿಕ್ಕಿ ಅಳತೊಡಗಿದರು. ''ನೋವು ಎಂದರೆ ಏನೂ'' ಎಂಬುದನ್ನು ಎಂದೆಂದಿಗೂ ಕಂಡರಿಯದ ಆಶ್ರಮವಾಸಿಗಳಾದ ಮುನಿ ಪುಂಗವರು, ಆ ರಾಕ್ಷಸರಿಗೆ ಶಾಪವಿತ್ತು ಅವರನ್ನು ಸುಟ್ಟು ಹಾಕಬಹುದಾಗಿತ್ತು; ಆದರೂ ಸಹಿತ ಶಾಪ ನೀಡುವದರಿಂದ ತಮ್ಮ ತಪೋಶಕ್ತಿ ನಾಶವಾಗುವದಲ್ಲಾಽ ಎಂಬ ಭೀತಿಯಿಂದಾ, ಅವರು ಆ ರಾಕ್ಷಸರಿಗೆ ಶಾಪಕೊಡದೇ ಮೌನಿಗಳಾಗಿ ನಿಂತು ಬಿಟ್ಟರು. ಹೀಗಾಗಿ, ಮಹಾಮಹಾನ್ ಜ್ಞಾನಿಗಳಿಂದ ಶೋಭಾಯಮಾನವಾಗಿದ್ದ ಆ ಪುಣ್ಯಾಶ್ರಮವು, ಘೋರ ರೂಪದ ರಾಕ್ಷಸರ ಹಾವಳಿಯಿಂದಾಗಿ, ಒಂದೇ ಒಂದು ಗಳಿಗೆಯಲ್ಲಿ ನಿಸ್ತೇಜವಾಗಿ ಹೋಯ್ತು. ತಲೆಯೊಡೆದುಕೊಂಡು ರಕ್ತ ಸೋರಿಸುತ್ತಿರುವ ವಟುಗಳ ಆಕ್ರಂದ, ಬಾವಿಯ ನೀರಿನಲ್ಲಿ ಮುಳುಮುಳುಗಿಸಿ, ಎಬ್ಬಿಸಿದ ಮುನಿಗಳಿಗುಂಟಾದ ನೀರಿನ ಭಾಧೆ, ಇವೆಲ್ಲದರಿಂದಾಗಿ ಆಶ್ರಮ ನಿವಾಸಿಗಳಾದ ಸಕಲ ಜೀವಿಗಳು ವ್ಯಥೆ ಪಡುವಂಥಾ ಪರಿಸ್ಥಿತಿ ಬಂದೊದಗಿತು. ಸುಂದರವಾದ ವನ ಸಂಪತ್ತು ಹಾಳಾಗಿ ಹೋಯ್ತು. ಇವೆಲ್ಲಾ ಒಂದೇ ಒಂದು ಗಳಿಗೆಯಲ್ಲಿ ಮಿಂಚಿ ಹೋದ ದುರ್ವಾರ್ತೆಗಳಾದವೂಽ'' ಅಂತಾ ಕವಿ ವರ್ಣನೆ ಮಾಡ್ತಾನೆ.

**ಇತಿ ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್ ಜೋಶಿ ವಿರಚಿತ ಮ್ಹಾಲಾಸಾ ಮಾರ್ತಾಂಡ ಭೈರವ ಪುರಾಣದೋಳ್ ಆಶ್ರಮ ಪೀಡನೋರ್ನಾಮಕ ತೃತೀಯೋಧ್ಯಾಯಃ ॥**

ಒಟ್ಟು ಅಧ್ಯಾಯ ೩ ಕ್ಕಂ, ಪದ ೧೮ ಕ್ಕಂ ಒಟ್ಟು ಪದ ೫೦ಕ್ಕಂ, ಮಂಗಲ ಮಸ್ತು.

ಏಳು ಕೋಟಿಗ! ಏಳು ಕೋಟಿಗ !! ಏಳು ಕೋಟಿಗೋ !!! ಸಾಂಗಬಲೋ !............



ಅಥ-ಚತುರ್ಥೋದ್ಯಾಯ॥ ಅಧ್ಯಾಯ-೪ ಅಮರಾವತಿ ಪ್ರಯಾಣ

ಸೂಚನೆ :-

ಸನಕ ಸಾನಂದಕರ ಸೂಚನೆ । ಯನುಸರಿಸಿ ಆ ಸಪ್ತ ಮುನಿಗಳು।
ನೆನೆದು ಹೊರಟರು ಇಂದ್ರನಮರಾವತಿಗೆ ವ್ಯೋಮದಲಿ ॥

**ಅರ್ಥ** – ಸನಕ ಸಾನಂದಕಾದಿ ಬ್ರಹ್ಮ ಕುಮಾರರ ಹಿತವಚನದಂತೆ, ಆ ಸಪ್ತ ರ್ಷಿಗಳು ಇಂದ್ರನನ್ನು ನೆನೆಯುತ್ತ, ಆತನ ಪಟ್ಟಣವಾದ ಅಮರಾವತಿಗೆ ವ್ಯೋಮ ಮಾರ್ಗದಿಂದ ಹೊರಟರೆಂಬುದು,''ಮುಂದಿನ ಕಥಾನಕದಲ್ಲಿ ವಿವರವಾಗಿ ಬರ್ತಾ ಇದೇ '' ಎಂದು ಕವಿಯು ಸೂಚಿಸಿ, ಮುಂದೆ ಹೀಗೆ ಹೇಳ್ತಾನೆ॥

ನೊಂದ ಮುನಿಗಳು ಚಿಂತಿಸಿದರತಿ । ಮುಂದೆ ಮಾಡುವದೇನು ಎನುತಲಿ ।
ತಂದೆ ಶಿವ ಮತಿದೋರು ಕರುಣದಿ ಎಂದು ಹಂಬಲಿಸೀ ॥
ನಿಂದು ನೆನೆದರು ಸನಕರಂ ಸಾ। ನಂದ ಸನುಸೂನುಗಳ ನಾರದ ।
ರಂದೆ ಪ್ರತ್ಯಕ್ಷದಲಿ ತೋರ್ದರು ಬ್ರಹ್ಮಮಾನಸರು ॥ ೧ ॥

ಕೇಳಿ ತಿಳಿದರು ಸರ್ವ ವಾರ್ತೆಯ । ಗೋಳಿನಾ ಕಥೆ ಕೇಳಿ ಮರುಗುತ ।
ತಾಳಿದಿರಿ ನೀವ್ ಶಾಪವೀಯದೆ ಸರ್ವವನು ಸಹಿಸೀ ॥
ಮೇಳವಾಗಿದೆ ದುಷ್ಟರಳಿವಿಗೆ । ಕೇಳಿ ರೈ ಇದು ನಾಂದಿಯಾಗಿದೆ।
ಪೇಳುವದು ಇಂದ್ರನಿಗೆ ಈ ವಾರ್ತೆಯನು ಬಿನ್ನೈಸೀ ॥ ೨ ॥

**ಚಿಂತೆ ಬಿಡಿ ನೀವಿನ್ನು ಸತಿಸುತ । ರೆಂತು ಮಾಳ್ಪರು ನೀವೆ ಶೋಕದಿ ।**
**ನಿಂತರಾಗದು ಮುಂದಿನಾಗತಿ ಯೋಚಿಸಿರಿ ಎನುತಾ॥**
**ಇಂತು ಸಾಂತ್ವನ ವಿತ್ತು ಮುನಿಸತಿ । ನಿಂತ ವಟುಗಳನ್ನರಿಸಿ ಗೌಪ್ಯದಿ ।**
**ಶಾಂತಿಯಿಂದಿಹ ಗುಹೆಯ ತೋರಿಸಿ ಕಾಣದಂತಾಗೇ ॥ ೩ ॥**

**ಶಬ್ದಾರ್ಥ -** ಅತಿ = ಬಹಳ; ನಿಂದು = ನಿಂತು ; ಸನುಸೂನು = ಸನತ್ಕುಮಾರ; ಸನಕ, ಸಾನಂದ, ಸನತ್ಕುಮಾರ, ನಾರದ, ಇವರೆಲ್ಲ ಬ್ರಹ್ಮನ ಮಾನಸ ಪುತ್ರರು. ಪ್ರತ್ಯಕ್ಷದಲಿ ನಿಂದರು = ಪ್ರತ್ಯಕ್ಷರಾದರು, ಅಳಿವು = ನಾಶ; ನಾಂದಿ = ಪ್ರಾರಂಭ ; ಶಾಪವೀಯದೆ = ಶಪಿಸದೇ, ಬಿನ್ನೈಸಿ = ವಿನಂತಿಸಿ; ಸಾಂತ್ವನ = ಸಮಾಧಾನ ; ಗುಹೆ = ಗವಿ.

**ಭಾವಾರ್ಥ-** ಆ ಏಳೂ ಮುನಿಗಳು ಬಹಳೇ ಚಿಂತೆಗೊಳಗಾದರು. ಮುಂದೆ ನಾವೇನು ಮಾಡೋಣ ? ಹೇಗೆ ಬದುಕೋಣ? ಎಂದು ಶಿವನಲ್ಲಿ ಮೊರೆಯಿಟ್ಟರು. ನಂತರ ಏನೋ ಹೊಳೆದಂತಾಗಿ, ಬ್ರಹ್ಮ ಮಾನಸ ಪುತ್ರರಾದ ಸನಕ, ಸಾನಂದ, ಸನತ್ ಕುಮಾರ, ನಾರದರ ಸ್ಮರಣೆ ಮಾಡಿದರು. ತತ್ ಕ್ಷಣವೇ ಆ ಬ್ರಹ್ಮ ಮಾನಸ ಪುತ್ರರೆಲ್ಲರೂ ಮುನಿಗಳೆದುರು ಪ್ರತ್ಯಕ್ಷರಾಗಿ ನಿಂತರು. ಮತ್ತು ಮುನಿಗಳಿಂದ ಆಶ್ರಮದಲ್ಲಿ ನಡೆದ ದುರ್ವಾರ್ತೆಯನ್ನು ಕೇಳಿ ಬಹಳಷ್ಟು ವ್ಯಾಕುಲಕೊಂಡರು. ಮತ್ತು ಮುನಿಗಳನ್ನು ಕುರಿತು, ''ಸದಾ ಶಾಂತಿಗಾಗಿ ಹೋರಾಡುವ ಮಹಾಪುರುಷರೇ! ನೀವು ಅತ್ಯಂತ ಸಮಾಧಾನಿಗಳಾಗಿರುವಿರಿ ! ಅಂತೆಯೇ ಆ ರಾಕ್ಷಸರು ಕೊಟ್ಟ ಹಿಂಸೆಯನ್ನೆಲ್ಲ ಸಹಿಸಿಕೊಂಡು, ಅವರಿಗೆ ಶಾಪ ಕೊಡದೇ ನಿಮ್ಮ ತಪಃ ಶಕ್ತಿಯನ್ನು ಕಾಯ್ದುಕೊಂಡಿರುವಿರಿ. ಇದೂ ಒಂದು ಒಳ್ಳೇದೇ ಆಯಿತು. ಆ ದುಷ್ಟರಾಕ್ಷಸರಿಗೆ ಅಳಿಗಾಲವೇ ಬಂದಂತಿದೆ. ಸದ್ಧರ್ಮಿಗಳಾದ ನಿಮ್ಮನ್ನು ನೋಯಿಸಿದ್ದೇ ಅವರ ಅಳಿಗಾಲಕ್ಕೆ ನಾಂದಿಯಾಗುವ ಸಮಯ ಬಂದಿದೆ. ನೀವು ಈಗಿಂದಿಗಲೇ ಸ್ವರ್ಗಕ್ಕೆ ಹೋಗಿ, ದೇವೇಂದ್ರನಿಗೆ ಈ ವಾರ್ತೆಯನ್ನೆಲ್ಲಾ ವಿನಂತಿಸಿಕೊಳ್ಳಿರಿ. ಅವನು ನಿಮ್ಮ ಕಷ್ಟವನ್ನು ದೂರಮಾಡುತ್ತಾನೆ.''-ಎಂದು ತಿಳಿಸಿದ್ದಲ್ಲದೇ, ''ಮುನಿಗಳೇ ನೀವಿನ್ನು ಚಿಂತೆ ಮಾಡುತ್ತ ನಿಲ್ಲಬೇಡಿರಿ. ನೀವೇ ಚಿಂತಿಸುತ್ತ ಕುಳಿತರೆ, ಪಾಪ, ಆ ಸಾಧ್ವಿಯರೂ, ಮಕ್ಕಳು ಏನು ಮಾಡಬೇಕು? ಈಗ ನೀವು ಚಿಂತೆ ಬಿಟ್ಟು, ಮುಂದಿನ ಯೋಚನೆ ಮಾಡಿರಿ. ಎಂದು ಮುನಿಗಳಿಗೆ ಸಮಾಧಾನ ಹೇಳಿ, ಅವರಿಗೆ ಉಳಿದುಕೊಳ್ಳುವದಕ್ಕೆ, ಬೇರೊಂದು ಪರ್ವತದಲ್ಲಿ ಅತ್ಯಂತ ಗುಪ್ತ ಸ್ಥಾನದಲ್ಲಿರುವ, ಗುಹೆಯೊಂದನ್ನು ತೋರಿಸಿ ಮುನಿಗಳನ್ನೂ, ಅವರ ಪತ್ನಿಯರನ್ನೂ, ವಟುಗಳನ್ನೂ, ಆಶೀರ್ವದಿಸಿ, ಅಂತರ್ ಧಾನರಾದರು.

ಸನಕರಾಜ್ಞೆಯ ತೆರದಿ ಮುನಿಗಣ । ವೆನಿತು ತಡ ಮಾಡಲ್ದೆ ಸತಿಸುತ ।
ವಿನುತ ಯಜ್ಞಾಗ್ನಿಯನು ಗೌಪ್ಯದಿ ತಂದರಾಗುಹೆಗೆ ॥
ಕನಲಿದಾ ಧೇನ್ ಸಾಕು ಪ್ರಾಣಿಯ । ಅನುದಿನಾವಶ್ಯಕದ ವಸ್ತುವ ।
ನೆನೆದು ಶೇಖರಿಸಿದರು ಬಳಗಕ್ಕೆಲ್ಲ ಹೇಳಿದರು ॥೫॥

ಪೋಗಿ ಬರುವೆವು ನಾವು ತೀವ್ರದಿ । ಈಗ ನಮಗಾಗಿರುವ ಹಾನಿಯ ।
ಬೇಗ ಪರಿಹರಿಸೆಂದು ಇಂದ್ರನ ಕರೆದು ತಾರಲ್ಕೇ ॥
ಸಾಗಿಪುದು ನಿತ್ಯಾಗ್ನಿ ಹವನವ । ತಾಗ ಕೂಡದು ಲೋಪ ವೆಂದಿಗು ।
ಪೋಗಿ ಬರುವೆವು ಎನುತ ಹೊರಟರು ವ್ಯೋಮಮಾರ್ಗದಲೀ ॥೬॥

ಶಬ್ದಾರ್ಥ - ವಿನುತ = ಶ್ರೇಷ್ಠ; ಅನುದಿನಾವಶ್ಯಕ =ದಿನವೂ ಬೇಕಾದ; ಶೇಖರಿಸು = ಕೂಡಿಹಾಕು; ಹಾನಿ = ನಷ್ಟ; ಕರೆದು ತಾರಲ್ಕೆ = ಕರೆತರಲು; ಹವನ = ಯಜ್ಞ; ತಾಗು = ತಟ್ಟು; ಲೋಪ = ತಪ್ಪು ತಡೆ; ವ್ಯೋಮ ಮಾರ್ಗದಲಿ = ವಾಯುರೂಪದಿಂದ.

ಭಾವಾರ್ಥ - ಸನಕಾದಿಗಳ ಆಜ್ಞೆಯ ಮೇರೆಗೆ ಆ ಮುನಿಗಳು ತಡಮಾಡದೇ ತಮ್ಮ ಹೆಂಡಿರು ಮಕ್ಕಳನ್ನೂ, ಬಂಧು ಬಾಂಧವರನ್ನೂ, ಪವಿತ್ರವಾದ ಯಜ್ಞಾಗ್ನಿಯನ್ನೂ, ಗುಪ್ತವಾಗಿ ಆ ಗವಿಗೆ ಕರೆ ತಂದರು. ಗಾಯಗೊಂಡ ಆಕಳುಗಳನ್ನೂ, ಸಾಕು ಪ್ರಾಣಿಗಳನ್ನೂ, ದಿನ ನಿತ್ಯ ಬೇಕಾಗುವ ಅವಶ್ಯಕ ವಸ್ತುಗಳನ್ನೆಲ್ಲ ಒಂದೂ ಬಿಡದಂತೆ ಎಣಿಸೆಣಿಸಿ ಆ ಗುಹೆಯಲ್ಲಿ ತಂದು ಹೊಂದಿಕೆ ಮಾಡಿಟ್ಟು, ತಮ್ಮ ಬಳಗಕ್ಕೆಲ್ಲ ಹೀಗೆ ಹೇಳಿದರು. "ಪತ್ನಿ" ಪುತ್ರಾದಿಸಕಲ ಸಂಬಂಧಿಕರೇ! ನಾವು ಈಗ ನಮಗೆಲ್ಲಾ ಆಗಿರುವಂಥಾ ಹಾನಿಯು, ಇನ್ನೆಂದು ಆಗಲಾರದಂತೆ ವ್ಯವಸ್ಥೆ ಮಾಡಿಸಿ, ಆ ರಾಕ್ಷಸರನ್ನು ಬಗ್ಗು ಬಡಿಸುವದಕ್ಕಾಗಿ

ಬೇಗನೇ ಸ್ವರ್ಗಕ್ಕೆ ಹೋಗಿ, ದೇವೇಂದ್ರ ನನ್ನು ಕರೆದುಕೊಂಡು ಬರುತ್ತೇವೆ. ಅಲ್ಲಿಯ ವರೆಗೂ ನೀವು ಗಳೆಲ್ಲಾ ಕೂಡಿಕೊಂಡು, ನಿತ್ಯಾಗ್ನಿಯ ಪೂಜೆ ಪುನಸ್ಕಾರಗಳಿಗೆ ಯಾವ ರೀತಿಯಿಂದಲೂ ಲೋಪ ಉಂಟಾಗದಂತೆ, ಆಹ್ನಿಕ, ಹೋಮಗಳನ್ನು ಚಾಚೂತಪ್ಪದಂತೆ ಆಚರಿಸಿರಿ.'' ಎಂದು ಆಜ್ಞೆಮಾಡಿ, ವ್ಯೋಮ ಮಾರ್ಗದಿಂದಾ ಇಂದ್ರ ನಗರವಾದಂಥಾ ಅಮರಾವತಿಯತ್ತ ಪ್ರಯಾಣ ಬೆಳಿಸ್ತಾ ಇದ್ದಾರೆ.

ಬಂದರೈ ಆ ಮುನಿಗಳೆಲ್ಲರು । ನೊಂದು ಆತಿಶಯ ದಾಹದಿಂದಲಿ ।
ಕುಂದಿದಾ ಮೊಗ ಹರಿದ ಜಟೆ ಲಂಗೋಟಿ ಜನಿವಾರಾ ॥
ಒಂದರೊಂದರ ಪರಿವೆ ಇಲ್ಲದೆ । ಹಿಂದೆ ನೋಡುತ ಮುಂದೆ ಓಡುತ ।
ಬಂದು ನಿಂದರು ಸ್ವರ್ಗದಧಿಪನ ದ್ವಾರ ಮಂಟಪಕೇ ॥೬॥

ದೂರದಿಂದಲೆ ನೋಡಿದರು ಆ । ಕಾರುಭಾರವ ಅಲ್ಲಿ ನೆಲೆಸಿಹ ।
ಮೇರು ರತ್ನಾಸನದಿ ಸ್ವರ್ಗಾಧಿಪನು ಕುಳಿತಿರ್ದಾ ॥
ಚಾರು ಚಲುವೆಯರವನ ಸುತ್ತಲು । ಮೀರಿ ನೃತ್ಯವ ಗೈಯ್ಯುತಿರ್ದರು ।
ತಾರೆ ಥಕಧಿನ್, ಧಿಮಿಕ ಥಕ ಥೋಂ ಗೆಜ್ಜೆ ನಾದದಲೀ ॥೭॥

ಶಬ್ದಾರ್ಥ - ದಾಹ = ನೀರಡಿಕೆ; ಕುಂದಿದ ಮೊಗ = ಬಾಡಿದ ಮುಖ; ಸ್ವರ್ಗದಧಿಪ = ದೇವೇಂದ್ರ ;
ದ್ವಾರ ಮಂಟಪ = ಹೆಬ್ಬಾಗಿಲು; ಕಾರುಭಾರ = ವ್ಯವಸ್ಥೆ; ಮೇರು = ಎತ್ತರವಾಗಿದ್ದ (ಶ್ರೇಷ್ಠ) ರತ್ನಾಸನ = ರತ್ನಖಚಿತ ಸಿಂಹಾಸನ;
ಚಾರು = ಸುಂದರ.

**ಭಾವಾರ್ಥ -** (೫,೬) ಆ ಏಳೂ ಜನ ಮುನಿಗಳು ಬಹಳೇನೊಂದು ಕೊಂಡು, ಅತಿಶಯವಾದ ನೀರಡಿಕೆಯಿಂದ ಬಳಲಿದವರಾಗಿ ಬರ್ತಾ ಇದ್ದಾರೆ ಅವರ ಮುಖಗಳೆಲ್ಲಾ ಬಾಡಿ ಹೋಗಿವೆ! ಅವರ ಜಟಾ ಜೂಟಗಳು ಅರ್ಧಮರ್ಧಾ ಸುಟ್ಟು ಹೋಗಿವೆ !! ಜನಿವಾರಗಳು ಕಿತ್ತು ಹೋಗಿವೆ. !!!... ಹರಿದ ಲಂಗೋಟಿಯ ಪರಿವೆ ಕೂಡಾ ಆ ಮುನಿಪುಂಗವರಿಗೆ ಉಳಿದಿರಲಿಲ್ಲಾ, ಆ ಕ್ರೂರ ರಕ್ಕಸರು ಎಲ್ಲಿ ತಮ್ಮನ್ನು ಬೆಂಬತ್ತಿ ಬರ್ತಾ ಇದ್ದಾರೋ ಎಂಬ ಭೀತಿಯಿಂದಾ ಅವರು ಹಿಂದೆ ನೋಡುವದೂ, ಮುಂದೆ ಓಡುವದೂ, ಹೀಗೆ ಮಾಡ್ತಾ ಮಾಡ್ತಾ ಸ್ವರ್ಗಾಧಿಪತಿಯಾದಂಥಾ ಆ ದೇವೇಂದ್ರನ ಅರ ಮನೆಯ ಹೆಬ್ಬಾಗಿಲಿಗೆ ಬಂದು ನಿಲ್ತಾ ಇದ್ದಾರೆ.... ಸ್ವಲ್ಪ ದೂರದಲ್ಲಿಯೇ ನಿಂತುಕೊಂಡು ಅಲ್ಲಿಯ ವ್ಯವಸ್ಥೆ ಹೇಗಿದೇ ಅಂಬೋದನ್ನ ನೋಡ್ತಾ ಇದ್ದಾರೆ!.. ಅಲ್ಲಿ ಎತ್ತರವಾದ ಸ್ಥಳದಲ್ಲಿ ಇಡಲ್ಪಟ್ಟಂಥಾ ಸುಂದರವಾದ ರತ್ನ ಖಚಿತ ಸಿಂಹಾಸನದಲ್ಲಿ, ಅಷ್ಟದಿಕ್ಪಾಲಕರ ಒಡೆಯ ನಾದಂಥಾ ದೇವೇಂದ್ರನು, ಕುಲು ಕುಲು ನಗ್ತಾ ಶೋಭಾಯ ಮಾನವಾಗಿ ಕುಳಿತಿಬ್ಬಾನೆ. ಅವನ ಸುತ್ತು ಮುತ್ತಲೂ ಸುಂದರಿಯರಾದ ಅಪ್ಸರಾ ಸ್ತ್ರೀಯರು ವಿವಿಧ ಅಲಂಕಾರ ಗಳಿಂದ ಭೂಷಿತರಾಗಿ ತಾರೆಥಕಧಿನ್, ಧಿಮಿಕ ಥಕ ಥೋಂ !.... ಎಂಬ ಗೆಜ್ಜೆಯ ತಾಳಕ್ಕನುಗುಣವಾಗಿ ನೃತ್ಯ ಮಾಡ್ತಾ ಇದ್ದಾರೆ.....

**ಆವ ಬೆಡಗದು ಆವ ನೃತ್ಯವು । ಶೀವಿಯಿಂದೊಪ್ಪಿರ್ದ ಕುಣಿತಕೆ ।**
**ಹಾವಭಾವಗಳೆಲ್ಲ ಬೆಸೆದವು ರತಿಯು ಮನ್ಮಥರಾ ॥**
**ಭಾವ ಕದಡುವ ನೃತ್ಯ ಕಂಡಾ । ಭಾವರಹಿತರು ಬೆರಗುಗೊಂಡರು।**
**ದೇವ ದೇವನೆ ಕಾವು ದೆಮ್ಮನು ಎಂದು ನುತಿಸಿದರೂ ॥೭॥**

ಶಬ್ದಾರ್ಥ - ಆವ = ಯಾವ; ಶೀವಿ = ಸೊಬಗು; ಕದಡು=ಕಲಕು; ಬೆಸೆ = ಕೂಡು; ಭಾವ ರಹಿತರು = ಜಿತೇಂದ್ರಿಯರು
ದೇವದೇವ = ಪರಮಾತ್ಮ ನುತಿಸು = ಸ್ತೋತ್ರಮಾಡು.

**ಭಾವಾರ್ಥ -** ಅದೆಂಥಾ ಅಮೋಘವಾದ ನೃತ್ಯಾ? ಅದೆಂಥಾಸೊಬಗು ? ಶೀವಿಯಿಂದ ಒಪ್ಪುತ್ತಿದ್ದ ಅವರ ಕುಣಿತಕ್ಕೆ ಹಾವ ಭಾವಗಳೆಲ್ಲ ಬೆರೆತದ್ದರಿಂದ ರತಿ, ಮನ್ಮಥರ ಕಾಮ ಕೇಳಿಯ ಭಾವವು, ಆ ನೃತ್ಯದಲ್ಲಿ ಪ್ರತಿಬಿಂಬಿಸ್ತಾ ಇತ್ತು. ಸಮಸ್ತ ಪುರುಷರ ಮನಸ್ಸನ್ನೇ ಕದಡಿಸಿ ಬಿಡುವಂಥಾ ಅಮೋಘವಾದ

ಶಕ್ತಿ, ಆ ಲಲನಾಮಣಿಯರ ಕಣ್ಣೋಟದಲ್ಲಿ ಕೋಲ್ಮಿಂಚಿನಂತೆ ಆಕರ್ಷಿಸುತ್ತಾ ಇತ್ತು, ಭಾವ ರಹಿತರಾಗಿ ಸರ್ವರಲ್ಲಿಯೂ ಶಿವವನನ್ನೇ ಗುರುತಿಸುವಂಥ ಪರಿಶುದ್ಧ ಭಾವದ ಸಪ್ತರ್ಷಿಗಳು ಸಹಿತ, ಆ ಮನಮೋಹಕ ನೃತ್ಯ ಕಂಡು ಸ್ತಂಭೀಭೂತರಾದರು. "ದೇವ ದೇವೇಶನಾದ ಪರಮಾತ್ಮಾ! "ನಮ್ಮ ಮನಸ್ಸು ಚಂಚಲವಾಗದಂತೆ ನೀನೇ ಕಾಪಾಡೂ". ಅಂತಾ ಅವರು ಶಿವನಿಗೆ ಮೊರೆ ಹೊಕ್ಕರು !...

**ಕೊರೆವ ಕಣ್ಣಿನ ನೋಟ ನಸುನಗೆ । ಬಿರಿದ ಚೆಂದುಟಿ ತುಂಬಿದೆದೆಗಳ ।**
**ಹರಿಯ ನಡುವಿನ ಜಿಂಕೆ ಗಣ್ಣಿನ ನೃತ್ಯಗಾತಿಯರೂ ॥**
**ಗರಿಯ ಗೆದರಿದ ನವಿಲ ನರ್ತನ । ಜರಿದು ಥಕ ಥಕ ಕುಣಿವ ಹೆಂಗಳ।**
**ಝುರಿಗೆ ಸಿಲುಕದೆ ತಾಳ್ದರೇಳ್ವರು ಶಿವಶಿವಾ ಎನುತ ॥೯॥**

ಶಬ್ದಾರ್ಥ - ಬಿರಿದ=ಬಿಟ್ಟ; ಚೆಂದುಟಿ=ಕೆಂಪುತುಟಿ; ಹರಿ = ಸಿಂಹ; ಜಿಂಕೆ = ಚಿಗರಿ; ಝುರಿಗೆ ಸಿಲುಕದ = ಗಾಳಕ್ಕೆ ಬೀಳದೇ.

**ಭಾವಾರ್ಥ** - ಆ ಸುಂದರಿಯರ ಕಣ್ಣೋಟ ಕಾಮಬಾಣದಂತೆ ಕೊರೀತಾ ಇತ್ತು. ತುಟಿಗಳು ಕೆಂಪಾಗಿದ್ದು ಮನಮೋಹಕವಾಗಿದ್ದವು. ಅವರು ಸದಾ ಮೆಲು ನಗೆಯನ್ನು ಸೂಸ್ತಾ ಇದ್ದರು. ಅವರ ತುಂಬಿದೆದೆ, ಸಿಂಹ ಕಟಿ, ಜಿಂಕೆಗಣ್ಣುಗಳು, ಮೋಹಕವಾಗಿದ್ದವು. ಗರಿಗೆದರಿ ನೃತ್ಯ ಮಾಡುತ್ತಿರುವಂಥಾ ನವಿಲನ್ನು ಕೂಡಾ ಆ ನೃತ್ಯ ಗಾತಿಯರು ಹೀಯಾಳಿಸುವಂತೆ ಥಕ ಥಕಾಂತ ಕುಣೀತಾ ಇದ್ದರು. ಆದರೂ ಸಹಿತ ಆ ಸಪ್ತರ್ಷಿಗಳು, ಹೆಣ್ಣುಗಳ ಕಣ್ಣೋಟವನ್ನು ತಾಳ್ಮೆಯಿಂದಾ ಸಹಿಸಿಕೊಂಡು; "ಶಿವ ಶಿವಾ" ಎಂದು ಶಿವನಾಮಸ್ಮರಣೆ ಮಾಡುತ್ತಾ ಪಾರಾಗಿ ದೇವೇಂದ್ರನೆಡೆಗೆ ನೋಡ್ತಾ ಇದ್ದಾರೆ.

**ಅಷ್ಟ ದಿಕ್ಪಾಲಕರು ಇಂದ್ರನಿ । ಗಷ್ಟ ಸೇವೆಯ ಸಲಿಸುತಿರ್ದರು ।**
**ಇಷ್ಟ ವೇದಾರ್ಥವನು ಬೋಧಿಸುತಿರ್ದ ದೇವಗುರೂ ॥**
**ಅಷ್ಟ ದಿಕ್ಕಲಿ ನಿಂತ ಭೃತ್ಯ ವಿ । ಶಿಷ್ಟ ಚಾಮರ ಬೀಸುತಿರೆ ಸಂ।**
**ಕಷ್ಟ ಕೇಳುವರಾರೆನುತ ನಿಂತಿರ್ದರೆದುರಿನಲೀ ॥೧೦॥**

ಶಬ್ದಾರ್ಥ - ಅಷ್ಟ = ಎಂಟು; ಅಷ್ಟಸೇವೆ = ಎಂಟು ಬಗೆಯ ಸೇವೆ; ಸಲಿಸು = ಸಲ್ಲಿಸು; ವೇದಾರ್ಥ = ವೇದಗಳ ಅರ್ಥ; ಚಾಮರ = ಬೀಸಣಿಕೆ ; ಸಂಕಷ್ಟ = ತೊಂದರೆ.

**ಭಾವಾರ್ಥ-** ಎಂಟು ಜನ ದಿಕ್ಪಾಲಕರು ಸುಂದರ ದೇಹ ಧಾರಣೆ ಮಾಡಿಕೊಂಡು, ಸುರಪತಿಯಾದಂಥಾ ದೇವೇಂದ್ರನಿಗೆ ಎಂಟು ಬಗೆಯಿಂದ ಸೇವೆ ಸಲ್ಲಿಸ್ತಾ ನಿಂತು ಕೊಂಡಿದ್ದರು. ದೇವಗುರುಗಳಾದ ಬ್ರಹಸ್ಪತ್ಯಾಚಾರ್ಯರು, ಆ ಸುರಶ್ರೇಷ್ಠನಾದ ದೇವೇಂದ್ರನಿಗೆ ವೇದಾರ್ಥಗಳನ್ನು ಬಿಡಿ ಬಿಡಿಸಿ ಹೇಳುವ ಕಾರ್ಯದಲ್ಲಿ ತತ್ಪರರಾಗಿದ್ದರು. ಅಷ್ಟ ದಿಕ್ಕುಗಳಲ್ಲಿಯೂ ನಿಂತ ಸ್ವಾಮಿಭಕ್ತ ಸೇವಕ ವೃಂದವು, ಆ ದೇವೇಂದ್ರನಿಗೆ ವಿಶಿಷ್ಟ ಅಲಂಕಾರ ಗಳಿಂದ ಭೂಷಿತವಾದ ಚಾಮರಗಳನ್ನು ಬೀಸ್ತಾ ಇದ್ದರು. ''ಇಷ್ಟೆಲ್ಲಾ ಸಂಭ್ರಮದ ವಾತಾವರಣದಲ್ಲಿ ದೇವೇಂದ್ರ ಮೆರೆದಾಡ್ತಾ ಇರೋವಾಗ; ನಮ್ಮ ಸಂಕಷ್ಟ ಕೇಳೋವರಾದರೂ ಯಾರಪ್ಪಾ?'' ಅಂತ ಆ ಏಳೂ ಜನ ಮುನಿಗಳು ಮೌನವಾಗಿ ಒಂದೆಡೆಗೆ ನಿಂತು ಕೊಂಡು ಬಿಟ್ಟರು.

**ಇಂಬುಗೊಡದೇ ನುತಿಪ ಯಕ್ಷರ । ಬೊಂಬೆ ಮಾಟದ ದೇವ ಕನ್ನೆಯ ।**
**ರಿಂಬ ನೀಯದೆ ತುಂಬಿ ಮೆರೆದರು ಸುರಪ ಸಭೆಯೊಳಗೇ ॥**
**ರಂಭೆ ಊರ್ವಶಿ ನೃತ್ಯ ಗಾನಕೆ । ತುಂಬಿದೆದೆಗಳ ಮೋಹನಾಸ್ತ್ರ ಕೆ ।**
**ತುಂಬಿದಾಳ್ದಲೆ ದೂಗುತಿರ್ದ ಪುರಂದರೇಶ್ವರನೂ ॥ ೧೧॥**

ಶಬ್ದಾರ್ಥ- ಇಂಬು = ಜಾಗೆ; ನುತಿಸು = ಸ್ತುತಿಸು ; ಯಕ್ಷ = ದೇವಕೋಕದ ಪ್ರಜೆ; ಬೊಂಬೆಮಾಟದ = ಸುಂದರವಾದ ; ಸುರಪ = ದೇವೇಂದ್ರ; ಪುರಂದರ = ದೇವೇಂದ್ರ

**ಭಾವಾರ್ಥ** = ಆ ದೇವ ಸಭೆಯಲ್ಲಿ ಯಕ್ಷದಂಪತಿಗಳು ಎಡೆಬಿಡದೇ ದೇವೇಂದ್ರನ ಸ್ತೋತ್ರ ಮಾಡುವದರಲ್ಲಿ ತಲ್ಲೀನರಾಗಿದ್ದರು. ಪುತ್ಥಳೀ ಗೊಂಬೆಯಂತೆ ಸುಂದರಿಯರಾಗಿದ್ದ ದೇವ ಕನ್ನೆಯರು, ಸಭಾ ಮಂಟಪದ ಉದ್ದಗಲಕ್ಕೂ ತುಂಬಿ ಹೋಗಿದ್ದರು .ಇನ್ನೊಂದೆಡೆಗೆ ರಂಭೆ, ಊರ್ವಸಿ, ಮೇನಕೆ, ತಿಲೋತ್ತಮೆ ,

ಮುಂತಾದ ಅಪ್ಸರೆಯರು, ನೃತ್ಯಗ್ಗಾಯನಗಳನ್ನು ಮಾಡುವದರಲ್ಲಿ ತಲ್ಲೀನರಾಗಿದ್ದರು. ಸುರ ಪತಿಯಾದಂಥಾ ದೇವೇಂದ್ರನು ಅವರ ನೃತ್ಯದ ಹೆಜ್ಜೆಗೆ ಸರಿಯಾಗಿತಾಳವನ್ನು ಮನದಲ್ಲಿಯೇ ಮೆಲುಕುಹಾಕುತ್ತಾ, ಆನಂದಿದಿಂದ ತಲೆ ದೂಗ್ತಾ ಕುಳಿತು ಬಿಟ್ಟದ್ದಾ! ಆ ಅಪ್ಸರೆಯರ ತುಂಬಿದೆದೆಗಳು ದೇವೇಂದ್ರನ ಮನಸ್ಸನ್ನು ಮೋಹನಾ ಸ್ತ್ರದಂತೆ ಆಕರ್ಷಿಸಿ ಬಿಟ್ಟಿದ್ದವು.

ಕಾಮರಿಪು ರೂಪದಲಿ ನಿಂದಿಹ । ಆಮಹಾತ್ಮರ ಕಂಡು ಬೆಚ್ಚುತೆ।
ಭೂಮಿಗಿಳಿದವನಂತೆ ನಿಲಿಸುತ ಸಕಳ ಕಲೆಗಳನು॥
ಸಾಮವೇದ ಸುನಾದ ದಿಂದ ಲಿ। ಪ್ರೇಮ ದುಂಬಿದ ವೇದ ವಾಕ್ಯದಿ।
ರಾಮ ರಾಮಾ ಎನುತ ಸ್ವಾಗತಿಸಿದನು ದೇವೇಂದ್ರ ॥೧೨॥

ಕರಿಸಿ ಶಚಿ ದೇವಿಯನು ವಂದ್ಯರಿ। ಗಿರಿಸಿ ಪಾದ್ಯಾರ್ಘ್ಯಗಳ ವಂದಿಸೆ ।
ಸುರಪತಿಗೆ ಜಯವೆನುತ ಮಂತ್ರಾಕ್ಷತೆಯ ನಿಕ್ಕಿದರೂ ॥
ಹಿರಿಯರೇ ನಿಮಗೊಂದನೆಯು ಎನ್। ಹಿರಿಯ ಭಾಗ್ಯದಿ ಬಂದಿರಿಲ್ಲಿಗೆ ।
ಪುರವ ಪಾವನಗೊಳಿಸಿದಿರಿ ಧನ್ಯೋಽಸ್ಮಿ ಎಂದೆನುತ॥೧೩॥

ಶಬ್ದಾರ್ಥ- ಮೌನ=ಸುಮ್ಮನಿರುವದು; ಸುರಪತಿ=ದೇವೇಂದ್ರ; ತಾಣ=ಸ್ಥಾನ; ಕಲಾಪ=ಕಾರ್ಯಕ್ರಮ; ಸಾಮವೇದ= ಗಾಯನ ಕಲೆಯವೇದ; ಶಚಿ=ಇಂದ್ರನರಾಣಿ; ಪಾದ್ಯ=ಮಂತ್ರೋಕ್ತವಾಗಿ ಪಾದ ತೊಳೆಯುವದು; ಆರ್ಘ್ಯ=ಶಾಸ್ತ್ರೋಕ್ತವಾಗಿ ತರ್ಪಣ ಬಿಟ್ಟು ಸ್ವಾಗತಿಸುವದು ಮಮ=ನನ್ನ; ಪಾವನ = ಪವಿತ್ರ; ಧನ್ಯೋಽಸ್ಮಿ = ಪಾವನನಾದೆ.

**ಭಾವಾರ್ಥ-** (೧೧,೧೨) ಅಲ್ಲಿಯ ವರೆಗೂ ಮೌನವಾಗಿಯೇ ನಿಂತು ಕೊಂಡಿದ್ದ ಆ ಸಪ್ತರ್ಷಿಗಳನ್ನು, ಇಂದ್ರನು ಒಮ್ಮಿಂದೊಮ್ಮಿಲೇ ನೋಡಿ ಗಾಬರಿಯಾದನು. ತಕ್ಷಣವೇ ತನ್ನ ಸಿಂಹಾಸನದಿಂದ ಚಟಕ್ಕನೇ ಎದ್ದು ನಿಂತು, ಎಲ್ಲಾ ಕಾರ್ಯ ಕಲಾಪಗಳನ್ನು ನಿಲ್ಲಿಸಿ ಬಿಡುವಂತೆ ಸಂಜ್ಞೆಮಾಡಿ, ಧಾವಿಸಿ ಆ ಸಪ್ತರ್ಷಿಗಳ ಬಳಿಗೆ ಬಂದು, ದೀರ್ಘದಂಡ ನಮಸ್ಕಾರ ಮಾಡ್ತಾನೆ. ಮತ್ತೂ ಸಾಮವೇದದ ಸುನಾದದೊಂದಿಗೆ ಅತ್ಯಂತ ಪ್ರೀತಿಯುಕ್ತನಾಗಿ ಆ ಸರ್ವ ಮುನಿಗಳನ್ನೂ ವೇದ ವಾಕ್ಯಗಳನ್ನುಚ್ಚರಿಸುತ್ತಾ ಸ್ವಾಗತ ಮಾಡಿಕೊಳ್ತಾನೆ. ಇದಲ್ಲದೇ ತಕ್ಷಣವೇ ತನ್ನ ಪಟ್ಟದರಾಣಿಯಾದಂಥಾ ಶಚಿ ದೇವಿಯನ್ನು ಕರಿಸಿಕೊಂಡು, ಶಾಸ್ತ್ರ ಪದ್ಧತಿಯಂತೆ ಆ ಮುನಿಗಳ ಪಾದ ಕಮಲಗಳನ್ನು ದಂಪತಿಗಳಿಬ್ಬರೂ ಸೇರಿ ತೊಳೀತಾ ಇದ್ದಾರೆ. ಅದಾದ ನಂತರ ಸಕಲ ಮುನಿಗಳಿಗೂ ಅರ್ಘ್ಯಕೊಟ್ಟು, ಸ್ವಾಗತಿಸ್ತಾ ಇದ್ದಾರೆ. ಮತ್ತೊಮ್ಮೆ ದಂಪತಿಗಳಿಬ್ಬರೂ ನಮಸ್ಕರಿಸಿದಾಗ, ದೇವೇಂದ್ರನಿಗೆ ಜಯವಾಗಲೀ ಎಂದು ಘೋಷಣೆ ಮಾಡ್ತಾ ಸಪ್ತರ್ಷಿಗಳು ಅವರ ಮೇಲೆ ಮಂತ್ರಾಕ್ಷತೆಯನ್ನು ತೂರ್ತಾ ಇದ್ದಾರೆ. ಆಗ ಸುರಪತಿಯಾದ ದೇವೇಂದ್ರ ಹೇಳ್ತಾನೆ ''ಹಿರಿಯರೇ! (ಆರ್ಯರೇ) ನಿಮಗೆ ನನ್ನ ನೂರೆಂಟು ವಂದನೆಗಳು! ನನ್ನ ಪುಣ್ಯ ವಿಶೇಷವಾಗಿರುವದರಿಂದಲೇ ನಿಮ್ಮಂಥಾ ಮಹಾಮಹಿಮರು ನನ್ನ ಬಳಿಗೆ ಬಂದಿರುವಿರಿ! ನಿಮ್ಮ ಪುಣ್ಯಾಗಮನದಿಂದಾ, ಇಡೀ ನನ್ನ ಅಮರಾವತೀ ಪಟ್ಟಣ, ಮತ್ತೂ ಪಟ್ಟಣದಲ್ಲಿ ವಾಸಿಸುವ ಪ್ರಜೆಗಳೆಲ್ಲರೂ ಉದ್ಧಾರವಾದರು. ಅಲ್ಲದೇ ನಾನೂ ಸತಿಸಮೇತ ಉದ್ಧಾರನಾದೆ.'' ಅಂತಾ ದೇವೇಂದ್ರ ವಿನೀತ ಭಾವದಿಂದಾ ಅವರವರನ್ನು ಮೇಲಕ್ಕೆ ಕರಕೊಂಡು ಬರ್ತಾ ಇದ್ದಾನೆ ಅಂಥಃ ಪುರಕ್ಕೆ.

**ಉಚಿತದಾಸನವಿತ್ತು ಸರ್ವರಿ । ಗುಚಿತ ಸುಶ್ರೂಷೆಯನು ನೀಡುತ ।**
**ರುಚಿಗೆ ಅಮೃತ ಭರಿತ ಪಾತ್ರೆಗಳಿತ್ತು ಸತ್ಕರಿಸೀ ॥**
**ಉಚಿತವೇ ನೀವಂತು ನಿಲುವದು। ಉಚಿತವಾಗದು ಶಿವಶಿವಾಯನ ।**
**ಗುಚಿತ ಪದವಿಯ ನಿತ್ತು ಸತ್ಕರಿಸಿಹರು ನೀವೆನುತಾ ॥ ೧೪॥**

**ಉಚಿತವಾಗಿದೆ ನೀವು ಬಂದುದು । ಶಚಿ ಪತಿಯು ನಾನೆಂಬ ಬಿರುದದು।**
**ಖಚಿತವಾಯಿತು ಎನುತ ನಸುನಗೆ ಬೀರಿ ಸುರಪತಿಯೂ ॥**
**ಉಚಿತ ವಾಕ್ಯವ ನಾಡಿ ನಂತರ । ಉಚಿತ ಪರ್ಯಂಕದಲಿ ಮಲಗಿಸಿ।**
**ಶಚಿ ಸಮೇತದಿ ಪಾದವೊತ್ತುತ ಹೀಗೆ ಬೆಸಗೊಂಡ ॥೧೫॥**

ಶಬ್ದಾರ್ಥ - ಉಚಿತ = ಯೋಗ್ಯ; ಸುಶ್ರೂಷೆ = ಉಪಚಾರ; ರುಚಿ = ನಾಲಿಗೆ ; ಅಮೃತಭರಿತ = ಅಮೃತ ತುಂಬಿದ; ನಿಲುವದು = ನಿಲ್ಲುವದು; ಪದವಿ = ಹುದ್ದೆ ; ಸತ್ಕರಿಸು = ಗೌರವಿಸು: ಶಚಿಪತಿ = ಇಂದ್ರ ; ಪರ್ಯಂಕ = ತೂಗುಮಂಚದ ಮೇಲಿದ್ದ ಮೆತ್ತಗಿನ ಸುಖಾಸನ; ಸಮೇತ = ಒಡಗೂಡಿ; ಬೆಸಗೊಳ್ಳು = ಮಾತಾಡು.

**ಭಾವಾರ್ಥ-** (೧೩,೧೪) ಅಲ್ಲಿ ಅಂತಃಪುರದಲ್ಲಿ ಸಕಲ ಮುನಿಗಳಿಗೂ ಸುಯೋಗ್ಯವಾದ ಆಸನಗಳನ್ನು ನೀಡಿ, ಸಮರ್ಥ ರೀತಿಯಿಂದ ಉಪಚಾರಮಾಡುತ್ತಾ, ಸಪ್ತರ್ಷಿಗಳಿಗೂ ಕುಡಿಯುವದಕ್ಕಾಗಿ ಯತೇಚ್ಛವಾದ ಅಮೃತವನ್ನಿತ್ತು ಸತ್ಕರಿಸುತ್ತಾ, ಈ ರೀತಿಯಾಗಿ ಪ್ರಶ್ನೆ ಮಾಡ್ತಾನೆ; ಉಚಿತವೇ ನೀವಂತು ನಿಲುವದು? ''ಅಯ್ಯಾ! ನೀವು ಸ್ವರ್ಗಾಧಿಪತಿಯ ಬಳಿಗೆ ಬಂದು, ಹಾಗೆ ಮೌನವಾಗಿ ನಿಂತು ಬಿಟ್ಟದ್ದು ಯೋಗ್ಯವೇ? ಅದೆಂದಿಗೂ ಯೋಗ್ಯವಲ್ಲಾ! ಯಾಕೆಂದರೆ ನನಗೆ ಸ್ವರ್ಗಾಧಿಪತಿಯಾಗುವಂಥಾ ಸುಯೋಗವನ್ನು ಕಲ್ಪಿಸಿ ಕೊಟ್ಟ ಮಹಾನುಭಾವರು ನೀವೇ ಅಲ್ಲವೇ? ನಿಮ್ಮ ಔದಾರ್ಯತೆಯಿಂದಲೇ ನಾನು ದೇವೇಂದ್ರ, ನೆನಿಸಿ, ಸ್ವರ್ಗಾಧಿಪತಿಯಾಗುವದಕ್ಕೆ ಸಾಧ್ಯವಾಯಿತು. ಅಂದ ಮೇಲೆ ನೀವು ಹಾಗೆ ಮೌನಿಗಳಾಗಿ ನಿಂತು ಕೊಂಡರೆ ನನಗೆಷ್ಟು ಅವಮಾನಾ'' ? ಎಂದು ವ್ಯಥೆ ಪಡ್ತಾನೆ ದೇವೇಂದ್ರ!... ''ಅದೂ ಸರೀನೆ!.. ನೀವು ಕರುಣೆ ದೋರಿ ಸ್ವರ್ಗದ ವರೆಗೂ ಬಂದಿರೀ ಅಂತಾ ತಿಳಕೊಂಡೇ, ನಾನು ದೇವೇಂದ್ರ ನಾದದ್ದಕ್ಕೆ ಸಾರ್ಥಕತೆ ಬಂತು!... ''ನಾನೇ ದೇವೇಂದ್ರಾ'' ಅನ್ನೋದಕ್ಕೆ ಒಂದು ಖಚಿತ ಉತ್ತರಾ ಸಿಕ್ಕಂತಾಯ್ತು. ಬನ್ನಿ ಬನ್ನಿ, ಎಂದು ಕರೆದೊಯ್ದು ಆ ಏಳೂ ಮುನಿಗಳನ್ನು, ಹಂಸತೂಲಿಕಾತಲ್ಪದ ಮೇಲೆ ವಿಶ್ರಾಂತಿಗಾಗಿ ಮಲಗಸ್ತಾ ಇದ್ದಾನೆ. ''ಸ್ವಾಮೀ ನಿಮಗೆಲ್ಲಾ ಮಾರ್ಗಾಯಾಸ ಬಹಳ ವಾಗಿರಬೇಕಲ್ವೇ'' ? ಎಂದು ಕೇಳುತ್ತಾ ತನ್ನ ಪಟ್ಟದ ರಾಣಿಯಾದಂಥಾ ಶಚಿದೇವಿಯನ್ನು ಕೂಡಿಕೊಂಡು, ಆ ಮುನಿಗಳ ಪಾದಗಳನ್ನೊತ್ತುತ್ತಾ ಹೀಗೆ ಪ್ರಶ್ನೇ ಮಾಡ್ತಾನೆ.

**ಏಕೆ ಬಾಡಿವೆ ನಿಮ್ಮ ಮೊಗತಾ। ವೇಕೆ ಕುಂದಿವೆ ಮಾರ್ಗಶ್ರಮವೇ ।**
**ಏಕೆ ಬಂದಿರಿ ಸೇವೆಯನು ನಾನೇನು ಕೈಗೊಳಲೀ ॥**
**ಸಾಕ ಬೇಕೇ ಕಾಮಧೇನುವ । ಬೇಕೆ ಯಜ್ಞಕೆ ಕಲ್ಪ ವೃಕ್ಷವು ।**
**ಯಾಕೆ ಸೇವೆಯ ನೀಡಲೊಲ್ಲಿರಿ ಎಂದ ದೇವೇಂದ್ರ ॥೧೬॥**

ಆವ ಪಾಪಿಯು ನಿಮ್ಮ ತಪಸಿಗೆ । ನೋವ ನಿತ್ತನೋ ಹೇಳಿ ಅವನಂ ।
ಜೀವ ಬತ್ತಿಸಿ ಬಿಡು ವೆನೆನುತಲಿ ಇಂದ್ರ ಬೆಸಗೊಳ್ಳೇ ॥
ಕಾವ ಕರುಣಾಳೆಂದೆ ಬಂದೆವು । ಈ ವರೆಗೆ ನಮಗಾವ ತೊಂದರೆ ।
ನೋವು ಬಾರದಲಿದ್ದೆವಾ ಮಣಿ ಚೂಲದಾಶ್ರಮದೀ ॥೧೭॥

ನೀವು ತೋರಿದ ರಮ್ಯ ಬನದಲಿ। ಶಾವಿನೊಂದಿಗೆ ಬಾಳುತಿದ್ದೆವು ।
ತೀವಿ ಯಜ್ಞಾಗ್ನಿಯನು ರಕ್ಷಿಸಿ ಲೋಕಪಾವನದ ॥
ನೋವು ಬಂದಿತು ಒಂದು ಸಮಯದಿ । ಸಾವು ನೋವಲಿ ಬದುಕಿ ಬಂದೆವು ।
ಆವ ಬಾಯಲಿ ಪೇಳ್ವೆವಾ ಕಥೆ ದುಷ್ಟರಕ್ಕಸರಾ ॥ ೧೮॥

ಮಣಿಕ ಮಲ್ಲರು ಎಂಬ ದೈತ್ಯರು । ಹಣಿದರೈ ನಮ್ಮವರನೆಲ್ಲರ ।
ಕುಣಿದು ಕುಪ್ಪಳಿಸುತ್ತ ಬೆಂಕಿಯನಿತ್ತರಾಶ್ರಮಕೇ ॥
ದಣಿದ ಮುನಿಸತಿಯರನು ಪೀಡಿಸಿ । ಹಣಿದು ವಟುಗಳ ಡಿಕ್ಕಿಯಾಡಿಸಿ।
ಚಣದಿ ಉರುಲಿಕ್ಕುತಲೆಮ್ಮನು ಬಾವಿಗಿಳಿಸಿದರು ॥೧೯॥

**ಕಡಿದರ್ಕೆ ಖಡ್ಗದಲಿ ವನಲತೆ । ಮಿಡುಕಿಸಿದರಾಧೇನ ಕೆಚ್ಚಲು ।**
**ಕಡಿದು ತಾಮಸರೆಲ್ಲ ರಕುತವನೀಂಟ ನಲಿದಿಹರೂ ॥**
**ಕುಡಿದು ಸುರೆ ಯಜ್ಞಾಗ್ನಿ ನಂದಿಸಿ । ಹೊಡೆದು ಕೇಕೆಯ ಮಲವಿಸರ್ಜಿಸಿ ।**
**ಮಿಡುಕುತುಳಿಯಲಿ ಎನುತ ಪೋದರು ನಮ್ಮಗಳನುಳಿಸೀ ॥೨೦॥**

ಶಬ್ದಾರ್ಥ - ಮೊಗ = ಮುಖ; ಮಾರ್ಗಶ್ರಮ = ಮಾರ್ಗಾಯಾಸ; ಕೈಗೊಳು = ಮಾಡು; ಕಾಮಧೇನು = ಬಯಸಿದ್ದನ್ನು ಕೊಡುವ ಆಕಳು; ಕಲ್ಪವೃಕ್ಷ = ಕಲ್ಪಿಸಿದ್ದನ್ನು ಕೊಡುವ ಗಿಡ ; ತಪಸು = ತಪಸ್ಸು; ಜೀವ ಬತ್ತಿಸು = ಕೊಲ್ಲು; ರಮ್ಯ = ಸುಂದರ ; ಠಾವು = ಬೀಡಾರ ; ತೀವಿ = ತುಂಬಿ; ಲೋಕಪಾವನದ = ಜಗದೊದ್ಧಾರದ; ಹಣೆ = ಹೊಡೆ; ಸಾವನೋವಲಿ ಬದುಕಿ ಬಂದೆವು = ಸತ್ತುಕೆಟ್ಟು ಉಳಿದುಕೊಂಡೆವು ; ಪೇಳ್ವೆವು = ಹೇಳುವೆವು; ಪೀಡಿಸು = ತೊಂದರೆ ಕೊಡು; ಇಕ್ಕು = ಹಾಕು; ಉರುಲು = ನೇಣು; ಲತೆ = ಬಳ್ಳಿ; ಮಿಡುಕಿಸು= ಗೋಳಾಡಿಸು; ತಾಮಸರು = ರಾಕ್ಷಸರು; ರಕುತವ ನೀಂಟು = ರಕ್ತಕುಡಿ; ನಂದಿಸು = ಆರಿಸು; ಮಲವಿಸರ್ಜಿಸಿ = ಹೇಸಿಗೆ ಮಾಡಿ; ಮಿಡುಕುತ = ಕೊರಗುತ್ತ.

**ಭಾವಾರ್ಥ**-(೧೫,೧೬) ದೇವೇಂದ್ರ ಮುನಿಗಳನ್ನು ಕೇಳ್ತಾನೇ ''ಅಯ್ಯಾs! ನಿಮ್ಮ ಮುಖಗಳು ಯಾಕೋ ಬಾಡಿದಂತಾಗಿವೆ. ಬಹುಶಃ ನಿಮಗೆ ಮಾರ್ಗಾಯಾಸವಾಗಿರಬಹುದೇ ? ನಾನು ನಿಮಗೆ ಯಾವ ಬಗೆಯ ಸೇವೆಯನ್ನು ಸಲ್ಲಿಸಿ ಕೃತಾರ್ಥನಾಗಲೀ ? ನಿಮಗೇನಾದರೂ ಕಾಮಧೇನುವನ್ನು ಸಾಕಬೇಕೂs ಅಂತಾ ಆಸೆಯಾಗಿದೆಯೊ ? ಅಥವಾ ನಿಮ್ಮ ಯಜ್ಞಕಾರ್ಯಗಳಿಗಾಗಿ ಬಯಸಿದ್ದನ್ನು ಕೊಡುವಂಥಾ ಕಲ್ಪತರುವನ್ನು ನಿಮ್ಮ ಸೇವೆಗಾಗಿ ಕಳಿಸಿ ಕೊಡಲೇ? ನಿಮಗೆ ಏನು ಬೇಕೂs ಅನ್ನೋದನ್ನ ಹೇಳ್ರಿ; ತಕ್ಷಣ ಅದನ್ನು ಪೂರೈಸಿ ಕೊಡ್ತೇನೆ. ಅಥವಾ ಯಾವ ಪಾಪಿಯಾದರೂ ನಿಮ್ಮ ನಿತ್ಯಾನುಷ್ಠಾನಕ್ಕೆ ತೊಂದರೆ ಆಗೋ ಹಾಗೆ ಮಾಡಿದ್ದಾನೋ? ಹಾಗಿದ್ದರೂ ಹೇಳ್ರಿ ! ನಿಮಿಷಾರ್ಧದಲ್ಲಿ ಆ ದುಷ್ಟನನ್ನ ಸಂಹಾರ ಮಾಡಿಬಿಡ್ತೇನೆ!...'' ಎಂದು ದೇವೇಂದ್ರ ಉಸುರಿದಾಕ್ಷಣಕ್ಕೆ, ಆ ಸಪ್ತರ್ಷಿಗಳು ಬಾಯಿ ಬಿಟ್ಟು ಹೇಳ್ತಾ ಇದ್ದಾರೆ. ''ಅಪ್ಪಾs ದೇವೇಂದ್ರಾ! ನೀನು ಧರ್ಮರಕ್ಷಕ, ದೀನ ರಕ್ಷಕಾ'' ಎಂದು ಬಿರುದು ಪಡೆದದ್ದರಿಂದಲೇ ನಾವು ಕಷ್ಟ ಪಟ್ಟುಕೊಂಡು, ಸ್ವರ್ಗದವರೆಗೂ ನಡೆದು ಬಂದಿದ್ದೇವೆ. ಇಲ್ಲಿಯ ವರೆಗೂ ನೀನು ಇಳಿಸಿದ

ಮಣಿಚೂಲ ಪರ್ವತ ಪ್ರದೇಶದಲ್ಲಿ ಸುದರವಾದ ಆಶ್ರಮವೊಂದನ್ನು ರಚಿಸಿಕೊಂಡು, ಪುಣ್ಯ ಸಂಪಾದ ನೆಗಾಗಿಯೂ, ಲೋಕೋದ್ಧಾರಕ್ಕಾಗಿಯೂ, ಪವಿತ್ರವಾದ ಯಜ್ಞ ಕರ್ಮಗಳನ್ನು ಮಾಡುತ್ತಾ, ನಾವು ಸುಖವಾಗಿ ಜೀವಿಸಿಕೊಂಡು, ಶಿವಶಿವಾ ಅಂತ ಆರಾಮಾಗಿ ಕಾಲ ಕಳೀತಾ ಇದ್ವಿ! ಆದರೆ ಒಂದು ಕಾಲಕ್ಕೆ ನಮಗೆ ದುಷ್ಟ ರಾಕ್ಷಸರಿಂದಾ ತೊಂದರೆ ಉಂಟಾಯ್ತು; ಆ ಕ್ರೂರ ರಕ್ಕಸರ ಕೈಯ್ಯಲ್ಲಿ ನಾವೀಗ ಸತ್ತುಕೆಟ್ಟು ಉಳಕೊಂಡು ಬಂದಿದ್ದೇವೆ. ಆ ರಾಕ್ಷಸರ ಉಪಟಳವನ್ನು ನಮಗೆ ವರ್ಣಿಸಿ ಹೇಳೋದಕ್ಕೂ ಬಾಯಿ ಬರ್ತಾ ಇಲ್ಲಾ ! ಮಣಿಕಾಸುರಾ, ಮಲ್ಲಾಸುರ, ಎಂಬ ಹೆಸರಿನ ಇಬ್ಬರು ಕ್ರೂರ ರಾಕ್ಷಸರು ಆ ಮಣಿಚೂಲ ಪರ್ವತದ ಸಮೀಪದಲ್ಲಿಯೇ, ದೈತ್ಯ ರಾಜ್ಯ ಕಟ್ಟಿಕೊಂಡು ಚಕ್ರವರ್ತಿಗಳಾಗಿ ಮೇರೀತಾ ಇದ್ದಾರೆ. ಒಂದಾನೊಂದು ಸಮಯದಲ್ಲಿ ಆ ರಾಕ್ಷಸ ಚಕ್ರವರ್ತಿಗಳು, ತಮ್ಮ ವನವಿಹಾರವನ್ನು ಮುಗಿಸಿಕೊಂಡು, ತಮ್ಮ ನಗರಕ್ಕೆ ಹೊರಟಿರುವಾಗ್ಗೆ, ಆಕಸ್ಮಾತ್ತಾಗಿ ನಮ್ಮ ಮಣಿಚೂಲ ಪರ್ವತದ ಪುಣ್ಯಾಶ್ರಮ ಅವರ ದೃಷ್ಟಿಗೆ ಗೋಚರವಾಯ್ತು. ತಕ್ಷಣವೇ ಆ ಅ ಸುರರು ನಮ್ಮ ಆಶ್ರಮಕ್ಕೆ ನುಗ್ಗಿ, ನಮ್ಮವರೂ ಅನ್ನುವವರನ್ನೆಲ್ಲಾ ಹಣ್ಣಾಗುವಂತೆ ಬಡಿದರು. ಕುಣಿದು ಕುಪ್ಪಳಿಸಿ ಕೇಕೆ ಹಾಕುತ್ತಾ, ನಮ್ಮ ಪರ್ಣಕುಟಿರಗಳಿಗೆಲ್ಲಾ ಬೆಂಕೀ ಹಚ್ಚಿದರು. ದಿನ ನಿತ್ಯದ ಕೆಲಸದಿಂದ ದಣಿದುಕೊಂಡಿದ್ದ ಆಶ್ರಮವಾಸಿ ಸ್ತ್ರೀಯರನ್ನೆಲ್ಲಾ ಗೋಳಾಡಿಸಿ, ಹಿಂಸೆಕೊಟ್ಟರು. ನಂತರ ಬ್ರಹ್ಮಚಾರಿ ವಟುಗಳನ್ನೆಲ್ಲಾ ಜುಟ್ಟು ಹಿಡಿಹಿಡಿದು ಡಿಕ್ಕಿಯಾಡಿಸಿದರು. ಆದರಿಂದಾಗಿ ಸಾಕಷ್ಟು ವಟುಗಳು ತಲೆಯೊಡೆದುಕೊಂಡು ಗೋಳಾಡ್ತಾ ಇದ್ದಾರೆ. ಆದಾದ ನಂತರ, ಅವರು ಯಜ್ಞಶಾಲೆಗೆ ನುಗ್ಗಿ ನಾವು ಏಳೂ ಜನ ಋಷಿಗಳಿಗೆ, ಕೊರಳಿಗೆ ಉರುಲು ಹಾಕಿ, ನಮನ್ನೆಲ್ಲಾ ಬಾವಿಯ ನೀರಿನಲ್ಲಿ ಮುಳು ಮುಳುಗಿಸಿ ಎಬ್ಬಿಸಿದರು. ಆ ರಾಕ್ಷಸರ ಉಪಟಳವನ್ನು ಎಷ್ಟೆಂದು ವರ್ಣಿಸೋಣಾ?... ಆ ದುಷ್ಟರು, ನಮ್ಮ ಆಶ್ರಮದ ತರುಲತೆಗಳನ್ನೆಲ್ಲಾ ಕಡಿದು ತುಂಡುತುಂಡು ಮಾಡಿದರು. ಕಾಮಧೇನುವಿನಂಥಾ ಆಶ್ರಮದ ಆಕಳುಗಳಿಗೆ ಹಿಂಸೆಕೊಟ್ಟು, ಅವುಗಳ ಕೆಚ್ಚಲು ಕೊಯ್ದು ರಕ್ತಪಾನ ಮಾಡಿದರು. ಯಜ್ಞ ಶಾಲೆಯಲ್ಲಿ ಕುಳಿತು ಮದ್ಯ ಮಾಂಸಗಳನ್ನು ಸೇವಿಸಿ, ಅದನ್ನು ಅ ಪವಿತ್ರಗೊಳಿಸಿದರು. ಯಜ್ಞಕುಂಡದಲ್ಲಿ ಮಲಮೂರ್ತಾದಿಗಳ ವಿಸರ್ಜನೆಮಾಡಿದರು. ಆದರೆ, ಆಶ್ರಮವಾಸಿಗಳಾದ ನಮ್ಮನ್ನೆಲ್ಲಾ "ಇದ್ದೂ ಸತ್ತವರಂತೆ ಬಾಳಿಕೊಂಡಿರಲೀ" ಅನ್ನೋ ಮನೋಭಾವದಿಂದಾ ಬಿಟ್ಟು ಕೊಟ್ಟು, ತಮ್ಮ ನಗರಕ್ಕೆ ಹೊರಟು ಹೋದರು.

**ಶಾಪವೀಯುತ ಸುಡುವೆವೆನೆ ಆ । ತಾಪಸದ ಫಲ ಕ್ಷೀಣ ವಪ್ಪುದು ।**
**ತಾಪತಾಳದೆ ಬಂದೆವಿಲ್ಲಿಗೆ ಕೇಳು ಸುರನಾಥಾ॥**
**ಈ ಪರಿಯ ಗೋಳುಂಟು ನಮ್ಮಯ। ತಾಪಸದ ಶಕ್ತಿಯನು ಉಳಿಸಲು ।**
**ಕೋಪದಿಂ ವಧೆ ಮಾಡು ದೈತ್ಯರ ನಮ್ಮ ನೀನುಳಿಸೂ ॥೨೧॥**

ಭಾವಾರ್ಥ- ಆ ರಾಕ್ಷಸರಿಗೆ ಶಾಪಕೊಟ್ಟು ಅವರನ್ನು ಸುಟ್ಟು ಹಾಕಿಬಿಡಬಹುದಾಗಿತ್ತು; ಆದರೆ ನಾವು ಹಾಗೆ ಸಿಟ್ಟಿನ ಕೈಯ್ಯಲ್ಲಿ ಬುದ್ಧೀ ಕೊಟ್ರೆ, ನಮ್ಮ ಬಹುದಿನದ ತಪಸ್ಸಿನ ಫಲವೆಲ್ಲಾ ನಷ್ಟವಾಗಿ ಹೋಗ್ತಾ ಇದೆ ಅದಕ್ಕಾಗಿ ಬೇರೆ ಉಪಾಯಕಾಣದೇ ನಾವು ನಿನ್ನ ಬಳಿಗೆ ಓಡಿ ಬಂದಿದ್ದೇವೆ. "ದುಷ್ಟ ಶಿಕ್ಷಕನಾದ ನೀನು ಅವರ ಮೇಲೆ ದಂಡೆತ್ತಿ ಹೋಗಿ ಆ ರಾಕ್ಷಸರನ್ನು ಸಂಹಾರ ಮಾಡೂ; ಮತ್ತೂ ನಮ್ಮ ಯಜ್ಞ ಕಾರ್ಯಗಳು ನಿರ್ವಿಘ್ನವಾಗಿ ಜರುಗುವದಕ್ಕೆ ಅನುಕೂಲ ಮಾಡಿಕೊಡೂ "ಅಂತಾ ನಾವೀಗ ನಿನ್ನಲ್ಲಿ ಬಿನ್ನೈಸಿ ಕೊಳ್ಳೋದಕ್ಕೆ ಬಂದಿದ್ದೇವೆ. ಹೀಗೆ ಆ ಸಪ್ತರ್ಷಿಗಳು ದೇವೇಂದ್ರನಲ್ಲಿ ವಿನಂತೀ ಮಾಡಿಕೊಳ್ತಾ ಇದ್ದಾರೆ.

ಮಲ್ಲ ಮಣಿಕರ ಸೊಲ್ಲ ಕೇಳುತ । ತಲ್ಲಣಿಸಿ ನಡುಗಿದನು ಸುರಪತಿ ।
ಇಲ್ಲ ನನಗಿದು ಸಾಧ್ಯವಪ್ಪದು ಎನುತ ಹಿಂಜರಿದಾ ॥
ಕೊಲ್ಲಲಾಗದು ಶಿವನ ಹೊರತವ । ರ್ಗಿಲ್ಲ ಮರಣವು ನಾನು ಸೋತಿಹೆ ।
ಸಲ್ಲಿಸುತ್ತಿಹೆ ಕಪ್ಪ ಕಾಣಿಕೆ ಕಾಲಕಾಲದಲೀ ।೨೨॥

ಕರುಣೆಯಿಲ್ಲದ ಕಟುಕರವರ್ಗೈ । ಸುರರನೆಲ್ಲಾ ಸೋಲಿಸಿರ್ಪರು।
ಗರುವ ಬಹಳಿದೆ ಬ್ರಹ್ಮನಾವರ ಕಾಯುತಿದೆ ಅವರ ॥
ಹರಿಗೆ ಹೇಳಿರಿ ನಿಮ್ಮ ಗೋಳನು । ಕರೆದು ಒಯ್ವನು ಶಿವನ ಬಳಿಗೆ ।
ಜರಿಯದೇ ಪರಮಾತ್ಮ ಪಾಲಿಪ ಹರಿಯ ಮಾತನ್ನು ।೨೩॥

ಹರಿಯೆ ಹರನಾಗಿಹನು ಸತ್ಯದಿ । ಹರನೆ ಹರಿಯೆಂದೊಪ್ಪಿ ವೇದವು ।
ಗುರುತಿಸುತ್ತಿದೆ ಹರಿಹರಾ ದ್ವೈತವನು ಖಂಡಿಸುತಾ॥
ಹರಿಗೆ ನಾನೂ ದಾಸನಾಗಿಹೆ। ಹರನೆ ಗುರುವಾಗಿರುವ ನೆನಗೆ।
ಹರಿಯ ಭಜಿಸಲು ಹರನು ಮೆಚ್ಚುವ ವೇದವಾಕ್ಯವಿದೂ ।೨೪॥

ಎಂದು ಇಂದ್ರನು ನುಡಿಯಲಾಕ್ಷಣ। ಮುಂದೆ ಪೇಳದಿರೆಂದು ಮುನಿಗಳು।
ಚಂದ ವೇದವನೋದಿ ನಾವ್ ತಿಳಿದಿಲ್ಲವೇ ಇದನು ॥
ಮುಂದಿನಾ ಗತಿಯೇನು ಎನ್ನುತ। ಇಂದ್ರಗಾಶೀರ್ವದಿಸಿ ಹರಸುತ।
ಚಂದದ್ವೈಕುಂಠಕ್ಕೆ ಹೊರಟರು ವ್ಯೋಮ ಮಾರ್ಗದಲೀ ।೨೫॥

ಶಬ್ದಾರ್ಥ-ಸೊಲ್ಲು = ಸುದ್ದಿ; ತಲ್ಲಣಿಸು=ತತ್ತರಿಸು; ಸಾಧ್ಯವಪ್ಪದು = ಅಸಾಧ್ಯ; ದ್ವೈತ = ೨ ಬಗೆ; ಖಂಡಿಸು = ಕತ್ತರಿಸು.

ಭಾವಾರ್ಥ- ಮಲ್ಲಾಸುರ, ಮಣಿಕಾಸುರರ ಹೆಸರು ಕೇಳುತ್ತಲೇ, ದೇವೇಂದ್ರ ಬೆಚ್ಚಿಬಿದ್ದ. "ಮಹಾಮುನಿಗಳೇ, ನನಗಿದು ಅಸಾಧ್ಯವಾದ ಕೆಲಸಾ!.." ಅಂತ ಹಿಂಜರಿಯೋದಕ್ಕೆ ಶುರು ಮಾಡಿದ!.. ಯಾಕೇಂದರೆ, ಈಗಾಗಲೇ ನಾನು ಆ ಪರಾಕ್ರಮಿಗಳೊಂದಿಗೆ ಹೋರಾಡಿ, ಸೋತು ಬಿಟ್ಟಿದ್ದೆನೆ. ಕಾಲ ಕಾಲದಲ್ಲಿಯೂ ಅವರಿಗೆ ಕಪ್ಪು ಕಾಣಿಕೆಯನ್ನು ಸಲ್ಲಿಸ್ತಾ, ಇಂದ್ರ ಪದವಿಯನ್ನು ರಕ್ಷಿಸಿಕೊಂಡಿದ್ದೇನೆ. ಮಹಾತ್ಮರೇ ಪರಮಾತ್ಮನ ಹೊರತು,

ಬೇರಾರಿಂದಲೂ ಅವರಿಗೆ ಮರಣವಿಲ್ಲಾ." ಹಾಗೆ ಬ್ರಹ್ಮದೇವ ಅವರಿಗ ವರ ಕೊಟ್ಟಿರುವದರಿಂದ ಅವರು ಅಜೇಯರಾಗಿ ದುಷ್ಟ ಕಾರ್ಯದಲ್ಲಿ ಪ್ರವೃತ್ತರಾಗಿದ್ದಾರೆ. ಇದಕ್ಕೆ ಒಂದೇ ಒಂದು ಉಪಾಯವಿದೆ!..... ಮೊದಲು ನೀವು ವೈಕುಂಠಕ್ಕೆ ಹೋಗಿ, ವಿಷ್ಣು ಪರಮಾತ್ಮನಿಗೆ ನಿಮ್ಮ ದುಃಖವನ್ನು ನಿವೇದನೇ ಮಾಡಿಕೊಳ್ಳಿರಿ! ಆ ದುಷ್ಟರು ಬಹಳೇ ಮದೋನ್ಮತ್ತ ರಾಗಿದ್ದಾರೆ. ಅಷ್ಟದಿ ಕ್ಪಾಲಕರನ್ನೂ, ಕೂಡಾ ಯುದ್ಧದಲ್ಲಿ ಸೋಲಿಸಿ ಬಿಟ್ಟಿದ್ದಾರೆ. ಬ್ರಹ್ಮನ ವರ ಅವರನ್ನು ರಕ್ಷಿಸುತ್ತಿರುವಂಥಾ ಸಮಾಚಾರವನ್ನು ಭಗವಂತನಿಗೆ ತಿಳಿಸಿರಿ! ಅಂದರೆ, ಧರ್ಮರಕ್ಷಕನಾದಂಥಾ ವಿಷ್ಣು ಪರಮಾತ್ಮ ಸತ್ಯವಾಗಿಯೂ ನಿಮ್ಮನ್ನು ಶಿವನ ಬಳಿಗೆ ಕರೆದೊಯ್ಯುತ್ತಾನೆ. ಈ ಸಮಸ್ಯೆ ಪರಿಹಾರ ವಾಗೋದಕ್ಕೆ, ಇದೊಂದೇ ಮಾರ್ಗ!" ಶ್ರೀ ಹರಿಯ ಮಾತನ್ನು ಪರಮಾತ್ಮ ಎಂದೆಂದೂ ತೆಗದು ಹಾಕಲಾರಾ ! ನಿಜ ಹೇಳಬೇಕೆಂದರೆ ಹರಿಯೇ ಹರನಾಗಿದ್ದಾನೆ. ಹರನೇ ಹರಿಯೆಂದೂ; ಹರಿಯೇ ಹರನೆಂದೂ, ವೇದಗಳು ಸಾರಿಸಾರಿ ಹೇಳ್ತಾ ಇದ್ದಾವೆ. " ಶಿವಸ್ಯ ಹೃದಯಂ ವಿಷ್ಣು; ವಿಷ್ಣೋಶ್ಚ ಹೃದಯಂ ಶಿವಃ " ಎಂಬ ಒಂದೇ ಒಂದು ವೇದವಾಕ್ಯವೇ ಈ ಮಾತನ್ನು ಸ್ಪಷ್ಟಿಕರಸ್ತಾ ಇದೆ. "ಹರಿ ಹರರು ಬೇರೆ ಬೇರೆ ಆಗಿದ್ದಾರೆ" ಎಂಬ ದ್ವೈತ ಭಾವವನ್ನು ಅದು ಖಂಡಿಸ್ತಾ ಇದೆ. ನಾನು ಕೂಡಾ ವಿಷ್ಣುವಿನ ಸೇವಕನೇ ಆಗಿದ್ದೇನೆ; ಶಿವನೇ ನನಗೆ ಗುರುವಾಗಿದ್ದಾನೆ. ಹರಿ ಹರರಲ್ಲಿ ಭೇದವಿಲ್ಲಾ! ಹರನನ್ನು ಭಜಿಸಿದರೆ ಹರಿಯು ಆನಂದಪಡ್ತಾನೆ; ಹರಿಯನ್ನು ಸ್ತೋತ್ರ ಮಾಡಿದರೆ ಪರಮಾತ್ಮ ಸಂತೋಷ ಪಡ್ತಾ ಇದ್ದಾನೆ. ಇದು ವೇದಗಳಲ್ಲಿ ಉಸುರಿದ ಸತ್ಯವಚನವಾಗಿದೇ" ಎಂದು ಇಂದ್ರ ನುಡಿದಾಕ್ಷಣಕ್ಕೇ ಮುನಿಗಳು ಅವನನ್ನು ಕುರಿತು, "ಅಪ್ಪಾ ಮುಂದೆ ಹೇಳೋದನ್ನ ಸಾಕು ಮಾಡು!... ಯಾಕೆಂದರೆ ಇಷ್ಟು ಕಾಲದಿಂದಲೂ ಚತುರ್ವೇದಗಳನ್ನು ಓದಿ ಅರಗಿಸಿಕಕೊಂಡ ನಮಗೆ, ಆ ಪರಮಾತ್ಮನ ಸ್ವರೂಪ ಜ್ಞಾನವಾಗಿರಲಿಕ್ಕಿಲ್ಲವೇ? ವೇದ ಮುಖದಿಂದಾ, ನಾವು ಅದನ್ನೆಲ್ಲಾ ತಿಳಿದುಕೊಂಡವರಾಗಿದ್ದೇವೆ. ನಿನಗೆ ಮಂಗಲವಾಗಲಿ! ಸದಾ ಕಾಲದಲ್ಲಿಯೂ ದೀನದಲಿತರನ್ನು ಉದ್ಧಾರಮಾಡು! ಪಂಡಿತರ ಮೇಲೆ ನಿನ್ನ ಪ್ರೀತಿಯಿರಲೀ!! ಎಂದು ಹೃತ್ಪೂರ್ವಕವಾಗಿ ಆಶೀರ್ವಾದ ಮಾಡಿ ,ನಂತರ ಅತ್ಯಂತ ಸುಂದರ ತಾಣವಾದಂಥಾ ವೈಕುಂಠ ಲೋಕಕ್ಕೆ, ವ್ಯೋಮ ಮಾರ್ಗದಿಂದಾ ಆ ಸಪ್ತರ್ಷಿಗಳು ಪ್ರಯಾಣ ಬೆಳಸ್ತಾ ಇದ್ದಾರೆ.

ಇತಿ, ಸಾಹಿತ್ಯ ರತ್ನಾಕರ, ನಿಮಗಭಟ ಜೋಶಿ ವಿರಚಿತ, ಮ್ಹಾಲಸಾ ಮಾರ್ತಾಮಡ ಭೈರವ ಪುರಾಣದೊಳ್," ಅಮರಾವತಿ ಪ್ರಯಾಣೋ" ನಾಮಖ ಚತಿರ್ಥೋದ್ಯಾಯಃ ॥

ಅಂತು ಅದ್ಯಾಯ ೪ ಕ್ಕಂ, ಪದ ೨೫ ಕ್ಕಮ , ಒಟ್ಟುಪದ- ೭೫ ಕ್ಕಂ, ಮಂಗಲಮಸ್ತು!

ಇತಿ ಶ್ರೀ ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್ ಜೋಶೀ ವಿರಚಿತ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್
''ಅಮರಾವತೀ ಪ್ರಯಾಣೋ'' ನಾಮಕ ಚತುರ್ಥೋಧ್ಯಾಯಃ ॥
ಅಂತು ಅಧ್ಯಾಯ ೪ ಕ್ಕಂ, ಪದ ೨೫ ಕ್ಕಂ, ಒಟ್ಟುಪದ ೭೫ ಕ್ಕಂ ಮಂಗಲಮಸ್ತು.

ಏಳುಕೋಟಿಗ! ಏಳುಕೋಟಿಗ!! ಏಳುಕೋಟಿಗ!!! ಸಾಂಗಬಲೋ !!!.......

ಪಂಚಮೋದ್ಯಾಯಃ ॥

# ೫ ನೇ ಅಧ್ಯಾಯ

"ವೈಕುಂಠ ದರ್ಶನ"

- ಸೂಚನೆ -

**ಹೊರಟ ರೈ ಸಪ್ತರ್ಷಿಗಳು ಶ್ರೀ । ಹರಿಯ ನೆನೆಯುತ ಭಕ್ತಿ ಭಾವದಿ।**
**ಉರಗ ಶಯನನ ತೇಜರಾಶಿಯ ವೈಷ್ಣವಾಲಯಕೇ॥**

**ಭಾವಾರ್ಥ-** "ಕವಿಯು ಇನ್ನು ಮುಂದಿನ ನುಡಿಗಳಲ್ಲಿ ಆ ಸಪ್ತರ್ಷಿಗಳು ಶ್ರೀ ಹರಿಯನ್ನು ನೆನೆಯುತ್ತ ಭಕ್ತಿಭಾವದಿಂದ, ಶ್ರೀಮನ್ನಾರಾಯಣನ ನಿವಾಸವಾದಂಥಾ, ವೈಕುಂಠಕ್ಕೆ ಪ್ರಯಾಣ ಮಾಡಿದ್ದನ್ನು ಹೇಳ್ತೇನಿ" ಎಂಬುದಾಗಿ ಸೂಚಿಸಿ, ಮುಂದಿನ ಕಥಾನಕವನ್ನು ಪ್ರಾರಂಭಿಸ್ತಾ ಇದ್ದಾನೆ.



ಬಂದು ಇಳಿದರು ಸೂರ್ಯ ಮಂಡಲ। ದಿಂದ ವೈಕುಂಠಕ್ಕೆ ಮುನಿಗಳು ।
ಇಂದಿರೇಶನ ಅಂದ ಮಂದಿರ ಕಂಡು ನಮಿಸಿದರೂ ॥
ನಿಂದು ದೂರದಿ ನೋಡಿದರು ಆ ।ಮಂದ ಹಾಸದ ಮುಖವ ಋಷಿಗಳು।
ಬಂದವೈ ರೋಮಾಂಚ ಭಕ್ತಿಯ ಭಾವದಲಿ ಬೆರೆತೂ ।೧॥

ಉನ್ನತಾಸನದಲ್ಲಿ ಸ್ವಸ್ತಿಕ್। ಸನ್ನೆ ಚಿನ್ಹೆಯ ಲಿರ್ದ ಶ್ರೀಹರಿ।
ಸನ್ನುತಾಂಗನು ಒಪ್ಪುತಿರ್ದನು ನಾಲ್ಕು ಭುಜಗಳಲೀ ॥
ಕೆನ್ನೆದುಟಿಗಳು ಕೆಂಪು ಕೋಮಲ । ವಿನ್ನು ಮೈ ಬಣ್ಣೆಲ್ಲ ತಿಳಿ ನೀಲ್ ।
ಚೆನ್ನ ಚಲುವಿನ ಮೂರ್ತಿ ನೋಡುತೆ ಹರ್ಷ ಉಕ್ಕುತಲೀ ।೨॥

ಧನ್ಯರಾದೆವು ಆವು ಯಮಗಿ। ನ್ನನ್ಯ ಜನ್ಮದ ಭ್ರಾಂತಿ ತಪ್ಪಿತು।
ಮಾನ್ಯಶ್ರೀ ಹರಿ ಪಾದ ದೊರಕಿದ ಮೇಲದಿನ್ನೇಕೆ ॥
ಅನ್ಯ ಜನ್ಮಕ್ಕಳುಕುವಾ ಪರಿ। ಶೂನ್ಯ ವಾಯಿತು ಎಂದು ಹರ್ಷಿಸಿ ।
ಧನ್ಯತೆಯ ನಮನವನು ಸಾಷ್ಟಾಂಗದಲಿ ಸಲಿಸಿದರು ।೩॥

**ಭೂರಿ ರತ್ನಾಸನದಿ ಮೆರೆಯುವ । ಚಾರು ಚರಣನ ಕಂಡು ಸನಿಹದಿ ।**
**ಬಾರಿ ಬಾರಿಗು ನಮಿಸಿ ಗಂಟಲುಗಟ್ಟಿ ನಿಂತಿರಲು ॥**
**ದ್ವಾರ ಬಾಗಿಲಲಿದಿದ್ದ ವಿಜಯನು । ಸಾರಿ ಬಂದನು ಮುಗಿದು ಕೈ ಅವ।**
**ಧಾರು ಧಾರೆನ್ನುತಲಿ ಸ್ವಾಗತಿಸಿದನು ಮುನಿಗಳನು ॥೪॥**

ಶಬ್ದಾರ್ಥ – ಸೂರ್ಯಮಂಡಲ = ಆಕಾಶ; ವೈಕುಂಠ = ವಿಷ್ಣುಲೋಕ; ಇಂದಿರೇಶ = ವಿಷ್ಣು; ಮಂದಹಾಸ = ಮುಗುಳ್ನಗೆ; ರೋಮಾಂಚ = ನವಿರೇಳು; ಉನ್ನತಾಸನ = ಶ್ರೇಷ್ಠಸಿಂಹಾಸನ; ಚಿನ್ಹೆ = ಗುರುತು (ಆಕಾರ); ಒಪ್ಪು = ಶೋಭಿಸು; ಸನ್ನುತಾಂಗ = ಎತ್ತರವಾದ ಅವಯವಗಳುಳ್ಳ; ತಿಳಿ ನೀಲ್ = ಆಕಾಶ ವರ್ಣ; ಚನ್ನ = ಚಲುವ; ಆವು = ನಾವು ; ಯಮಗೆ = ನಮಗೆ; ಅನ್ಯಜನ್ಮದ = ಜನ್ಮಾಂತರದ ; ಅಳುಕು = ಭಯ; ಶೂನ್ಯ = ಇಲ್ಲದಂತಾಗು; ಹರ್ಷಿಸಿ = ಸಂತಸಗೊಂಡು ನಮನ = ನಮಸ್ಕಾರ; ಅವಧಾರು = ಸ್ವಾಗತಮಾಡುವ ಕರೆ; ಭೂರಿ = ತುಂಬಿದ; ಗಂಟಲುಗಟ್ಟಿ = ಮಾತಾಡಲು ಬಾರದಂತೆ.

ಭಾವಾರ್ಥ–(1 ರಿಂದ 4) ಆ ಸಪ್ತರ್ಷಿಗಳು ಆಕಾಶದಿಂದ ವೈಕುಂಠಕ್ಕೆ ಬಂದಿಳಿದು ಶ್ರೀ ಹರಿಯ ವೈಷ್ಣವ ಮಂದಿಯನ್ನು ನೋಡಿ, ಭಯಭಕ್ತಿಗಳಿಂದ ನಮಸ್ಕರಿಸಿದರು. ಸ್ವಲ್ಪ ದೂರದಿಂದಲೇ ಸಿಂಹಾಸನದಲ್ಲಿ ವಿರಾಜಮಾನನಾಗಿದ್ದ, ಮಂದಸ್ಮಿತನಾದ ಶ್ರೀ ಹರಿಯ ಮುಖಾರವಿಂದವನ್ನು ನೋಡಿದರು. ಶ್ರೀಹರಿಯು ಕಾಣುತ್ತಲೇ, ಸಪ್ತರ್ಷಿಗಳಿಗೆ ಭಕ್ತಿಭಾವದಿಂದ ರೋಮಾಂಚನಗಳೆದ್ದವು. ವಿಷ್ಣು ಪರಮಾತ್ಮನು ಸ್ವಸ್ತಿಕಾಕೃತಿಯಲ್ಲಿ ಸಿಂಹಾಸನದ ಮೇಲೆ ಮಂಡಿಸಿದ್ದನು. ಆತನು ಚತುರ್ಭುಜನಾಗಿಯೂ, ಶಂಖ, ಚಕ್ರ, ಗಧಾ, ಪದ್ಮಧಾರಿಯಾಗಿಯೂ, ತುಟಿ ಹಾಗೂ ಗಲ್ಲಗಳು ಕೆಂಪಾಗಿಯೂ, ಮನ

ಮೋಹಕವಾಗಿಯೂ ಇದ್ದವು. ಸಪ್ತರ್ಷಿಗಳಿಗೆ ವಿಷ್ಣುವಿನಸುಂದರ ಹಾಗೂ ಹರ್ಷದಾಯಕ ಮುಖ ಕಂಡು ಸಂತೋಷವಾಯಿತು. ಅವರು ತಮ್ಮ ಮನಸ್ಸಿನಲ್ಲಿಯೆ ನಾವಿನ್ನು ಧನ್ಯರಾದೆವು. ನಮಗೆ ಜನ್ಮಾಂತರಗಳ ಭಾಧೆ ತಪ್ಪಿದಂತಾಯಿತು. ಸೃಷ್ಟಿಗೀಶನಾದ ಶ್ರೀ ಹರಿಯ ಪಾದಗಳೇ ನಮಗೆ ದೊರೆತಿರುವಾಗ, ನಮಗೆ ಮುಂದಿನ ಜನ್ಮಗಳ ಭಯವೆಲ್ಲಿ?'' ಎಂದು ತಮ್ಮ ತಮ್ಮೊಳಗೆ ಮಾತನಾಡಿಕೊಳ್ಳುತ್ತ ಧನ್ಯತೆಯನ್ನು ಪಡೆದವರಾಗಿ, ಆ ಮುಕುಂದನಿಗೆ ಮೇಲಿಂದ ಮೇಲೆ, ಸಾಷ್ಟಾಂಗ ನಮಸ್ಕಾರಗಳನ್ನು ಮಾಡ್ತಾ ಇದ್ದಾರೆ. ಆಗ ಮಹಾವಿಷ್ಣುವಿನ ದ್ವಾರಪಾಲಕರಲ್ಲೊಬ್ಬನಾದ ವಿಜಯ ಎನ್ನುಂಥಾ ಮಹಾನುಭಾವ, ಮುನಿಗಳ ಬಳಿಗೆ ಭಯಭಕ್ತಿಯಿಂದಾ ಕೈ ಜೋಡಿಸಿಕೊಂಡು ಓಡಿ ಬರ್ತಾ ಇದ್ದಾನೆ. ''ಓಃ! ಮಹಾ ಮುನಿಗಳಾದ ಸಪ್ತರ್ಷಿಗಳೇ !... ಬರಬೇಕೂ ಬರಬೇಕೂ ನಿಮಗೆ ಸುಸ್ವಾಗತಾ!'' ಎಂದು ಮಾರ್ಗತೋರಿಸುತ್ತಾ ಆ ವೈಷ್ಣವ ಮಂಟಪದಲ್ಲಿ ಕರಕೊಂಡು ಬರ್ತಾ ಇದ್ದಾನೆ. ರತ್ನ ಖಚಿತ ಸಿಂಹಾಸನದಲ್ಲಿ ವಿರಾಜ ಮಾನವಾಗಿ ಕುಳಿತಿದ್ದಂಥಾ ಶ್ರೀ ಹರಿಯನ್ನು ಅತೀ ಸಮೀಪದಿಂದಾ ನೋಡಿ, ಆ ಮುನಿಗಳಿಗೆ ಭಕ್ತಿ ಭಾವದಿಂದಾ ಗಂಟಲು ಉಬ್ಬಿ ಹೋಗ್ತಾಯಿದೆ. ಅವರಿಗೆ ಮಾತಾಡುವದಕ್ಕೂ ಸಾಧ್ಯಾವಾಗ್ತಾ ಇಲ್ಲಾ. ಆಗ ಆ ಸಪ್ತರ್ಷಿಗಳು ಪುನಃ ಪುನಃ ನಮಸ್ಕರಿಸುತ್ತಾ ಭಗವನ್ನಾರಾಯಣನ ಮುಖವನ್ನೇ ತದೇಕ ದೃಷ್ಟಿಯಿಂದಾ ನೋಡ್ತಾ ನಿಂತು ಬಿಡ್ತಾರೆ. ಭಗವಂತನಲ್ಲಿ ಆ ಸಪ್ತರ್ಷಿಗಳ ಮನಸ್ಸು, ಸಂಪೂರ್ಣಲೀನವಾಗಿ ಹೋಗ್ತಾ ಇದೆ.

**ಕಮಲ ನಾಭಿಯು ಬಹಳ ಸುಂದರ । ಕಮಲವದನನ ನೇತ್ರ, ಸುಂದರ ।**
**ಕಮಲ ಹೃದಯನಪಾದ ಸುಂದರ ಸಕಲ ಸುಂದರವೂ ॥**
**ವಿಮಲ ಮುನಿಗಳ ಹೃದಯವೆಂಬುವ। ಕಮಲದಲಿ ನೆಲೆ ನಿಂದನಾ ಖಗ ।**
**ಗಮನ ಗೋಚರಿಸಿದನು ಸಕಲವು ಪೂಜ್ಯವೆನಿಸುತಲೀ ।।೫।।**

ನೀಲ ಮೇಘಶ್ಯಾಮ ಸುಂದರ । ನೀಲ ಮಣಿ ಕೌಸ್ತುಭ ಸುಪೂಜಿತ ।
ಮಾಲೆ ರತ್ನಾಭರಣ ಪೀತಾಂಬರಗಳನು ಧರಿಸೀ ॥
ಮೇಲು ಗದೆ ಶಾರ್ಙ್ಗವದಿ ಶೋಭಿಸಿ। ನೀಲ ದುಂಗುರ ಶಂಖ ಚಕ್ರಾ।
ವಾಲು ತಿರ್ಪಾ ಮಿಸುನಿ ಎಳೆ ಜನಿವಾರ ಕೊರಳಿನಲಿ ॥೬॥

ಮುಕುಟ ರತ್ನಾವಳಿಯು ಶೋಭಿಪ । ರಕುತ ತಿಲಕವ ಫಣೆಗೆ ಇಟ್ಟಿಹ ।
ಸಕಲದೇವರ ಒಡೆಯನಂ ನೋಡಿದರು ಮನದಣಿಯೇ ॥
ಭಕುತ ವತ್ಸಲ ಭಯನಿವಾರಕ । ಅಖಿಳ ಬ್ರಹ್ಮಾಂಡವನು ಪೊರೆಯುವ ।
ಸಕಲ ವೇದೋದ್ಭವನ ನೆನೆದರು ಸಪ್ತಯೋಗಿಗಳ ॥೭॥

ಶಬ್ದಾರ್ಥ - ನಾಭಿ = ಹೊಕ್ಕಳು ; ವದನ = ಮುಖ; ನೇತ್ರ = ಕಣ್ಣು ; ಖಗ ಗಮನ = ವಿಷ್ಣು; ಕೌಸ್ತುಭ = ವಿಷ್ಣುವಿನ ರತ್ನಹಾರ; ಪದ್ಮ = ಕಮಲ; ವಾಲು = ಹೊಯ್ದಾಡು; ಮಿಸುನಿ = ಚಿನ್ನ; ಮುಕುಟ = ಕಿರೀಟ; ರಕುತ ತಿಲಕ = ಕೆಂಪುನಾಮ; ನಿವಾರಕ = ಕಳೆಯುವವ; ಅಖಿಳ = ಎಲ್ಲ; ಬ್ರಹ್ಮಾಂಡ = ಜಗತ್ತು; ಪೊರೆ = ರಕ್ಷಿಸು ; ವೇದೋದ್ಭವ = ವೇದಗಳನ್ನು ಹುಟ್ಟಿಸಿದವ; ಸಪ್ತ = ಏಳು.

**ಭಾವಾರ್ಥ-** (೫,೭) ಬ್ರಹ್ಮನಂಥಾ ಮಹಾನುಭಾವನಿಗೆ ಜನ್ಮಕೊಟ್ಟ ಆ ವಿಷ್ಣುವಿನ ನಾಭಿ ಕಮಲ, ಒಳ್ಳೇ ಸುಂದರವಾಗಿಯೂ, ಗಂಭೀರವಾಗಿಯೂ, ಗೋಚರಿಸ್ತಾ ಇತ್ತು. ಆ ವಿಷ್ಣು ಪರಮಾತ್ಮನ ಮುಖ ಕಮಲದಲ್ಲಿ ನೇತ್ರ ಕಮಲವೆನ್ನುವ, ಎರಡು ಸುಂದರ ಕಣ್ಣುಗಳು ಗೋಚರಿಸ್ತಾ ಇದ್ದವು, ಕರುಣಾಳುವಾದಂಥಾ ಆ ವಿಷ್ಣು ಪರಮಾತ್ಮನ ಪಾದಗಳಿಂದ ಮೊದಲ್ಗೊಂಡು, ಸಕಲ ಅಂಗಗಳೂ ಸುಂದರವಾಗಿ ಕಾಣ್ತಾ ಇದ್ದವು. ಆ ಸಪ್ತರ್ಷಿಗಳ ಹೃದಯವೆಂಬ ಕಮಲದಲ್ಲಿ ಖಗವಾಹನನಾದ ಭಗವನ್ನಾರಾಯಣನು, ಶಾಶ್ವತವಾಗಿ ನೆಲೆ ನಿಂತು ಬಿಟ್ಟಾ ! ಭಗವಂತನ ಸಕಲ ಅವಯವಗಳೂ

ಪೂಜ್ಯವಾಗಿ ಗೋಚರಿಸಿದವು. ನೀಲ ಮೇಘದಂತೆ ಪರಿಶುದ್ಧನಾಗಿರುವ ಮಹಾವಿಷ್ಣುವು, ನೀಲಮಣಿ, ಕೌಸ್ತುಭವೆಂಬ ರತ್ನಹಾರ, ಕೇಯೂರ, ತುಲಸಿ ಮಾಲೆ, ರತ್ನಾಭರಣಗಳಿಂದ ಪರಿಶೋಭಿತನಾಗಿದ್ದ. ಝಗಝಗಿಸುವ ಪೀತಾಂಬರವನ್ನುಟ್ಟು, ಬೆರಳಿನಲ್ಲಿ ನೀಲದುಂಗುರ ಧರಿಸಿ, ಶಂಖ ಚಕ್ರಗಧಾ ಪದ್ಮಗಳನ್ನು ಚತುರ್ಭುಜಗಳಲ್ಲಿ ಧರಿಸಿ, ಕೊರಳಲ್ಲಿ ಬಂಗಾರದೆಲೆಯ ಜನಿವಾರವನ್ನು ಅವನು ಧಾರಣೆ ಮಾಡಿಕೊಂಡಿದ್ದಾ!..... ಆತನ ಕಿರೀಟವು ರತ್ನ ಪ್ರಭಾವಳಿಯಿಂದಾ ಪರಿಶೋಭಿತವಾಗಿತ್ತು. ಪರಮಾತ್ಮನ ಹಣೆಯಲ್ಲಿ ಕೆಂಬಣ್ಣದ ನಾಮವು ಶೋಭಿಸ್ತಾ ಇತ್ತು. ಇಂಥ ಚಲುವ ಚನ್ನಿಗನಾದ ಶ್ರೀಹರಿಯ ಮೂರ್ತಿಯನ್ನು ಆ ಸಪ್ತರ್ಷಿಗಳು, ಮನಸ್ಸಿಗೆ ತೃಪ್ತಿಯಾಗುವವರೆಗೂ ನೋಡುತ್ತಾ, ಸಕಲ ದೇವರ ದೇವನಾದ, ಅಖಿಳ ಬ್ರಹ್ಮಾಂಡಕ್ಕೆ ರಕ್ಷಕನಾದ ಸಕಲ ವೇದಗಳ ಸೃಷ್ಟಿಗೈದ, ಭಗವನ್ನಾರಾಯಣನನ್ನು, ಆ ಸಪ್ತರ್ಷಿಗಳು ಮನದಲ್ಲಿಯೇ ಧ್ಯಾನಮಾಡ್ತಾ ಇದ್ದಾರೆ.

**ಗಾನ ವಿದ್ಯಾ ನಿಪುಣ ನಾರದ । ಸೂನುಗಳ್ ಆ ಬ್ರಹ್ಮಮಾನಸ ।**
**ಸಾನು ಸನಕಾದಿಗಳು ಶ್ರೀ ಹರಿ ನಾಮಭಜಿಸುತಲೀ ॥**
**ಲೀನ ಗೊಂಡಿರೆ ಭಕ್ತಿಭಾವದಿ। ಏನು ಹೇಳುವದಾ ಮಹಾತ್ಮರ ।**
**ಗಾನ ಕಲೆಗಾ ವೈಷ್ಣವರು ತಲೆದೂಗಿ ಜಯವೆನಲೂ ॥೮॥**

ಶಬ್ದಾರ್ಥ - ನಿಪುಣ = ಪಳಗಿದವ; ಮಾನಸ ಸೂನು = ಮಾನಸಪುತ್ರ; ಸಾನುಸನಕಾದಿಗಳು = ಇವರು ಬ್ರಹ್ಮನ ಮಾನಸ ಪುತ್ರರು; ವೈಷ್ಣವರು = ವಿಷ್ಣು ಭಕ್ತರು; ಭಜಿಸು = ಆರಾಧಿಸು.

**ಭಾವಾರ್ಥ-** ಗಾಯನ ವಿದ್ಯೆಯಲ್ಲಿ ಪಳಗಿದಂಥ ನಾರದ ಮುನಿಗಳೂ. ಬ್ರಹ್ಮನ ಮಾನಸ ಪುತ್ರರಾದ ಸನಕ ಸಾನಂದಕರೂ, ಭಕ್ತಿಭಾವ ಬೆರೆತು ಶ್ರೀ ಹರಿಯ ನಾಮ ಸಂಕೀರ್ತನೆಯಲ್ಲಿ ತೊಡಗಿದ್ದರು. ಅವರ ಭಕ್ತಿ, ಹಾಗೂ ಗಾನ ಕಲೆಗಳಿಗೆ, ವಿಷ್ಣು ಭಕ್ತರೆಲ್ಲ ತಲೆದೂಗುತ್ತ ಜಯಕಾರ ಮಾಡತೊಡಗಿದರು.

ತುಂಬಿ ಹೋಯಿತು ಗಗನ ಮಂಡಲ । ಬಿಂಬಿಸಿತು ಪ್ರತಿಧ್ವನಿಯು ಸುತ್ತಲು ।
ಅಂಬು ಜಾಕ್ಷನ ನೆನಹು ಸರ್ವದಿಗಂತದಲಿ ಹರಡೀ ॥
ಕಂಭದಿಂದುದ್ಭೂತ ಜೈಜೈ । ಅಂಬರೀಷನ ಪೊರೆದವಗೆ ಜೈ ।
ಎಂಬ ಜೈಜೈ ಕಾರ ಮುನಿಗಳ ಮನವ ವ್ಯಾಪಿಸಿತೂ ॥೯॥

ಬಟ್ಟ ಕುಚ ಬಂಗಾರ ವರ್ಣದ । ಧಿಟ್ಟ ಕುಚ ದೇದೀಪ್ಯದಾ ಕುಚ।
ದಟ್ಟ ಹಾಸದ ದೇವಕನ್ನೆಯರೊಪ್ಪ ವೈಭವದೀ ॥
ಧಿಟ್ಟ ಲಕ್ಷ್ಮೀ ಸಹಿತ ಮಂಡಿತ । ವಿಠ್ಠಲಗೆ ಚಾಮರವ ಬೀಸುತ ।
ಅಟ್ಟಹಾಸವ ಗೈಯ್ಯುತಿರ್ದರು ಚಲುವಿನುಡುಗೆಯಲೀ ॥೧೦॥

ಶಬ್ದಾರ್ಥ - (೯,೧೦) ಬಟ್ಟ = ದುಂಡಗಿನ; ಕುಚ = ಮೊಲೆ; ಧಿಟ್ಟ = ಎತ್ತರದ ; ದೇದೀಪ್ಯ = ಪ್ರಕಾಶಮಾನವಾದ; ಅಟ್ಟಹಾಸ = ಸಂಭ್ರಮ; ವಿಠ್ಠಲ = ವಿಷ್ಣು; ಬಿಂಬಿಸು = ಹಬ್ಬು; ಚಾಮರ = ಬೀಸಣಿಕೆ (ಚವರಿ)

**ಭಾವಾರ್ಥ**– ಆ ಜೈ ಜೈ ಕಾರವು ಗಗನ ಮಂಡಲದಲ್ಲೆಲ್ಲ ಪ್ರಸಾರವಾಗಿ ಪ್ರತಿಧ್ವನಿಯು ಕೇಳಿಸ ತೊಡಗಿತು. ಶ್ರೀ ಹರಿಯ ಜೈಕಾರವು ಎಲ್ಲ ದಿಗಂತಗಳಲ್ಲಿ ಪ್ರಸಾರವಾಯಿತು. ''ಕಂಭದಿಂದ ಅವತಾರ ತಾಳಿದ ನರಸಿಂಹರೂಪನೇ! ನಿನಗೆ ಜಯವಾಗಲೀ!... ಅಂಬರೀಷನನ್ನು ಸಂರಕ್ಷಿಸಿದಾತನೇ ! ನಿನಗೆ ಜಯವಾಗಲೀ !!'' ಎಂಬ ಜೈಜೈ ಕಾರವು ಆ ಸಪ್ತರ್ಷಿಗಳ ಮನದಲ್ಲೆಲ್ಲ ವ್ಯಾಪಿಸಿಬಿಟ್ಟಿತು. ದುಂಡಗಿನ ಸ್ತನಗಳುಳ್ಳವರೂ, ಬಂಗಾರವರ್ಣದ ಸ್ತನಗಳುಳ್ಳ ಬೆಡಗಿಯರೂ, ಎತ್ತರದ ಕುಚಗಳುಳ್ಳ ಕಾಮಿನಿಯರೂ. ಪ್ರಕಾಶ ಮಾನವಾದ ಸ್ತನಗಳುಳ್ಳ ದೇವಕನ್ನೆಯರೂ, ದಿಟ್ಟ ಲಕ್ಷ್ಮೀ ಸಹಿತವಾಗಿ ವಿರಾಜ ಮಾನನಾಗಿದ್ದಂಥಾ ಶ್ರೀ ಹರಿ ವಿಠ್ಠಲನಿಗೆ, ನಾನಾ ಬಗೆಯ ಸೀರೆಗಳನ್ನುಟ್ಟು ವೈಭವ ಸಂಭ್ರಮಗಳಿಂದ ಚಾಮರಗಳನ್ನು ಬೀಸ್ತಾ ಇದ್ದರು.

ಮುಗಿದು ಕರಗಳ ಹರ್ಷಭಾಷ್ಪದಿ । ಬಿಗಿದ ಕಂಠದಿ ಮುಂದೆ ಸಾಗುತ।
ಲಗುಬಗೆಯಲೆರಗಿದರು ಸಾಷ್ಟಾಂಗದಲಿ ಮುನಿ ನಿಕರಾ ॥
ಖಗಗಮನ ಗೋವಿಂದ ಗೊಂದಿಸಿ । ಬಗೆಬಗೆಯ ಸ್ತೋತ್ರವನು ಗೈಯ್ಯುತ ।
ಮಿಗಿಲು ಮಟ್ಟದ ಲ್ವರ್ಣಿಸಿದರಾ ಆದಿ ಕೇಶವನ ॥೧೧॥

ಶಬ್ದಾರ್ಥ - ಹರ್ಷಭಾಷ್ಪ = ಆನಂದಾಶ್ರ; ಸಾಷ್ಟಾಂಗದಲಿ = ದಂಡವತ್ ನಮನ ; ಖಗ ಗಮನ = ಗರುಡವಾಹನನಾದ ವಿಷ್ಣು;
ಮಿಗಿಲುಮಟ್ಟ = ಮೇಲ್ಮಟ್ಟ ; ಸ್ತೋತ್ರ = ಸ್ತುತಿ; ಲಗುಬಗೆ = ಅವಸರದಿಂದ.

**ಭಾವಾರ್ಥ** - ಸಪ್ತರ್ಷಿಗಳು ಕೈ ಮುಗಿದುಕೊಂಡು, ಬಿಗಿದ ಕಂಠದಿಂದ, ಆನಂದಾ ಶ್ರುಗಳನ್ನುದುರಿಸುತ್ತ, ಅವಸರದಿಂದ ಮುಂದೆ ಬಂದು ಗರುಡವಾಹನನಾದ ಆ ಶ್ರೀಮನ್ನಾರಾಯಣನ ಪಾದ ಕಮಲಗಳಿಗೆ, ದೀರ್ಘದಂಡ ನಮಸ್ಕಾರ ಮಾಡಿ, ಮತ್ತೆ ಮೇಲಕ್ಕೆದ್ದು ಕರಜೋಡಿಸಿ ಆ ಆದಿಕೇಶವನನ್ನು ಬಗೆ ಬಗೆಯಿಂದಾ ಸ್ತೋತ್ರ ಮಾಡ್ತಾ ಇದ್ದಾರೆ.

ಆದಿ ಪುರುಷನೆ ಅಂತ್ಯ ರಹಿತನೆ । ಮೋದ ಮಂದಸ್ಮಿತ ಸುಶೋಭಿತ ।
ವೇದ ನುತನತ ಚಾರು ಚರಣನೆ ನಿನಗೆ ವಂದನೆಯೂ ॥
ಪಾದ ಪಂಕಜ ಕುಂದ ಮಂದರ । ಸ್ವೇದ ತುಲಸೀ ದಲ ಸುಪೂಜಿತ ।
ಮೋದ ಮೂರುತಿ ಭಕ್ತ ವತ್ಸಲ ನಿನಗೆ ವಂದನೆಯೂ ॥ ೧೨ ॥

**ಮೋದದಿಂದೀ ಧರೆಯ ರಕ್ಷಿಸಿ। ಆದಿ ಕೇಶವನೆನಿಸಿದಾತನೆ।**
**ಬಾಧೆಗೊಳಗಾಗಿರ್ದ ಗಜಪತಿ ರಕ್ಷೆಗೈದವನೇ ॥**
**ಆದಿ ಮಧ್ಯಾಂತಗಳ ಮೀರಿದ । ವೇದ ಶ್ರುತಿಗಳಿ ಗೊಕ್ಕು ಮಿಕ್ಕಿದ ।**
**ನಾದ ಭಕ್ತಿ ಪ್ರೇಮ ಪ್ರಿಯ ಹರಿ ನಿನಗೆ ವಂದನೆಯೂ ॥೧೩॥**

**ಶಬ್ದಾರ್ಥ** - ಆದಿಪುರುಷ = ಜಗತ್ತಿಗೆ ಮೊದಲಿನವ; ಅಂತ್ಯರಹಿತ = ಕೊನೆ ಇಲ್ಲದವ ; ಮೋದ ಮಂದಸ್ಮಿತ ಸುಶೋಭಿತೆ = ಮುಗುಳ್ನಗೆಯಿಂದ ಪರಿಶೋಭಿತನಾದವನು; ಪಂಕಜ = ಕಮಲ; ಕುಂದ = ಒಂದುಜಾತಿಯಪುಷ್ಪ; ಮಂದರ = ಮಂದಾರ ಪುಷ್ಪ ; ಸ್ವೇದ ತುಲಸಿದಲ = ಬಿಳೀ ತುಳಸಿಯದಳ; ಸುಪೂಜಿತ = ಪೂಜೆಗೊಂಡವ; ಮೋದ = ಸಂತೋಷ; ಒಕ್ಕು ಮಿಕ್ಕಿದ = ತುಂಬಿ ಹೆಚ್ಚಾದ; ಹರಿ = ವಿಷ್ಣು.

**ಭಾವಾರ್ಥ**- (೧೨,೧೩) ಮೂಲಪುರುಷನೇ,! ಅಂತ್ಯ ಎಲ್ಲದವನೇ,! ಸದಾ ಮಂದಹಾಸ ಮುಖದಿಂದೊಡಗೂಡಿದವನೇ! ವೇದಗಳಿಂದ ವಂದಿತನಾದವನೇ,! ಸುಂದರ ಪಾದಗಳುಳ್ಳ ಭಗವಂತನೇ! ನಿನಗೆ ವಂದನೆಯು!... ಕುಂದ ಮಂದಾರ ಪುಷ್ಪ, ತುಲಸೀ ದಳಗಳಿಂದ ಪೂಜಿಸಲ್ಪಟ್ಟ ಪಾದಗಳುಳ್ಳವನೇ, ಆಹ್ಲಾದ ದಾಯಕನೇ, ಭಕ್ತ ವತ್ಸಲನೇ, ನಿನಗೆ ವಂದನೆಯು ! ಅಂತಃಕರುಣೆಯಿಂದ ಈ ಜಗತ್ತನ್ನು ರಕ್ಷಿಸಿ ಆದಿ ಕೇಶವನೆಂದು ಹೆಸರು ಪಡೆದ ಭಗವಂತನೇ, ಮೊಸಳೆಯ ಬಾಯಿಂದ ಗಜ ರಾಜನನ್ನು ರಕ್ಷಿಸಿದವನೇ, ಆದಿಮಧ್ಯ ಅಂತ್ಯಗಳನ್ನು ಮೀರಿ ನಿಂದವನೇ, ವೇದ ಶ್ರುತಿ ಶಾಸ್ತ್ರಗಳಿಗೆ ನಿಲುಕದವನೇ, ನಾದ, ಭಕ್ತಿ, ಪ್ರೇಮಗಳಿಗೆ ಪ್ರಿಯನಾದಂಥ ಶ್ರೀ ಹರಿಯೇ! ನಿನಗೆ ವಂದನೆಯು!...

**ಆದಿಯಲಿ ಮತ್ಸ್ಯಾಗಿ ಮನುಕುಲ । ಮೇದಿನಿಯ ರಕ್ಷಿಸಿದ ಕೂರ್ಮನೆ।**
**ವೇದಗಳ್ಳನ ಕೊಲ್ಲಲೋಸುಗ ವರಹನಾದವನೇ ॥**
**ಸಾಧು ಪ್ರಹ್ಲಾದನಿಗೆ ಕಂಭದಿ । ಕಾದು ರಕ್ಷಣೆ ನೀಡಿದವನೇ।**
**ಪಾದ ಮೂರಲಿ ವಿಶ್ವವಳೆಯುತ ಬಲಿಯ ಗೆದ್ದವನೇ ॥೧೪॥**

**ಕಾದು ಕೊಂದಿಯೋ ಕ್ಷತ್ರಿಯಾಧಮ । ನಾದ ಕಾರ್ತ್ಯಾರ್ಜುನನ ಭಾರ್ಗವ।**
**ವಾದ ಬೆಳಿಸದೆ ಕಾಡ ಸೇರಿದೆ ರಾವಣನ ಕೊಂದೇ ॥**
**ಮೋದದಿಂ ಶ್ರೀ ಕೃಷ್ಣನಾಗುತ । ಬೋಧಿಸಿದಿ ಗೀತೆಯನು ಪಾರ್ಥಗೆ ।**
**ಬೋಧಿವೃಕ್ಷದ ಕೆಳಗೆ ಕುಳಿತೆಯೋ ಬುದ್ಧನಾಗುತಲೀ ॥೧೫॥**

**ಸಾಧು ಸಜ್ಜನರನ್ನು ಪೀಡಿಪ । ವೇದ ಘಾತುಕರನ್ನು ಖಡ್ಗದಿ ।**
**ನಾದಿ ಕಲ್ಕ್ಯಾಗುತ್ತ ಹತ್ತವತಾರ ಮೆರೆದವನೇ ॥**
**ಬಾಧೆಗೊಂಡೆವು ದೈತ್ಯರಿಂದಲಿ । ಭಾಧೆ ತಪ್ಪಿಸು ಎಂದು ನುತಿಸುತ।**
**ಪಾದ ಕಮಲಕ್ಕಡ್ಡಬಿದ್ದರು ಸಪ್ತಯೋಗಿಗಳೂ ॥೧೬॥**

ಶಬ್ದಾರ್ಥ - ಮತ್ಸ್ಯ=ಮೀನು; (ವಿಷ್ಣುವಿನ ಮೊದಲನೆ ಅವತಾರ) ಕೂರ್ಮ = ಆಮೆ; (ವಿಷ್ಣುವಿನ ೨ನೇ ಅವತಾರ) ವೇದಗಳ್ಳ = ವೇದ ಕದ್ದದೈತ್ಯ ವರಹ = ಮಿಕ (ಕಾಡುಹಂದಿ) (ವಿಷ್ಣುವಿನ ಮೂರನೇ ಅವತಾರ) ಸಾಧು = ಸಾತ್ವಿಕ ; ಕಾದು = ಯುದ್ಧಮಾಡಿ; ಭಾರ್ಗವ = ಪರಶುರಾಮ; ನಾದಿ = ಹೊಡೆದು; ಕಲ್ಕ್ಯಾಗುತ್ತ = ಕಲ್ಕಿಯಾಗಿ.

ಭಾವಾರ್ಥ - (೧೫,೧೬) ಕವಿಯು ವಿಷ್ಣುವಿನ ದಶಾವತಾರದ ಲೀಲೆಗಳನ್ನು ಈ ನುಡಿಗಳಲ್ಲಿ ಸುಂದರವಾಗಿ ಹೆಣೆದಿದ್ದಾನೆ. ಶ್ರೀಮನ್ ನಾರಾಯಣನೇ! ಆದಿಯಲ್ಲಿ ನೀನು ಮತ್ಸ್ಯರೂಪ ಧಾರಣೆ ಮಾಡಿಕೊಂಡು, ಮನು ಕುಲವನ್ನು ರಕ್ಷಸಿದಿ; ನಂತರ ಕೂರ್ಮಾವತಾರ ತಾಳಿ, ಭೂಮಿಯನ್ನು ರಕ್ಷಿಸಿದಿ! ವೇದಗಳನ್ನು ಕದ್ದ ರಾಕ್ಷಸನ ಸಂಹಾರ ಮಾಡುವದಕ್ಕಾಗಿ ನೀನು ವರಹಾವತಾರ ತಾಳಬೇಕಾಯಿತು. ಸಾತ್ವಿಕ ಜೀವಿಯಾದ ಪ್ರಹ್ಲಾದನನ್ನು ಆತನ ತಂದೆಯಾದ ಹಿರಣ್ಯ ಕಶ್ಯಪನಿಂದ, ಸಂರಕ್ಷಸುವದಕ್ಕಾಗಿ, ನೀನು ಕಂಭದಲ್ಲಿ ಕಾಯ್ದು ಕುಳಿತು, ನರಸಿಂಹಾವತಾರ ತಾಳಿ, ಹಿರಣ್ಯಕಶ್ಯಪನನ್ನು

ಸಂಹರಿಸಬೇಕಾಯಿತು, ಬಲಿಚಕ್ರವರ್ತಿಯ ಗರ್ವವನ್ನು ಭಂಗಿಸುವದಕ್ಕಾಗಿ, ನೀನು ಬ್ರಾಹ್ಮಣ ವಟುವಾಗಿ ಅವತರಿಸಿ, ಮೂರೇ ಮೂರು ಪಾದಗಳಿಂದ ಇಡೀ ವಿಶ್ವವನ್ನೇ ಅಳೆದು , ಅವನನ್ನು ಪಾತಾಳ ಲೋಕಕ್ಕೊತ್ತಿ ಅವನ ಗರ್ವ ಭಂಗಿಸಿದಿ!.. ಕ್ಷತ್ರಿಯಾಧಮನಾದಂಥಾ ಕಾರ್ತವೀರ್ಯಾರ್ಜುನನನ್ನು, ಬ್ರಾಹ್ಮಣ ಕುಮಾರ ಪರಶುರಾಮನಾಗಿ, ಯುದ್ಧದಲ್ಲಿ ಹೋರಾಡಿ ಕೊಂದಿ !... ತಂದೆಯ ಆಜ್ಞೆ ಪಾಲಿಸುವದಕ್ಕಾಗಿ ವಾದ ಬೆಳಿಸದೇ ವನವಾಸ ಕೈಕೊಂಡು ರಾವಣನನ್ನು ಸಂಹಾರ ಮಾಡಿದಿ!.. ಕೃಷ್ಣಾವತಾರದಲ್ಲಿ, ಪಾರ್ಥನಿಗೆ ರಮ್ಯವೂ ಪರಮ ಪಾವನವೂ ಆದಂಥಾ ಭಗವದ್ಗೀತೆಯನ್ನು ಬೋಧಿಸಿದಿ!.. ಬೌದ್ಧಾವತಾರದಲ್ಲಿ ಬುದ್ಧನಾಗಿ ಬೋಧೀ ವೃಕ್ಷದ ಕೆಳಗೆ ಕುಳಿತು, ಜನರಿಗೆ ಧರ್ಮೋಪದೇಶ ಮಾಡಿದಿ!.. ಮತ್ತೂ ಸಾಧು ಸಜ್ಜನರನ್ನು ಪೀಡಿಸುವ ವೇದ ಘಾತುಕ ವ್ಯಕ್ತಿಗಳನ್ನು, ಕುದುರೆಯ ಮೇಲೆ ಕುಳಿತು ಖಡ್ಗ ದಿಂದ ಅವರ ರುಂಡ ಸವರಿ ನಿರ್ನಾಮ ಮಾಡಿದಿ! ಈ ಪ್ರಕಾರ ನಿನ್ನ ಹತ್ತು ಅವತಾರಗಳನ್ನು ಮೆರೆಸಿದ ಮಹಾ ಮಹಿಮನೇ! ನಾವು ದುಷ್ಟ ದೈತ್ಯರಿಂದ ನೊಂದು ಕೊಂಡಿದ್ದೇವೆ. ದಯವಿಟ್ಟು ನಮ್ಮ ಈ ಗೋಳನ್ನು ತಪ್ಪಿಸು'' ಎಂಬುದಾಗಿ ಪ್ರಾರ್ಥಿಸುತ್ತಾ, ಆ ಸಪ್ತರ್ಷಿಗಳು, ಭಗವನ್ನಾರಾಯಣನ ಪಾದ ಕಮಲಗಳ ಮೇಲೆ ಅಡ್ಡ ಬಿದ್ದರು.

**ಭರದೊಳಪ್ಪಿದ ಭಕ್ತವತ್ಸಲ। ಕರೆದು ಸಪ್ತರ್ಷಿಗಳ ಪ್ರೇಮದಿ।**
**ಉರದಿ ತಾಯ್ಗರುವಪ್ಪುವಂದದಿ ಸ್ನೇಹ ಸೂಸುತ್ತಾ ॥**
**ಕರುಣೆ ಗೊಂಡೆನು ನಿಮ್ಮ ಸ್ತೋತ್ರದಿ । ಮೆರೆದ ಸದ್ಭಾವಕ್ಕೆ ಮೆಚ್ಚಿದೆ ।**
**ಅರಿತಿರುವೆ ನಿಮ್ಮಳಲ ನೆನ್ನಯ ಜ್ಞಾನ ದೃಷ್ಟಿಯಲೀ ।೧೭॥**

ಶಬ್ದಾರ್ಥ- ಭರ = ರಭಸ; ತಾಯ್ಗರು ವಪ್ಪುವಂದದಿ = ತಾಯಿ ಆಕಳು ಕರುವನ್ನಪ್ಪಿದಂತೆ; ಸದ್ಭಾವ = ಒಳ್ಳೇ ಭಾವ; ಅಳಲು = ಗೋಳು.

**ಭಾವಾರ್ಥ** - ಭಕ್ತ ವತ್ಸಲನಾದ ಶ್ರೀ ಹರಿಯು ಆಸಪ್ತರ್ಷಿಗಳನ್ನು ಸಮೀಪಕ್ಕೆ ಕರೆದು ಪ್ರೀತಿಯಿಂದ ಅಪ್ಪಿಕೊಂಡನು. ಆ ದೃಶ್ಯವು ತಾಯಿ ಆಕಳು, ಕರುಗಳನ್ನು ಹೇಗೆ ವಾತ್ಸಲ್ಯ ಭರಿತವಾಗಿ ಪ್ರೀತಿಸಿ, ಮೈ ದಡವುತ್ತಿದೆಯೋ ಹಾಗೆ ಕಾಣ್ತಾ ಇತ್ತೂಽ'' ಅಂತಾ ಕವಿ, ವರ್ಣನೆ ಮಾಡಿ ಹೇಳ್ತಾ ಇದ್ದಾನೆ. ಮತ್ತೂ ಭಗವಂತನು ಆ ಮುನಿಗಳಿಗೆ ಹೀಗೆ ಹೇಳ್ತಾನಲ್ಲಾ; ''ಅಯ್ಯಾಽ!... ನಿಮ್ಮ ಸದ್ಭಾವ ಸೂಸುವಂಥಾ ವರ್ಣನೆಯನ್ನು ಕೇಳಿ, ನಾನು ಮೆಚ್ಚಿ ಕೊಂಡಿದ್ದೇನೆ. ಅಲ್ಲದೇ ನಿಮ್ಮ ಮನದ ದುಃಖ ಏನೂಽ ಅನ್ನೋದು, ನನಗೆ ಈ ಮೊದಲೇ ನನ್ನ ಜ್ಞಾನ ದೃಷ್ಟಿಯಿಂದಾ ಅರ್ಥವಾಗಿದೆ.

**ಬೊಮ್ಮನಾ ವರ ಮದದಿ ಕೊಬ್ಬುತ । ನಿಮ್ಮನಳಸಿದ ಮಣಿಕ ಮಲ್ಲರ ।**
**ಸೊಮ್ಮನಡಗಿಸಲೆಂದೆ ಶಿವ ಮಾರ್ತಂಡನಾಗುವನೂ ॥**
**ಸುಮ್ಮನೇ ನನ್ನೊಡನೆ ಬನ್ನಿರಿ । ರಮ್ಯದಾ ಕೈಲಾಸಮಂದಿರ ।**
**ಕೊಮ್ಮೆ ಪೋಗುವದೆಂದು ಹೊರಟನು ಸಪ್ತ ಮುನಿ ಸಹಿತಾ ॥೧೮॥**

ಶಬ್ದಾರ್ಥ - ಮದ = ಸೊಕ್ಕು; ನಿಮ್ಮನಳಸಿದ = ನಿಮಗೆ ನೋವಿತ್ತ; ಸೊಮ್ಮು = ಅಹಂಕಾರ ರಮ್ಯ = ಸುಂದರವಾದ.

**ಭಾವಾರ್ಥ -** ಬ್ರಹ್ಮನ ವರದ ಪ್ರಭಾವದಿಂದಾಗಿ ಸೊಕ್ಕಿಗೆ ಬಂದಿರುವ, ಹಾಗೂ ನಿಮ್ಮನ್ನು ಗೋಳಾಡಿಸಿರುವ ಮಣಿಕಾಸುರ, ಮಲ್ಲಾಸುರರೆಂಬ ಕ್ರೂರ ದೈತ್ಯರನ್ನು ಕೊಲ್ಲುವದಕ್ಕಾಗಿಯೇ, ಶಿವನು ಮಾರ್ತಂಡ ಭೈರವನಾಗಿ ಅವತಾರ ಮಾಡುತ್ತಾನೆ. ಅದಕ್ಕಾಗಿ ನಾವೀಗ ಕೈಲಾಸಕ್ಕೆ ಹೋಗಿ ಶಿವನನ್ನು ಭೆಟ್ಟಿಯಾಗೋಣ. ಸುಮ್ಮನೇ ನನ್ನೊಂದಿಗೆ ಬನ್ನಿರಿ! ಎನ್ನುತ್ತಾ ಶ್ರೀ ಮನ್ನಾರಾಯಣನು ಆ ಸಪ್ತರ್ಷಿಗಳ ಸಮೇತನಾಗಿ, ಕೈಲಾಸಕ್ಕೆ ಹೊರಟನು.

ಇತಿ, ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್ ಜೋಶಿ ವಿರಚಿತ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್
ವೈಕುಂಠದರ್ಶನ ನಾಮಕ ಪಂಚಮೋಧ್ಯಾಯಃ ॥

ಅಂತು ಅಧ್ಯಾಯ ೫ ಕ್ಕಂ, ಪದ ೧೮ಕ್ಕಂ, ಒಟ್ಟು ಪದ ೯೩ ಕ್ಕಂ, ಮಂಗಲಮಸ್ತು.

ಏಳುಕೋಟಿಗ! ಏಳುಕೋಟಿಗ !! ಏಳುಕೋಟಿಗೋ!!!... ಸಾಂಗಬಲೋ!!



# ಅಧ್ಯಾಯ ೬ ಅಥ ಷಷ್ಟೋಽಧ್ಯಾಯಃ (ಹಿಮಗಿರಿ ವರ್ಣನ)

- ಸೂಚನೆ -

ತಡವ ಮಾಡದೆ ಹೊರಟ ಭೂಸುರ । ರೊಡನೆ ಬೆಳ್ಳಿಯ ಬೆಟ್ಟ ಕಾಣಲು ।
ಮೃಡನ ಸಖ ತೋರಿದನು ಅಲ್ಲಿಯ ಸಕಲ ಸೌಂದರ್ಯಾ ॥



**ಭಾವಾರ್ಥ -** ಶಿವನ ಸ್ನೇಹಿತನಾದಂಥಾ ನಾರಾಯಣನು, ಆ ಸಪ್ತರ್ಷಿಗಳನ್ನು ಸಂಗಡ ಕರೆದುಕೊಂಡು ತಡ ಮಾಡದೇ ಶಿವನನ್ನು ಕಾಣುವದಕ್ಕಾಗಿ ರಜತ ಗಿರಿಗೆ ಬರ್ತಾ ಇದ್ದಾನೆ, ಮತ್ತೂ ಮಾರ್ಗಮಧ್ಯದಲ್ಲಿ ಆ ಬೆಳ್ಳಿಯ ಬೆಟ್ಟದ ಸಕಲ ಸೌಂದರ್ಯವನ್ನೂ, ಅಲ್ಲಿಯ ಆಹ್ಲಾದ ದಾಯಕ ನಿಸರ್ಗವನ್ನೂ, ಆ ಋಷಿಗಳಿಗೆ ತೋರಸ್ತಾ ಇದ್ದಾನೆ "ಎಂಬಂಥಾ ವಿಷಯವು, ಇನ್ನು ಮುಂದಿನ ಕಥಾನಕದಲ್ಲಿ ಬರ್ತಾ ಇದೆ" ಎಂಬುದನ್ನು ಸೂಚಿಸಿ, ಕವಿಯು ಪುರಾಣವನ್ನು ಮುಂದುವರಿಸ್ತಾ ಇದ್ದಾನೆ.

**ಮಂದ ಹೆಜ್ಜೆಯ ನಿಡುತ ಬರುತಿಹ । ನೊಂದ ಮುನಿಗಳ ನಂದವಾಕ್ಯಗ ।**
**ಳಿಂದ ಮುದಗೊಳಿಸುತ್ತ ಶ್ರೀಹರಿ ಮುಂದುವರಿಯುತ್ತಾ ॥**
**ಬಂದು ತಲುಪಿದ ರಜತ ಗಿರಿಗಾ । ನಂದದಾಯಕ ಗಿರಿಯ ಕಾಣುತೆ ।**
**ನಿಂದು ಸಾಷ್ಟಾಂಗದಲಿ ನಮಿಸಿದರಯ್ಯ ಮುನಿವರರೂ ॥೧॥**

**ಭಾವಾರ್ಥ -** ನೋವನ್ನುಂಡು ತಲ್ಲಣಗೊಂಡು ಮಂದ ಹೆಜ್ಜೆಗಳಿಂದ ಬರುತ್ತಿರುವಂಥಾ ಆ ಸಪ್ತರ್ಷಿಗಳನ್ನು ಶ್ರೀಹರಿಯ, ಆನಂದ ಭರಿತವಾದ ಮಾತುಗಳನ್ನಾಡಿಸಿ ಸಂತೋಷಗೊಳಿಸುತ್ತಾ ಮುಂದುವರಿಯುತ್ತಾ ಇದ್ದಾನೆ. ಸ್ವಲ್ಪ ಹೊತ್ತು ತಟಸ್ಥರಾಗಿ ನಿಲ್ತಾರೆ!.. ಆ ಗಿರಿ ರಾಜನನ್ನು ಕಂಡು, ಭಾವೋದ್ವೇಗ ಉಕ್ಕಿ ಬರ್ತಾ ಇದೆ ಸಪ್ತರ್ಷಿಗಳೂ ಆನಂದ ಭರಿತಾರಾಗಿ, ಆ ಗಿರಿರಾಜನಿಗೆ ಸಾಷ್ಟಾಂಗ ನಮಸ್ಕಾರ ಮಾಡ್ತಾ ಇದ್ದಾರೆ.

**ಚಂದ್ರಕಾಂತದ ಬಂಡೆ ರಾಶಿಯೊ। ಚಂದ್ರನೀ ನಿಳೆಗಿಳಿದು ನಿಂದನೊ।**
**ಅಂದದಮೃತ ಬಿಂದು ರಜತದೊಳೆದ್ದೆ ನಿಲಿಸಿಹರೋ ॥**
**ಮಂದಕ್ಷೀರ ಪ್ರಕಾಶದಿಂದತಿ । ನಂದ ವೀಯುವ ಶುಭ್ರತೇಜೋ ।**
**ವೃಂದ ವೇನಿದು ಎನುತ ನಲಿದರು ಸಪ್ತಯೋಗಿಗಳೂ ॥೨॥**

ಸುತ್ತ ಮುತ್ತಲು ಮತ್ತಿ ತೇಗಿನ । ಎತ್ತರೆತ್ತರ ಪೂಗಿ ತೆಂಗಿನ।
ಉತ್ತಮೌಷಧ ಗಂಧ ಶ್ರೀ ರುದ್ರಾಕ್ಷಿ ವೃಕ್ಷಗಳು ॥
ಮುತ್ತಿ ಮೆರೆಯುವ ಬನ್ನಿ ಬಿಲ್ವದ । ಎತ್ತರಾಲಾಶ್ವತ್ಥ ಚಂಪಕ ।
ದೆತ್ತರೆತ್ತರ ಮರಗಳಿದ್ದವು ರಜತ ಗಿರಿಗೊ್ಬಂದೀ ।೩॥

ಸೂಜಿ ಮಲ್ಲಿಗೆ ಬಕುಳ ಸಂಪಿಗೆ । ಜಾಜಿ ಪುನ್ನಗ ಹೊನ್ನದಾವರೆ ।
ಮೋಜು ಮೋಜಿನ ಬಣ್ಣದಳೆದಾ ಕುಸುಮ ಸಸ್ಯಗಳೂ ॥
ಗೋಜು ಗೊಡವೆಯ ನೆಣಿಸಲಾರದೆ । ಮೋಜಿನಿಂ ಬೆಳೆದಿರ್ದವೆಲ್ಲಡೆ ।
ಪೂಜೆಗೊಂಡಿದೆಯೇನೊ ಈ ಗಿರಿ ಎನುವ ತೆರದೊಳಗೆ ।೪॥

ಶಬ್ದಾರ್ಥ - ಬಂಡೆ = ಕಲ್ಲು; ಇಳೆ = ಭೂಮಿ; ನಿಂದನೋ = ನಿಂತನೋ; ರಜತ = ಬೆಳ್ಳಿ; ನಿಲಿಸಿಹರೋ = ನಿಲ್ಲಿಸಿರುವರೋ; ಮಂದಕ್ಷೀರ = ಗಟ್ಟಿಯಾದ ಹಾಲು; ನಂದ = ಸಂತೋಷ; ಶುಭ್ರ = ಬಿಳಿ; ತೇಜೋವೃಂದ = ತೇಜಸ್ಸಿನರಾಶಿ; ನಲಿ = ಸಂತಸಪಡು; ಪೂಗಿ = ಅಡಿಕೆ; ಅಶ್ವತ್ಥ = ಅರಳೀಮರ; ಚಂಪಕ = ಸಂಪಿಗೆ; ರಜತಗಿರಿ = ಬೆಳ್ಳೀಬೆಟ್ಟ; (ಕೈಲಾಸ) ಸಸ್ಯ = ಗಿಡ ; ಮೋಜುಮೋಜಿನ ಬಣ್ಣದಳೆದಾ = ನಾನಾತರದ ಬಣ್ಣ; ಆಕಾರಗಳಿಂದೊಡಗೂಡಿದ.

**ಭಾವಾರ್ಥ** - (೨,೩,೪) ಮುನಿಗಳು ಆ ರಜತಗಿರಿಯನ್ನು ನೋಡ್ತಾರೆ ! ಅವರಿಗೆ ತುಂಬಾ ಆಶ್ಚರ್ಯವೆನಿಸ್ತಾ ಇದೆ! ಈ ಪರ್ವತವು ಚಂದ್ರಕಾಂತ ಶಿಲೆಗಳಿಂದ ನಿರ್ಮಾಣವಾದದ್ದಕ್ಕೋಸ್ಕರ ಇಷ್ಟೊಂದು ಶುಭ್ರವಾಗಿದೆಯೋ? ಅಥವಾ ಪೌರ್ಣಮೆಯ ಚಂದ್ರನೇ ಪರ್ವತ ರೂಪ ಧರಿಸಿ, ಇಲ್ಲಿ ಇಳಿದು ನಿಂತಿರುವನೋ?.... ಅಥವಾ ಅಮೃತ ಬಿಂದುಗಳಲ್ಲಿ ಬೆಳ್ಳಿಯನ್ನೆದ್ದಿ ನಿಲ್ಲಿಸಿದ್ದಕ್ಕಾಗಿ ಈ ಪರ್ವತ ಇಷ್ಟೊಂದು ಶುಭ್ರವಾಗಿದೆಯೋ,? ಮಂದವಾದ ಹಾಲಿನ ಬಣ್ಣದಂತೆ , ಶುಭ್ರವಾಗಿ ಪ್ರಕಾಶಿಸುತ್ತಿರುವ ಆ ತೇಜಃಪುಂಜವಾದ ಗಿರಿಯನ್ನು ನೋಡಿ, ಆ ಮುನಿಗಣಕ್ಕೆ ಅತ್ಯಾನಂದವಾಗ್ತಾ ಇದೆ.

ಆ ಹಿಮಗಿರಿಯ ಸುತ್ತ ಮುತ್ತಲೆಲ್ಲ ತೇಗು, ಮತ್ತಿ, ಹೊನ್ನೆ, ಶ್ರೀಗಂಧ ಮುಂತಾದ ಕಾಡುವೃಕ್ಷಗಳೂ, ಎತ್ತರವಾದ ತೆಂಗಿನ ಹಾಗೂ ಅಡಿಕೆಯ ಗಿಡಗಳೂ, ಔಷಧಿಯ ಸಸ್ಯಗಳೂ, ರುದ್ರಾಕ್ಷಿಯ ಮರಗಳೂ, ಬನ್ನೀಗಿಡ, ಬಿಲ್ವಪತ್ರಿಯ ಗಿಡ, ಎತ್ತರವಾದ ಆಲ, ಅರಳೀಮರಗಳು, ರಜತಗಿರಿಯ ಸೌಂದರ್ಯಕ್ಕೆ ಅಲಂಕಾರಕವಾಗಿ ಹಸಿರು ಸೀರೆಯನ್ನು ಡಿಸಿದಂತೆ ಗೋಚರಿಸ್ತಾ ಇತ್ತು.

ಸೂಜಿ ಮಲ್ಲಿಗೆ, ಬಕುಳ, ಸಂಪಿಗೆ, ಸೇವಂತಿಗೆ, ಜಾಜಿ, ಪುನ್ನಾಗ, ಹೊಂದಾವರೆಯ ವಿಚಿತ್ರ ವಿಚಿತ್ರವಾದ ಬಣ್ಣ ಬೆಡಗುಗಳಿಂದ ಅರಳಿದ ಕುಸುಮ ಸಸ್ಯಗಳು, ''ಯಾರ ಹಂಗುನಮಗೇನು?'' ಎಂಬ ಭಾವನೆಯಿಂದ ಬೆಟ್ಟದ ಸುತ್ತಲೂ ಬೆಳೆದು ಅರಳಿ ನಿಂತಿದ್ದವಾದ್ದರಿಂದ, ತರತರದ ಹೂವುಗಳಿಂದ ಈ ರಜತಗಿರಿಯನ್ನೇ ಪೂಜಿಸಿದ್ದಾರೋ ಏನೋ ಎಂಬಂತೆ, ಕಂಗೊಳಿಸ್ತಾ ಇತ್ತೂ್ತ'' ಅಂತಾ ಕವಿ ವರ್ಣನೇ ಮಾಡ್ತಾ ಇದ್ದಾನೆ.

**ಮದ ಗಜಂಗಳು ಭ್ರಮಿಸಿ ದಿಬ್ಬದಿ। ಉದಿತ ಪ್ರತಿ ಬಿಂಬವನು ನೋಡುತೆ ।**
**ಎದುರಿಗಿನ್ನೊಂದಾನೆ ಬಂದಿದೆ ಎಂದು ಭಾವಿಸುತಾ ॥**
**ಹದನಗೋರೆಯಲೊತ್ತಿ ದಣಿಯುತ। ಕದನ ವ್ಯರ್ಥಾಲಾಪ ಗೈಯ್ಯುತ ।**
**ಮದವು ತೀರಿದ ಮೇಲೆ ಸುಮ್ಮನೆ ಮತ್ತೆ ಮರಳುವವು ।೫॥**

ಶಬ್ದಾರ್ಥ- ಗಜಂಗಳು = ಆನೆಗಳು; ದಿಬ್ಬದಿ=ದಿಬ್ಬದಲ್ಲಿ; ಹದನಗೋರೆ = ಚೂಪಾದ ಕೋರೆ; ಕದನ = ಜಗಳ; ವ್ಯರ್ಥಾಲಾಪ=ಸುಮ್ಮಸುಮ್ಮನೇ ಗೋಳಾಡುವದು; ಮದ = ಕೊಬ್ಬು; ಮರಳು = ತಿರುಗು.

**ಭಾವಾರ್ಥ-** ಆ ಹಿಮಗಿರಿಯ ಬೆಟ್ಟದಲ್ಲಿಯ ಮದ್ದಾನೆಗಳು, ಎದುರಿಗಿನ ದಿಬ್ಬಗಳಲ್ಲಿ ಕಾಣುತ್ತಿರುವಂಥಾ ತಮ್ಮ ಪ್ರತಿಬಿಂಬವನ್ನು ನೋಡಿ, "ಎದುರಿಗೆ ಇನ್ನೊಂದು ಮದ್ದಾನೆ ಬಂದಿದೆ" ಎಂಬ ತಪ್ಪು ತಿಳುವಳಿಕೆಯಿಂದ, ಆ ಪರ್ವತದ ಬೆಳ್ಳಗಿನ ಶಿಖರಗಳನ್ನು, ಹದನವಾದ ಕೊರೆಗಳಿಂದ ಚುಚ್ಚಿ ಚುಚ್ಚಿ ಇರಿಯುತ್ತಿದ್ದವು . ವ್ಯರ್ಥವಾಗಿ ಹೋರಾಡಿ ಆಲಾಪಮಾಡಿ, ತಮ್ಮ ಮದವು ತೀರಿದ ಮೇಲೆ, ಮತ್ತೆ ಸುಮ್ಮನೇ ತಮ್ಮ ಹಿಂಡಿನೊಳಗೆ ಹೋಗಿ ಸೇರಿಕೊಳ್ಳುತ್ತಿದ್ದವು.

**ಫಲಿತ ಪಲಸುಗಳೆಲ್ಲ ಮೆರೆದವು । ಲಲಿತೆ ಕಾಮಕ್ರೀಡೆ ಸಮಯದಿ।**
**ಮಲೆತ ಕುಚಗಳ ಚಾಚಿ ಇನಿಯನ ತಬ್ಬುತಿರುವಂತೇ॥**
**ಕಲೆಸಿ ಕಣ್ಣಿನ ನೋಟ ಜಿಂಕೆಗು । ಒಲಿಯದೆಂಡ್ಹಾರೈಸಿ ಕನ್ನಡಿ।**
**ಯೊಳಗೆ ಬಿಂಬವ ನೋಡಿಕೊಳುವರು ದೇವಲಲನೆಯರೂ ॥೬॥**

**ಶಬ್ದಾರ್ಥ-** ಫಲಿತ = ಹಣ್ಣುಗಳಿಂದ ತುಂಬಿದ; ಪಲಸು = ಹಲಸು; ಮೆರೆ = ತೋರು; ಲಲಿತೆ = ಗೌರಿ (ಪ್ರಾಯದವಳು) ಕಾಮಕ್ರೀಡೆ = ಸಂಭೋಗ; ಮಲೆತ = ಕೊಬ್ಬಿದ; ತಬ್ಬು = ಅಪ್ಪಿಕೋ; ಕಲೆಸಿ = ಹೋಲಿಸಿನೋಡು ; ಜಿಂಕೆ = ಹರಿಣ; ಒಲಿ = ಸಾಧ್ಯವಾಗು, ಬಿಂಬ = ಪ್ರತಿಬಿಂಬ; ದೇವಲಲನೆಯರು = ದೇವತಾಸ್ತ್ರೀಯರು.

**ಭಾವಾರ್ಥ-** ಆ ಅರಣ್ಯ ಪ್ರದೇಶದಲ್ಲಿಯ ಫಲಭರಿತ ಹಲಸಿನ ಮರಗಳು, ಸಂಭೋಗ ಸಮಯದಲ್ಲಿ ಪ್ರಾಯದ ಹೆಣ್ಣುಗಳು. ತಮ್ಮ ಕೊಬ್ಬಿದ ಕುಚಗಳನ್ನು ಇನಿಯನೆದುರಿಗೆ ಚಾಚಿ ತಬ್ಬಿಕೊಳ್ಳುತ್ತಿರುವಳೇನೋ ಎಂಬಂತೆ ಭಾಸವಾಗುತ್ತಿದ್ದವು. ಅರಣ್ಯದಲ್ಲಿ ಅಲ್ಲಲ್ಲಿ ನಿಂತ ದೇವ ಲಲನಾಮಣಿಯರು, ಕನ್ನಡಿಯಲ್ಲಿ ತಮ್ಮ ಪ್ರತಿಬಿಂಬ ನೋಡಿಕೊಳ್ಳುತ್ತಾ, "ಹರಿಣಿಯೂ ಕೂಡಾ ತಮ್ಮ ಕಣ್ಣೋಟವನ್ನು ಮೀರಿಸಲಿಕ್ಕಾಗದು" ಎಂದು ಗರ್ವಪಡುತ್ತಿದ್ದರು. ಅಂದರೆ (ತಮ್ಮ ಕಣ್ಣುಗಳು ಚಿಗರಿ ಕಣ್ಣುಗಳಿಗಿಂತ ಸುಂದರವಾಗಿವೆ) ಎಂದು ಸಮಾಧಾನ ಪಟ್ಟು ಕೊಳ್ಳುತ್ತಿದ್ದರು" ಎಂದರ್ಥ!

**ಚಂದದಿಂದೊಪ್ಪಿರ್ದವೆಲ್ಲೆಡೆ । ಚಂದನದ ಛಾಯಾ ಸುರಕ್ಷಕ ।**
**ಅಂದಚೆಂದದ ಸರ್ಪಗಳನೊಳಗೊಂಡ ವೃಕ್ಷಗಳೂ ॥**
**ಮಂದ ಮಾರುತ ಬೀಸಿ ವಾತಾ। ವೃಂದ ಘಮಘಮಿಸಿತ್ತು ಪರಿಮಳ।**
**ಬಂದ ಪಥಿಕರ ಮನಕೆ ಹರ್ಷವನಿತ್ತು ನಲಿಸಿತ್ತೂ ॥೭॥**

ಶಬ್ದಾರ್ಥ - ಚಂದನವೃಕ್ಷ = ಗಂಧದಗಿಡ; ಎಲ್ಲೆಡೆ = ಎಲ್ಲಕಡೆಗೂ; ಛಾಯಾಸುರಕ್ಷಕ = ನೆರಳಿಗೆ ಬಂದವರನ್ನು ರಕ್ಷಿಸುವಂಥ; ಸರ್ಪಗಳನೊಳಗೊಂಡ = ಸರ್ಪಗಳಿಂದ ಕೂಡಿದ; ಮಂದಮಾರುತ = ತಂಗಾಳಿ; ವಾತಾವೃಂದ = ವಾತಾವರಣ; ಪರಿಮಳ = ಸುವಾಸನೆ; ನಲಿ = ಸಂತೋಷಪಡು.

**ಭಾವಾರ್ಥ -** ಆ ಹಿಮಪರ್ವತ ಪ್ರದೇಶದಲ್ಲಿ ಗಂಧದ ಮರಗಳು ವಿಪುಲವಾಗಿ ಬೆಳೆದು ನಿಂತಿದ್ದವು. ತಮ್ಮ ನೆರಳನ್ನು ಆಶ್ರಯಿಸಿ ಬಂದವರಿಗೆ ಸಂತೋಷಕೊಡುತ್ತಿದ್ದವು. ಹಲವು ಬಗೆಯ ಹಾವುಗಳಿಗೆ, ಆ ಚಂದನದ ಮರಗಳು ಆಶ್ರಯ ಸ್ಥಾನವಾಗಿದ್ದವು. ಮಂದ ಗಾಳಿಯು ಬೀಸಿ, ಆ ಗಂಧದ ಪರಿಮಳವನ್ನೆಲ್ಲ ತನ್ನೊಂದಿಗೆ ಹೊತ್ತೊಯ್ದು, ಗಿರಿಗೆ ಬರುತ್ತಿರುವ ಪಥಿಕರ ಮನಸ್ಸನ್ನು ಸಂತೋಷ ಪಡಿಸುತ್ತಿತ್ತು.

**ಚಾಮರೀ ಮೃಗ ಕತ್ತುರಿಯ ಮೃಗ । ಕಾಮಧೇನುಗಳೆಲ್ಲ ಸ್ನೇಹದಿ ।**
**ಮಾಮರದ ನೆರಳಲ್ಲಿ ಮೆಲುಕನ್ನಾಡಿಸುತ್ತಿರಲೂ ॥**
**ಪ್ರೇಮ ದುಂಬಿದ ವೈರವಿಲ್ಲದ । ಆ ಮಹಾ ಮಹಿಮೆಯನು ಗುಣಿಸುತ ।**
**ಕಾಮಜಿತ ಸಹಿತಾಗಿ ನಲಿದರು ಸಕಲ ಯೋಗಿಗಳೂ ॥೮॥**

ಶಬ್ದಾರ್ಥ - ಚಾಮರೀಮೃಗ = ಚವರೀಮೃಗ; ಕತ್ತುರಿಯಮೃಗ = ಕಸ್ತೂರೀಮೃಗ; ಮಾಮರ = ಮಾವಿನಮರ; ಕಾಮಧೇನು = ಬಯಸಿದ್ದನ್ನು ಕೊಡುವ ದೇವಲೋಕದ ಆಕಳು;

**ಭಾವಾರ್ಥ-** ಆ ಸುಂದರಾರಣ್ಯದಲ್ಲಿ ಚವರೀಮೃಗಗಳೂ, ಕಸ್ತೂರೀ ಮೃಗಗಳೂ. ಅಸಂಖ್ಯಾತವಾಗಿದ್ದು. ಅವು ಕಾಮಧೇನುಗಳೊಂದಿಗೆ ಮಾವಿನ ಮರದನೆರಳಿನಲ್ಲಿ ಮೆಲುಕು ಹಾಕುತ್ತ ಮಲಗಿಕೊಂಡಿದ್ದವು; ಎಲ್ಲೆಡೆಯೂ ಪ್ರೇಮವೇ ತುಂಬಿರುವಂಥ, ಎಲ್ಲೆಲ್ಲೂ ವೈರತ್ವಕ್ಕೆ ಆಸ್ಪದವಿಲ್ಲದ ಆ ರಜತಗಿರಿಯ ಮಹಿಮೆಯನ್ನು ಹೊಗಳುತ್ತ, ಆ ಸಪ್ತ ಮುನಿಗಳು, ಶ್ರೀ ಹರಿ ಸಮೇತರಾಗಿ ಸಂತೋಷ ಪಟ್ಟರು.

**ಇಂತು ಮಾರ್ಗದಿ ಮೋಜ ಕಾಣುತ । ಲಾಂತು ಬಂದರು ಸಪ್ತ ಮುನಿಗಳು ।**
**ಕಂತು ಹರ ಶ್ರೀ ಶೈವ ಮಂಟಪ ದೆದುರು ಹರಿಸಹಿತಾ॥**
**ನಿಂತು ನೋಡಿದರಮಮ ವೈಭವ। ಶಾಂತಿಯೆಂಥದು ಪೇಳ ಲಸದಳ ।**
**ಹಿಂತಿನಾ ಸುಕೃತದಲ್ಲಿ ಕಂಡೆವು ಎನುತ ಪೊಡಮಡಲೂ ॥೯॥**

ಶಬ್ದಾರ್ಥ - ಇಂತು = ಹೀಗೆ; ಮೋಜು = ಸಂತೋಷದಾಯಕ ಸ್ಥಿತಿ; ಶೈವ ಮಂಟಪ = ಕೈಲಾಸ; ಪೇಳಲಸದಳ = ಹೇಳುವದಕ್ಕೆ ಅಸಾಧ್ಯ; ಹಿಂತೆ = ಹಿಂದೆ; ಸುಕೃತ = ಪೂರ್ವಜನ್ಮದ ಪುಣ್ಯ.

**ಭಾವಾರ್ಥ -** ಹೀಗೆ ಮಾರ್ಗ ಮಧ್ಯದಲ್ಲಿ ನಾನಾ ಬಗೆಯ ಚಮತ್ಕಾರಗಳನ್ನು ಅವಲೋಕಿಸುತ್ತ, ಆ ಸಪ್ತರ್ಷಿಗಳು ವಿಷ್ಣುವಿನೊಂದಿಗೆ ಕೈಲಾಸ ಮಂದಿರದ ಎದುರಿನ ಮಂಟಪಕ್ಕೆ ಬಂದು ನಿಲ್ತಾರೆ. ಅಬಬಾಬಾ! ಎಂಥಾ ಸೌಂದರ್ಯ? ಅದೆಂಥಾ ಶಾಂತಿದಾಯಕ ತಾಣ? ಎಂಬುವದನ್ನು ವರ್ಣಿಸಲಿಕ್ಕೆ ಅಸಾಧ್ಯವಾಗಿತ್ತು. ನಾವುಗಳು ಹಿಂದೆ ಮಾಡಿದ ಸುಕೃತದಿಂದ ಮಾತ್ರ ''ಇಂಥ ಪವಿತ್ರ ಸ್ಥಳವನ್ನು ನೋಡೋದಕ್ಕೆ ಸಾಧ್ಯವಾಯಿತೂಽ'' ಅಂತಾ ಸಂತಸಪಟ್ಟ ಸಪ್ತರ್ಷಿಗಳು ಆ ಕೈಲಾಸ ಮಂದಿರಕ್ಕೆ ಸಾಷ್ಟಾಂಗ ನಮಸ್ಕಾರಾ ಮಾಡ್ತಾ ಇದ್ದಾರೆ.

**ಶಿವನ ಸಾರೂಪ್ಯತೆಯ ಪೊಂದಿದ । ಶಿವನ ಬಾಗಿಲು ಕಾಯ್ವನಂದಿಯು ।**
**ಜವದಿ ಕೈ ಜೋಡಿಸುತ ಬಂದನು ಮುನಿಗಳೆದುರಿನಲೀ ॥**
**ಶಿವ ಸ್ವರೂಪೀ ಸಕಲ ಋತ್ವಿಜ । ಶಿವನ ಸಖನಾಗಿರುವ ಹರಿಗೂ ।**
**ಭವಹರನ ಮಂಟಪಕೆ ಸ್ವಾಗತವೆನುತ ಕರೆತಂದಾ ॥೧೦॥**

**ಸೋಮಶೇಖರ ಪಾಹಿ ಪಾಹೀ । ವ್ಯೋಮ ಕೇಶನೆ ಪಾಹಿಪಾಹೀ।**
**ಭೀಮ ವೃಷಭಾರೂಢ ಮೃಡನೇ ಪಾಹಿಪಾಹೆನುತಾ॥**
**ರೋಮರೋಮದಿ ಭಕ್ತಿ ಪುಲಕಿಸಿ। ಶ್ಯಾಮ ಸುಂದರ ಕೃಪೆಯಿದೆನುತಾ।**
**ಆ ಮಹದ್ವಾರವನು ದಾಂಟುತೆ ಸಭೆಯೊಳೈತರಲೂ ॥೧೧॥**

**ಶಬ್ದಾರ್ಥ -** ಶಿವನಸಾರೂಪ್ಯ = ಶಿವನ ಆಕಾರವನ್ನೇ ಹೊಂದಿದವ; ಜವ = ಬೇಗನೇ; ಋತ್ವಿಜ = ಮುನಿ; ಸಖ = ಗೆಳೆಯ; ಭವಹರ = ಶಿವ; ಸೋಮಶೇಖರ = ಚಂದ್ರನನ್ನು ಧರಿಸಿದವ (ಶಿವ) ವ್ಯೋಮ ಕೇಶ = ಶಿವ; ಪಾಹಿ = ರಕ್ಷಿಸು; ಭೀಮ = ದೊಡ್ಡ; ವೃಷಭ = ಎತ್ತು (ನಂದಿ) ಮೃಡ = ಶಿವ; ಪುಲಕಿಸಿ = ತುಳುಕಿಸಿ; ಶ್ಯಾಮ ಸುಂದರ = ಹರಿ; ಮಹಾದ್ವಾರ = ಹೆಬ್ಬಾಗಿಲು; ಐತರು = ಬರು.

**ಭಾವಾರ್ಥ-** (೧೦,೧೧) ಅಷ್ಟರಲ್ಲಿಯೇ ಶಿವನ ಸಾರೂಪ್ಯತೆಯನ್ನು ಹೊಂದಿ, ಕೈಲಾಸದ ಬಾಗಿಲು ಕಾಯುತ್ತಿರುವ ನಂದೀಶ್ವರನು, ಆ ಮುನಿಗಳನ್ನೂ,ಶ್ರೀಹರಿಯನ್ನೊ ಕಂಡು, ಕೈಮುಗಿದುಕೊಂಡು ಧಾವಿಸಿ ಬರ್ತಾನೆ, ''ಶಿವಸ್ವರೂಪಿಗಳಾದಂಥ ಸಪ್ತಮುನಿಗಳಿಗೂ, ಶಿವನ ಸಖನಾದ ಶ್ರೀ ಹರಿಗೂ. ಭವಹರನ ಭವ್ಯ ಮಂಟಪಕ್ಕೆ ಸುಸ್ವಾಗತಾ!'' ಎಂದು ಸ್ವಾಗತಿಸ್ತಾನೆ. ಮುನಿಗಳಿಗೆ ಅತ್ಯಾನಂದವಾಗಿ ಅವರ ಗಂಟಲು ಉಬ್ಬಿ ಬರ್ತಾ ಇದೆ. ಗದ್ಗದ ಕಂಠದಿಂದ,

"ಸೋಮಶೇಖರಾಽ ಪಾಹಿಪಾಹೀ; ವ್ಯೋಮಕೇಶನೇ ಪಾಹಿ ಪಾಹಿ!... ಬಲಾಢ್ಯವಾದ ವೃಷಭನ ಬೆನ್ನೇರಿದವನೇ ನಮ್ಮನ್ನು ಕಾಪಾಡೂ!.... ಮೃಡನೇ ನಮ್ಮನ್ನು ಸಂರಕ್ಷಿಸು !" ಎಂದು ರೋಮ ರೋಮಗಳಲ್ಲಿ ಭಕ್ತಿ ತುಂಬಿ ಶಿವನನ್ನು ಸ್ತೋತ್ರ ಮಾಡುತ್ತಾ, ಇದೆಲ್ಲಾ ನಮಗೆ ಶ್ರೀಹರಿಯ ಕೃಪೆಯಿಂದ ದೊರೆತ ಮಹಾಭಾಗ್ಯ ವೆಂದು. ಆತನನ್ನೂ ಸ್ತುತಿಸುತ್ತ, ಆ ಕೈಲಾಸ ಮಂದಿರದ ಮಹಾದ್ವಾರವನ್ನು ದಾಟಿ, ಸಭಾಮಂಟಪದ ಒಳಗಡೆ ಬರ್‍ತಾ ಇದ್ದಾರೆ.

**ಇತಿ, ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್ಟ. ಜೋಶಿ ವಿರಚಿತ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್, ಹಿಮಗಿರಿ ವರ್ಣನೋನಾಮಕ ಷಷ್ಠೋಽಧ್ಯಾಯಃ**

**ಅಂತು ಅಧ್ಯಾಯ ೬ಕ್ಕಂ, ಪದ ೧೧ ಕ್ಕಂ, ಒಟ್ಟು ಪದ ೧೦೪ ಕ್ಕಂ ಮಂಗಲಮಸ್ತು**

ಏಳುಕೋಟಿಗ ! ಏಳುಕೋಟಿಗ!! ಏಳು ಕೋಟಿಗೋ !!! ಸಾಂಗಬಲೋ!...



# ಅಧ್ಯಾಯ-೭ ಅಥ ಸಪ್ತಮೋಧ್ಯಾಯಃ ಕೈಲಾಸ ವರ್ಣನ

ಸೂಚನೆ -

ನಿಂತು ನೋಡಿದರಬಬ ಶಿವ ಸಭೆ । ಎಂತು ಶುಭ್ರವು ಚಂದ್ರಕಾಂತದೊ ।
ಳೆಂತು ನವರತುನಗಳ ಬೆಸೆದನೊ ವಿಶ್ವಕರ್ಮಕಲಾ॥

ಸೂಚನೆ- ಆ ಸಪ್ತರ್ಷಿಗಳು ವಿಷ್ಣುವಿನೊಂದಿಗೆ ನಂದಿಯಿಂದ ಮಾರ್ಗತೋರಿಸಲ್ಪಟ್ಟವರಾಗಿ, ಶಿವನ ಸಭಾಸ್ಥಾನವಾದ ಕೈಲಾಸದಲ್ಲಿ ಕಾಲಿಟ್ಟು ನೋಡ್ತಾರೆ. ಅಬ್ಬಾ! ಎಂಥಾ ಸೌಂದರ್ಯ! ಎಷ್ಟೊಂದು ಶುಭ್ರತೆ!... ''ಚಂದ್ರಕಾಂತ ಶಿಲೆಗಳಲ್ಲಿ ದೇವ ಶಿಲ್ಪಿಯಾದಂಥಾ ವಿಶ್ವಕರ್ಮನು, ಅಂಥಂಥಅ ನವರತ್ನಗಳನ್ನು ಯಾವ ಯಾವ ರೀತಿಯಾಗಿ ಸೌಂದರ್ಯ ಬರುವಂತೆ ಜೋಡಿಸಿದನೋ ಎಂದು ಆಶ್ಚರ್ಯವಾಗ್ತಾ ಇದೆ. ವಿಶ್ವಕರ್ಮ ಕಲಾನೈಪುಣ್ಯಕ್ಕೆ ಬೆಲೆ ಇಲ್ಲಾಽ ''ಅಂತಾ ಆ ಸರ್ವಮುನಿಗಳೂ ಆಶ್ಚರ್ಯದಿಂದ ಕೈಲಾಸ ಮಂದಿರವನ್ನು ನೋಡ್ತಾ ಇದ್ದಾರೆ. ''ಅದರ ವರ್ಣನೆ ಮುಂದಿನ ನುಡಿಗಳಲ್ಲಿ ಬರ್ತಾ ಇದೇ'' ಅಂತಾ ಕವಿ ಸೂಚನೆ ಕೊಡ್ತಾ, ಕಥಾನಕವನ್ನು ಮುಂದುವರಿಸ್ತಾ ಇದ್ದಾನೆ.

ಇಂದು ಕಾಂತದ ಏಳು ಅಸ್ತರ । ಒಂದರಾಮೇಲೊಂದು ಇರುತಿರೆ ।
ಅಂದ ಚೆಂದದ ಸುಳಿವು ಚಿತ್ತಾರಗಳನೊಡಗೂಡೀ ॥
ಕೆಂದು ಕೇಸರಿ, ನೀಲ ಪವಳವು । ಸಂದು ಸಂದಲಿ ಕೆಚ್ಚಿ ನಿಂದಿಹ ।
ಅಂದ ಗೋಮೇಧಿಕವು ಮೌಕ್ತಿಕ ಜಾಲರಿಯು ಸಹಿತಾ ॥೧॥

ಶಬ್ದಾರ್ಥ - ಅಸ್ತರ = ಅಂತಸ್ತು; ಚಿತ್ತಾರ = ಚಿತ್ರ; ಕೆಂದು = ಕೆಂಪು ರತ್ನ; ನೀಲ = ನೀಲಮಣಿ; ಕೇಸರಿ, ಪವಳ, ಗೋಮೇಧಿಕ, ಇವೆಲ್ಲಾ ನವರತ್ನಗಳ ಮಾದರಿಗಳಾಗಿವೆ; ಇಂದು ಕಾಂತ = ಚಂದ್ರಕಾಂತ.

ಭಾವಾರ್ಥ- ಚಂದ್ರಕಾಂತ ಶಿಲೆಯಲ್ಲಿ ಒಂದರ ಮೇಲೊಂದರಂತೆ ಏಳು ಅಂತಸ್ತುಗಳನ್ನು ವಿಶ್ವಕರ್ಮನು ರಚಿಸಿ, ಪ್ರತಿಯೊಂದು ಅಂತಸ್ತಿಗೂ, ಕೆಂಪು, ಕೇಸರಿ, ನೀಲಮಣಿ, ಪಚ್ಚ, ಗೋಮೇಧಿಕ, ಮುತ್ತು, ಹವಳಗಳಿಂದ, ಸಂದು ಸಂದುಗಳಿಗೆ ಸರಿಯಾಗಿ ಹೊಂದಾಣಿಕೆ ಮಾಡಿ, ಅವುಗಳಿಗೆ ಬಹು ಬೆಲೆಯುಳ್ಳ ಮುತ್ತುಗಳಿಂದ, ಜಾಲರಿಯನ್ನು ಹೆಣೆದಿದ್ದನು. ಏಳೂ ಅಂತಸ್ತುಗಳ ಪ್ರತಿ ಸಾಲಿನಲ್ಲಿಯೂ, ಆನೆ, ಕುದುರೆ, ಹಂಸ, ಪದ್ಮ ಮುಂತಾದ ಕಲಾಯುಕ್ತವಾದ ಸುಳಿವುಗಳನ್ನು. ಕೈಲಾಸ ಮಂದಿರಲ್ಲಿ ಕೊರೆಯಲಾಗಿತ್ತು.

ಇಂತು ಏಳಂತಸ್ತು ಇರೆ ಕೊನೆ । ಗಾಂತು ಶಿವಪಾರ್ವತಿಯ ಮಂಟಪ ।
ನಿಂತು ನೋಳ್ಪರಿಗೆಲ್ಲ ಭಕ್ತಿಯು ಉದಿಸುವಂದದಲೀ ॥
ಅಂತರಂತರದಲ್ಲಿ ಶಿವ ಸಾ। ಮಂತ ಸಾರೂಪ್ಯಗಳ ಪಡೆದಿಹ ।
ಎಂತೊ ಗಣಗಳು ಮೆರೆಯುತಿರ್ದರು ಶಿವನ ರೂಪದಲೀ ।೨॥

ಸಂತ ನಾರದ ತುಂಬರಾದಿ ಅ । ನಂತ ಭಕುತರು ಶಿವನ ಸ್ತೋತ್ರವ ।
ನಿಂತು ಮಾಡುತಲಿರ್ದರೊಂದೆಡೆ ಭಕ್ತಿಯುತರಾಗೀ ॥
ಶಾಂತ ರೂಪವ ಧರಿಸಿ ದೇವನ। ನಂತ ನಾಮದಿ ಸ್ಮರಿಸುತಿರ್ದರು।
ಕಂತು ಹರ ಶಿವ-ಶಂಭೊ -ಎನ್ನುತ ದಿಸೆಯ ಪಾಲಕರು ।೩॥

ಗೈಯ್ಯುತಿರ್ದನು ಭೃಂಗಿ ನೃತ್ಯವ। ಹೊಯ್ಯುತಿರ್ದನು ನಂದಿ ಮದ್ದಳೆ ।
ಮೈಯ ಕುಣಿಸುತ ನೃತ್ಯಗೈವರು ಯಕ್ಷ ಗಂಧರ್ವ ॥
ಥೈಯ್ಯ ಥಕ ಥೈ, ಗೆಜ್ಜೆ ನುಡಿಸುತ । ಮೈಯ್ಯ ಮುರಿಯುತ ರಂಭೆ ಮೇನಕೆ ।
ಅಯ್ಯ ಶಂಭೋ ಪಾಲಿಸೆನುತಲಿ ನೃತ್ಯ ಗೈಯ್ಯುವರೂ ॥೪॥

ಶಬ್ದಾರ್ಥ - ಕೊನೆಗಾಂತು = ಕೊನೆಯಭಾಗದಲ್ಲಿ; ಸಾಮಂತ = ಸಾಮಿಪ್ಯಪದವಿ ಪಡೆದವ; ಸಾರೂಪ್ಯ = ಶಿವನ ರೂಪವನ್ನೇ ಪಡೆದವ; ತುಂಬರ = ಗಾನದಿಂದ ಶಿವನನ್ನು ಮೆಚ್ಚಿಸಿದವ; ಸಂತ = ಭಕ್ತ; ಅನಂತ = ಸಾಕಷ್ಟು; ಕಂತುಹರ = ಶಿವ; ದಿಸೆಯಪಾಲಕ = ದಿಕ್ಪಾಲಕರು. ಹೊಯ್ಯು = ಬಾರಿಸು; ಗೈಯ್ಯು = ಮಾಡು.

ಭಾವಾರ್ಥ - (೨,೩,೪) ಕೈಲಾಸ ಮಂದಿರಕ್ಕೆ ಈ ಪ್ರಕಾರವಾಗಿ ಏಳು ಅಂತಸ್ತುಗಳಿದ್ದು, ಕೊನೆಯ ಅಂತಸ್ತು ಶಿವ-ಪಾರ್ವತಿಯರ ಮಂಟಪವಾಗಿತ್ತು; ಅದು ನಿಂತು ನೋಡುವ ಭಕ್ತರಿಗೆಲ್ಲ ಸದ್ಭಕ್ತಿಯನ್ನು ಹೆಚ್ಚು ಹೆಚ್ಚಾಗಿ ಪ್ರಚೋದಿಸುವಂತಿತ್ತು . ಒಂದೊಂದು ಅಂತಸ್ತಿನಲ್ಲಿ ಶಿವ ಸಾಯುಜ್ಯ ಪದವಿ ಪಡೆದವರೂ. ಇನ್ನೊಂದು ಅಂತಸ್ತಿನಲ್ಲಿ ಶಿವಸಾರೂಪ್ಯತೆಯನ್ನು ಪಡೆದ ಗಣವರರೂ. ಮೆರೆದಾಡುತ್ತಿದ್ದರು, ಇನ್ನೊಂದೆಡೆಗೆ ನಾರದ, ತುಂಬರ, ಮುಂತಾದ ಅನೇಕ ಶಿವಭಕ್ತರು, ರಾಗ ಬದ್ಧವಾಗಿ ಶಿವನ ಸ್ತೋತ್ರ ಮಾಡುತಿದ್ದರು. ಅಷ್ಟದಿಕ್ಪಾಲಕರು ಶಾಂತರೂಪಧರಿಸಿ, ಒಂದು ಕಡೆಗೆ ಅಚ್ಚು ಕಟ್ಟಾಗಿ ಕೈಜೋಡಿಸಿ ನಿಂತುಕೊಂಡು, ಸದಾಶಿವನ ಅನಂತ ನಾಮಸ್ಮರಣೆ ಮಾಡುವದರಲ್ಲಿ ತಲ್ಲೀನರಾಗಿದ್ದರು. ಇನ್ನೊಂದು ಕಡೆಗೆ ಶಿವನ ಸನ್ನಿಧಿಯಲ್ಲಿ ಭೃಂಗಿಯು ತನ್ನ ಮೂರು ಕಾಲುಗಳಿಂದ ಮನ ಮೋಹಕವಾಗಿ ನೃತ್ಯ ಮಾಡುತ್ತಿದ್ದನು. ನಂದೀಶ್ವರನು ಮದ್ದಳೆ ಬಾರಿಸುತ್ತಿದ್ದನು. ಇನ್ನೊಂದೆಡೆಗೆ ಯಕ್ಷ - ಗಂಧರ್ವರು ಮೈಮುರಿಯುತ್ತ ಭ್ರಮರೀ ನೃತ್ಯದಲ್ಲಿ ತಲ್ಲೀನರಾಗಿ ಶಿವನ ಸ್ತೋತ್ರ ಮಾಡುತ್ತಿದ್ದರು. ಮತ್ತೊಂದು ಭಾಗದಲ್ಲಿ ರಂಭೆ, ಮೇನಕೆ, ಮುಂತಾದ ಅಪ್ಸರಾ ಸ್ತ್ರೀಯರು ''ತಂದೇಽ! ಪರಮೇಶ್ವರಾ ಪಾಲಿಸು'' ಎಂಬ ಅರ್ಥಬರುವಂತೆ ಮನಮೋಹಕವಾಗಿ ''ಥೈಯ್, ಥಕ ಥೈ,'' ಎಂದು ಗೆಜ್ಜೆಗಾಲ್ಗಳನ್ನು ನುಡಿಸುತ್ತ ಶಿವ ಸ್ತುತಿಯಲ್ಲಿ ನಿಮಗ್ನರಾಗಿದ್ದರು.

ದೇವ ಗುರು ಬ್ರಹಸ್ಪತಿಯು ಪ್ರವಚನ । ಏೀವು ತಿರ್ದನು ಶುಕ್ರ ಕವಿಯಾ।
ಗ್ಯವನ ಶ್ಲೋಕಕೆ ಭಾಷ್ಯ ನೀಡುತ ಲಿರ್ದ ಸಮನಾಗೀ ॥
ಭಾವದುಂಬಿದ ಸಭೆಗೆ ಬುಧ ಕಲೆ । ಠಾವ ತುಂಬುತಲಿರ್ದನಾ ಸಭೆ ।
ಜಾವ ಜಾವಕು ಓತಪ್ರೋತವದಾಗಿ ಹರಿದಿತ್ತೂ ।೫॥

ಶಬ್ದಾರ್ಥ - ಏೀವುತಿರ್ದನು = ಕೊಡುತ್ತಿದ್ದನು; ಭಾಷ್ಯ = ವಿವರಣೆ; ಠಾವು = ನಿವಾಸ (ಆಕೃತಿ) ಜಾವ = ಕ್ಷಣ; ಓತಪ್ರೋತ = ನಿರರ್ಗಳವಾಗಿ.

**ಭಾವಾರ್ಥ** - ದೇವ ಗುರುಗಳಾದ ಬ್ರಹಸ್ಪತ್ಯಾಚಾರ್ಯರು ಶಿವ ಸಭೆಯಲ್ಲಿ ವ್ಯಾಖ್ಯಾನ ಏೀಯುತ್ತಿದ್ದರು. ದೈತ್ಯ ಗುರುವೂ, ಕವಿಯೂ ಆದ ಶುಕ್ರಾಚ್ಯಾರು ಆ ಶ್ಲೋಕಗಳಿಗೆ ಸರಿಯಾದ ವಿವರಣೆ ನೀಡುತ್ತಿದ್ದರು. ಆ ಸಭೆಗೆ ಸಕಲ ಕಲಾ ನಿಧಿಯಾದ ಬುಧನು ಕಲಾಕಾರನಾಗಿ ಪ್ರಕಾಶಿಸುತ್ತಿದ್ದನು. ಹೀಗಾಗಿ ಕ್ಷಣ ಕ್ಷಣಕ್ಕೂ ಆ ಶಿವ ಸಭೆಯು, ನಿರರ್ಗಳವಾಗಿ ಸಾಗತೊಡಗಿದ್ದಿತು.

ಸಿದ್ಧ ವಿದ್ಯಾಧರ ಮರುದ್ಗಣ । ಬದ್ಧ ಕಂಕಣರಾಗಿ ನವನಿಧಿ ।
ಶುದ್ಧ ಭಾವದಿ ಶ್ರವಣ ಮಾಳ್ಪರು ನಿತ್ಯ ಮೈದಳೆದೂ ॥
ಇದ್ದ ವಂತ್ಯದೊಳೆರಡು ಬೊಂಬೆಯು । ಶುದ್ಧ ರತ್ನದ ದೀಪ ಬೆಳಗುತ ।
ಬದ್ಧರುದ್ಧಾರಕಗೆ ಸಂತತ ಮಂಗಲೆಂದೆನುತಾ ।೬॥

ಶಬ್ದಾರ್ಥ - ಬದ್ಧಕಂಕಣರಾಗಿ = ಕೈಕಟ್ಟಕೊಂಡು; ಶ್ರವಣಮಾಡು = ಕೇಳು; ಬೊಂಬೆ = ಗೊಂಬೆ; ಅಂತ್ಯದೊಳು = ಕೊನೆ ಮೊದಲಿಗೆ; ಬದ್ಧರುದ್ಧಾರಕ = ದಲಿತೋದ್ಧಾರಮಾಡುವ;

**ಭಾವಾರ್ಥ -** ಸಿದ್ಧ ಮುನಿಗಳೂ, ವಿದ್ಯಾಧರರೂ, ಮರುದ್ಗಣಗಳೂ, ಸಾಕಾರರಾಗಿ ನಿತ್ಯದಲ್ಲೂ ಆ ಪ್ರವಚನ ಕಾರ್ಯಕ್ರಮವನ್ನು, ಧ್ಯಾನವಿಟ್ಟು ಆಲಿಸುತ್ತಿರುವರು. ಸಭಾ ಮಂಟಪದ ಆದಿಯಲ್ಲಿಯೂ, ಅಂತ್ಯದಲ್ಲಿಯೂ ಎರಡು ಸುವರ್ಣ ಪುತ್ಥಳಿಗಳಿದ್ದು; ಅವುಗಳ ಕೈಯ್ಯಲ್ಲಿ ರತ್ನ ದೀಪದ ಆರತಿಯ ತಟ್ಟೆಗಳಿದ್ದವು. ಹೀಗಾಗಿ ಭಕ್ತೋದ್ಧಾರಕನಾದ ಸದಾಶಿವನಿಗೆ ಆ ಗೊಂಬೆಗಳು ಅನಂತ ಕಾಲದಿಂದಲೂ ಆರತಿಯನ್ನು ಬೆಳಗುತ್ತಿರುವಂತೆಯೇ ಗೋಚರಿಸುತ್ತಿತ್ತು.

**ಪಂಚ ಮುಖ ದಶ ಭುಜಗಳಿಂದಲಿ । ಮಿಂಚುತಿರ್ದನು ಆ ಮಹೇಶ್ವರ ।**
**ಅಂಚೆದುಪ್ಪಳವಿದ್ದ ರತ್ನಾಸನದಿ ನಸುನಗುತಾ ॥**
**ಮಿಂಚಿನಂದದಿ ಎಸೆಯು ತಿರ್ದಳು । ಕಂಚುಕೀ ಪೀತಾಂಬರದಿ ಕೋಲ್ ।**
**ಮಿಂಚು ನಾಚುವ ತೆರದಿ ಶಿವನೆಡಭಾಗದೊಳು ಗೌರೀ ॥೭॥**

ಶಬ್ದಾರ್ಥ - ಪಂಚಮುಖ = ಐದು ಮೋರೆ; ದಶಭುಜ = ಹತ್ತುಕೈಗಳು; ಮಿಂಚು=ಪ್ರಕಾಶಿಸು ; ಅಂಚೆದುಪ್ಪಳ = ಹಂಸಗಳಗರಿ ; ಕಂಚುಕೀ = ಕುಪ್ಪಸ; ಪೀತಾಂಬರ = ರೇಶಿಮೆಸೀರೆ ; ಕೋಲ್‌ಮಿಂಚು = ಬಳ್ಳಿ ಮಿಂಚು.

**ಭಾವಾರ್ಥ -** ಶಿವ ಪರಮಾತ್ಮನು ಐದು ಮುಖ, ಹಾಗೂ ಹತ್ತು ಭುಜಗಳಿಂದ ಶೋಭಿಸುತ್ತಿದ್ದನು, ಆತನು ಹಂಸಗಳ ಮೆತ್ತನೆಯ ತುಪ್ಪಳದಿಂದ ಸಿದ್ಧಪಡಿಸಿದ ರತ್ನಾಸನದಲ್ಲಿ ನಸುನಗುತ್ತ ಕುಳಿತು ಕೊಂಡಿದ್ದನು. ಅವನ ಎಡಭಾಗದಲ್ಲಿ ಜಗನ್ಮಾತೆಯಾದ ಶ್ರೀ ಗೌರಿಯು, ರತ್ನ ಕೆಚ್ಚಿದ ಕುಪ್ಪಸ, ಪೀತಾಂಬರಗಳನ್ನು ಧರಿಸಿ, ಕೋಲ್ಮಿಂಚು ಕೂಡಾ ನಾಚುವಂತೆ, ಪ್ರಕಾಶಮಾನವಾಗಿ ಬೆಳಗುತ್ತಲಿದ್ದಳು.

ನೋಡಿ ನಲಿದರು ಸಪ್ತಮುನಿಗಳು। ಕೂಡಿ ಆನಂದಾಶ್ರು ಮುಖದಲಿ ।
ನಾಡಿ ಮಿಡಿದವು ಹರ್ಷಪುಲಕದಿ ರೋಮ ನಿಮಿರಿತ್ತೂ ॥
ಆಡಲಾರದೆ ಮಾತು ಮೌನವು। ಮೂಡಿ ಮೆರೆಯಿತು ಸಕಲ ಹೃದಯದಿ ।
ಕೂಡಿ ಸಾಷ್ಟಾಂಗದಲಿ ಮಣಿದರು ವಿಷ್ಣುಸಹಿತಾಗೀ ॥೮॥

ನೋಡಿದನು ಶಿವ ಹರಿ ಸಮೇತದಿ । ಕೂಡಿ ಬಂದಿಹ ಸಪ್ತ ವಿಪ್ರರ।
ಓಡಿ ಬಂದೆತ್ತುತಲಿ ಸರ್ವರಿಗಿತ್ತನಾಸನವಾ॥
ನಾಡ ನುಂಗಿದ ಭೂಪ ಬಾರ್ಯೆ । ಮೋಡಿ ಏನಿದು ಸಕಲ ಸೌಖ್ಯವೆ।
ಕಾಡ ತುಳಿಯುತ ಬಂದುದೇತಕೆ ಎಂದು ನಗೆಯಾಡೇ ॥೯॥

ನಗುವ ಸಮಯವಿದಲ್ಲ ಶಂಕರ । ಹಗೆಗಳ್ಹುಟ್ಟಿದರಯ್ಯ ಇಳೆಯಲಿ ।
ಬಗಿದು ಬ್ರಹ್ಮಾಂಡವನು ಸ್ವರ್ಗವ ಸೂರೆಗೊಂಡಿಹರೂ ॥
ಮಿಗಿಲು ಯಜ್ಞಾದಿಗಳು ನಿಂತಿವೆ। ಹೊಗೆಯು ತುಂಬಿದೆ ವಿಪ್ರ ಹೃದಯಕೆ ।
ಲಗುಬಗೆಯಲಿಳಿಯುವದು ಭೂಮಿಗೆ ಸತಿಯು ಸಹಿತಾಗೀ ॥೧೦॥

ಶಬ್ದಾರ್ಥ- (೮,೯,೧೦) ನಲಿ = ಸಂತೋಷಪಡು; ಆನಂದಾಶ್ರು = ಆನಂದದ ಕಣ್ಣೀರು; ಮಿಡಿ = ಹಾರು; ಹರ್ಷಪುಲಕದಿ = ಆನಂದ ಹೆಚ್ಚಾಗಿ; ರೋಮ ನಿಮಿರು = ಪುಲಕವೇಳು; ವಿಪ್ರ = ಬ್ರಾಹ್ಮಣ; ಮೋಡಿ = ಚಮತ್ಕಾರ; ಕಾಡು = ಅರಣ್ಯ; ನಗೆಯಾಡು = ಹಾಸ್ಯಮಾಡು; ಇಳೆ = ಭೂಮಿ; ಬಗಿದು = ಅಗಿದು; ಸೂರೆಗೊಳ್ಳು = ಹಾಳುಮಾಡು; ಮಿಗಿಲು = ಶ್ರೇಷ್ಠ ಹೊಗೆಯು ತುಂಬಿದೆ = ಕಂಗಾಲಾಗಿದ್ದಾರೆ; ಸತಿ = ಪಾರ್ವತೀ ದೇವಿ; ನಾಡ ನುಂಗಿದ ಭೂಪ = ಶ್ರೀಕೃಷ್ಣ (ಹರಿ).

**ಭಾವಾರ್ಥ** - (೮,೯,೧೦) ಆ ಸಪ್ತರ್ಷಿಗಳು ಶಿವಪರಮಾತ್ಮನನ್ನು ಕಂಡು ಸಂತೋಷಪಟ್ಟರು. ಆನಂದದಿಂದ ಅವರ ಕಣ್ಣುಗಳಲ್ಲಿ ನೀರು ಸುರಿಯಿತು. ಅವರ ನಾಡಿಗಳು ಆನಂದದಿಂದ ಮಿಡಿಯತೊಡಗಿದವು. ಮೈಮೇಲೆ ರೋಮಾಂಚನಗಳೆದ್ದವು. ಮಾತಾಡುವದಕ್ಕೂ ಬಾಯಿ ಬರದೇ, ಅವರನ್ನು ಮೌನವು ಆವರಿಸಿಬಿಟ್ಟಿತು. ಆ ಸಪ್ತರ್ಷಿಗಳು ವಿಷ್ಣು ಸಮೇತರಾಗಿ ಶಿವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಕೂಡಲೇ ಶಿವನು, ಹರಿ ಸಮೇತರಾಗಿ ಬಂದಿರುವ ಏಳೂ ಜನ ಮುನಿಗಳನ್ನು ನೋಡಿ, ಅವಸರದಿಂದ ಬಂದು, ಅವರನ್ನೆಲ್ಲ ಸಂತೈಸಿ ಉಚಿತಾಸನಗಳನ್ನಿತ್ತು ಸತ್ಕರಿಸಿದನು. ಮತ್ತೂ ಶ್ರೀ ಹರಿಯನ್ನು ಕುರಿತು ಹಾಸ್ಯ ಮಾಡುತ್ತಾ, "ಏನಯ್ಯಾ ಭೂಮಿಯನ್ನು ನುಂಗಿದವನೇ!... ಅಪರೂಪವಾಗಿ ಅರಣ್ಯ ತುಳಿಯುತ್ತಾ ಬಂದುಬಿಟ್ಟಿಯಲ್ಲಾ? ವೈಕುಂಠದಲ್ಲಿ ಎಲ್ಲಾ ಕ್ಷೇಮವೇ?" ಎಂದು ವಿಚಾರಿಸಿದನು. ಅದಕ್ಕೆ ಶ್ರೀ ಹರಿ ಹೇಳ್ತಾನೇ "ಮಿತ್ರಾ! ಶಂಕರಾ!...ಇದು ನಗುವ ಸಮಯವಲ್ಲಪ್ಪಾ!... ಭೂಲೋಕದಲ್ಲಿ ನಮ್ಮ ವೈರಿಗಳಾದ ರಾಕ್ಷಸರು ಹುಟ್ಟಿಕೊಂಡು, ಬ್ರಹ್ಮನಿತ್ತ ವರದಿಂದಾ ಕೊಬ್ಬಿಬಿಟ್ಟಿದ್ದಾರೆ. ಅವರು ಭೂಲೋಕವನ್ನೆಲ್ಲಾ ವಶಕ್ಕೆ ತಕ್ಕೊಂಡು, ಸ್ವರ್ಗವನ್ನು ಸಹಿತ ಸೂರೆ ಮಾಡಿದ್ದಾರಂತೇ!... ಅವರ ದುರಾಡಳಿತದಿಂದಾಗಿ ಭೂಮಿಯಲ್ಲಿಯ ಯಜ್ಞ ಯಾಗಾದಿಗಳು ನಿಂತು ಹೋಗಿವೆ!... ಆ ರಾಕ್ಷಸರು ಈ ವಿಪ್ರರ ಹೃದಯಕ್ಕೂ ಕಿಚ್ಚನ್ನಿತ್ತಿದ್ದಾರೆ. ಅದಕ್ಕಾಗಿ, ಜಗದೋದ್ಧಾರಕ್ಕಾಗಿ, ನೀನು ಈ ಗೌರೀ ಸಮೇತನಾಗಿ ಭೂಮಿಯಲ್ಲಿ ಅವತರಿಸುವುದು ಅತೀ ಅವಶ್ಯವಾಗಿದೆ. ಅದಕ್ಕಾಗಿ ನೀನು ತಕ್ಷಣ ಭೂಮಿಗೆ ಹೊರಟು, ಧರ್ಮೋದ್ಧಾರದ ಕಾರ್ಯವನ್ನು ಕೈಕೊಳ್ಳತಕ್ಕದ್ದು!..." ಎಂದು ವಿನಂತಿಸಿದನು.

**ಹೇಳಿ ವಿಪ್ರರೆ ನಿಮ್ಮ ಅನುಭವ । ಕೇಳಿ ಪಶುಪತಿ ರುದ್ರನಾಗಲಿ।**
**ತಾಳಿ ಅವತಾರವನು ಧರ್ಮವ ರಕ್ಷಿಸಲಿ ಎನಲೂ ॥**
**ತಾಳಿ ಧೈರ್ಯವ ಮುನಿಗಳೇಳ್ವರು । ಮೌಳಿ ಚಂದ್ರಂಗೆರಗಿ ವಿನಯದಿ ।**
**ಕಾಲಕಾಲನ ಸ್ತೋತ್ರ ಗೈದರು ಬಿಗಿದ ಕಂಠದಲೀ ॥೧೧॥**

ಶಬ್ದಾರ್ಥ- ಪಶುಪತಿ = ಶಿವ; ರುದ್ರ = ಭೀಷಣಾಕೃತಿಯವ ; ಮೌಳಿಚಂದ್ರಂಗೆ = ಶಿವನಿಗೆ.

**ಭಾವಾರ್ಥ-** ನಂತರ ಶ್ರೀ ವಿಷ್ಣುವು ಸಪ್ತರ್ಷಿಗಳನ್ನು ಕುರಿತು, "ಮುನಿಗಳೇ! ನಿಮಗೆ ಆ ರಾಕ್ಷಸರಿಂದಾದ ಅನುಭವವನ್ನು ಸ್ವತಃ ನಿಮ್ಮ ಬಾಯಿಂದಲೇ ಶಿವನೆದುರು ಅರಿಕೆ ಮಾಡಿಕೊಳ್ಳಿರಿ!... ನಿಮ್ಮ ಅನುಭವವನ್ನು ಕೇಳಿ, ಭಕ್ತಾಭಿಮಾನಿಯಾದ ಶಿವನು, ರೌದ್ರಾವತಾರ ತಾಳಿ, ಆ ದುಷ್ಟರನ್ನು ನಿರ್ನಾಮ ಮಾಡಲಿ!. ಮತ್ತೂ ಸಜ್ಜನರಿಗೆ ರಕ್ಷಣೆಯಿತ್ತು, ಭೂಮಿಯ ಮೇಲೆ ಮತ್ತೆ ಧರ್ಮವು ಜಾಗೃತಗೊಂಡು, ಯಜ್ಞಾದಿ ಪುಣ್ಯ ಕಾರ್ಯಗಳು ನಡೆಯುವಂತಾಗಲಿ!!" ಎಂದು ಶ್ರೀಹರಿಯು ಆ ಮುನಿಗಳಿಗೆ ಸೂಚಿಸ್ತಾ ಇದ್ದಾನೆ. ತಕ್ಷಣವೇ ಮುನಿಗಳು ಮೇಲೆದ್ದು, ಶಿವನಿಗೆ ವಿಧೇಯತೆಯಿಂದ ನಮಸ್ಕರಿಸಿ, ಬಿಗಿದ ಕಂಠದಿಂದ ಈ ರೀತಿಯಾಗಿ ಸ್ತೋತ್ರ ಮಾಡ್ತಾ ಇದ್ದಾರೆ.

**ಇತಿ, ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್ಟ. ಜೋಶೀ ವಿರಚಿತ, ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್, "ಕೈಲಾಸ ವರ್ಣನ" ನಾಮಕ ಸಪ್ತಮೋಧ್ಯಾಯಃ ॥**

ಅಂತು ಅಧ್ಯಾಯ ೭ ಕ್ಕಂ, ಪದ ೧೧ಕ್ಕಂ, ಒಟ್ಟು ಪದ ೧೧೫ ಕ್ಕಂ, ಮಂಗಲಮಸ್ತು.

**ಏಳುಕೋಟಿಗ! ಏಳುಕೋಟಿಗ!! ಏಳು ಕೋಟಿಗೋ !!!... ಸಾಂಗಬಲೋ!....**





# ಅಧ್ಯಾಯ-೮ (ಅಷ್ಟಮೋಧ್ಯಾಯಃ)

## ॥ ಶಿವ ಪಾರ್ವತೀ ಸ್ತುತಿ॥



**ಸೂಚನೆ:-**

**ಭಕ್ತಿ ಪ್ರೇಮವ ಸೂಸಿ ಯತಿಗಳು ।ಶಕ್ತಿ ಶಿವರನು ಸ್ತೋತ್ರ ಗೈಯ್ಯಲು ।**
**ಭಕ್ತ ವತ್ಸಲ ನಲಿದು ಅಭಯವನಿತ್ತ ಮುನಿಗಳಿಗೇ ॥**

**ಭಾವಾರ್ಥ:-** ಯತಿಗಳು ಭಕ್ತಿ ಭಾವದಿಂದ ಶಿವ ಶಕ್ತಿಯರ ಸ್ತೋತ್ರ ಮಾಡ್ತಾರೆ, ಆ ಸ್ತೋತ್ರ ಕೇಳಿ ಪರಮಾತ್ಮನಿಗೆ ಆನಂದವಾಗ್ತಾ ಇದೆ., ಆತ ಬಹು ಸಂತೋಷ ಪಟ್ಟು, ಆ ಸಪ್ತರ್ಷಿಗಳಿಗೆ ಅಭಯವನ್ನಿತ್ತು, "ತಾನು ಭಕ್ತ ವತ್ಸಲನು" ಎಂಬ ಬಿರುದನ್ನು ಶಾಶ್ವತವಾಗಿ ಉಳಿಸಿಕೊಳ್ತಾನೆ" ಎಂದು ಸೂಚಿಸಿ, ಕವಿಯು ಆ ಮುನಿಗಳು ಸ್ತೋತ್ರ ಮಾಡಿದ ಶಿವಸ್ತುತಿಯನ್ನು ಈ ರೀತಿಯಾಗಿ ಬಣ್ಣಿಸ್ತಾ ಇದ್ದಾನೆ.

**ಸಕಲ ಮುನಿ ಮಾನಸ ಸುಪೂಜಿತ । ಭಕುತ ವತ್ಸಲ ಭಯ ನಿವಾರಕ ।**
**ಅಖಿಳ ಬ್ರಹ್ಮಾಂಡಗಳ ಕುಕ್ಷಿಯೊಳಿಟ್ಟ ಪರಮಾತ್ಮಾ ॥**
**ಮುಕುತಿ ದಾಯಕ ಮೋಕ್ಷದಧಿಪತಿ । ಸಕಳ ಭೇದಕು ನಿಲುಕದಾತನೆ।**
**ಶಕುತಿ ಸಹ ಪರಮೇಶ ಪಾಹೀ ಪಾಹಿ ಎಂದೆನುತಾ ।೧॥**

ಶಬ್ದಾರ್ಥ – ಬ್ರಹ್ಮಾಂಡ = ಜಗತ್ತು; ಕುಕ್ಷಿ = ಹೊಟ್ಟೆ; ಅಧಿಪತಿ = ಒಡೆಯ; ಪಾಹಿ = ರಕ್ಷಿಸು; ಶಕುತಿ ಸಹ ಪರಮೇಶ = ಪಾರ್ವತೀದೇವಿಯೊಂದಿಗೆ ಕೂಡಿಕೊಂಡಿದ್ದ ಪರಮಾತ್ಮ.

**ಭಾವಾರ್ಥ**– ಜಗತ್ತಿನಲ್ಲಿರುವ ಮುನಿಗಳೆಲ್ಲರ ಮನಸ್ಸಿನಲ್ಲಿ ನೆಲಿಸಿ, ಪೂಜೆಗೊಳ್ಳುವವನೇ! ಭಕ್ತರಿಗೆ ಪ್ರೀತಿಯುಳ್ಳವನೇ ! ಹದಿನಾಲ್ಕು ಲೋಕಗಳನ್ನು ಹೊಟ್ಟೆಯೊಳಗಿಟ್ಟುಕೊಂಡು ರಕ್ಷಿಸುವ ಪರಮಾತ್ಮನೇ ! ಮುಕ್ತಿ-ಮೋಕ್ಷಗಳಿಗೆ ಅಧಿಪತಿ ಯಾದವನೇ! ವೇದಗಳಿಗೆ ನಿಲುಕದ, ಶಕ್ತೀದೇವಿ ಸಮೇತನಾದ ಶಿವನೇ ನಮ್ಮನ್ನು ರಕ್ಷಿಸು!.

**ಅಕ್ಷಿ ಮೂರುಳ್ಳವನೆ ಪಾಹೀ । ಪಕ್ಷಿವಾಹನ ಸಖನೆ ಪಾಹೀ ।**
**ಯಕ್ಷ ಕಿನ್ನರ ಭೂತದೊಡೆಯಾ ಪಾಹಿ ಪಾಹೆನುತಾ ॥**
**ರಕ್ಷೆ ನೀನೇ ಯಮಗೆ ಅನ್ಯವು । ರುಕ್ಷವಾಗಿದೆ ಸಕಲ ಯತ್ನ ಮು ।**
**ಮುಕ್ಷುರುದ್ಧಾರಕನೆ ಪಾಹೀ ಪಾಹಿ ಎಂದೆನುತಾ ॥೨॥**

**ಉರಗ ಭೂಷಣ ಪಾಹಿ ಪಾಹೀ । ಕರಿಯ ಚರ್ಮಾಂಬರನೆ ಪಾಹೀ ।**
**ಗಿರಿಜೆಯರಸನೆ ಗಂಗೆಮೋಹಿತ ಪಾಹಿ ಪಾಹೆನುತಾ ॥**
**ಶಿರದಿ ಶಶಿ ಭೂಷಿತನೆ ಪಾಹೀ । ತರಿದು ತ್ರಿಪುರಳಿದವನೆ ಪಾಹೀ।**
**ಮೊರೆವ ಭಕ್ತೋದ್ಧಾರ ಪಾಹೀ ಪಾಹಿಎಂದೆನುತಾ ॥೩॥**

ಶಬ್ದಾರ್ಥ - (೨,೩) ಅಕ್ಷಿ = ಕಣ್ಣು; ಪಕ್ಷಿವಾಹನ = ವಿಷ್ಣು; ಯಕ್ಷ, ಕಿನ್ನರ = ದೇವಲೋಕದ ಪ್ರಜೆಗಳು; ಯಮಗೆ = ನಮಗೆ; ರುಕ್ಷ=ಒಣಗಿದ; ಅನ್ಯ = ಬೇರೆ; ಯತ್ನ = ಪ್ರಯತ್ನ; ಮುಮುಕ್ಷು = ಪುಣ್ಯವಂತ; ಉದ್ಧಾರಕ = ಉದ್ಧಾರಮಾಡುವವ; ಉರಗ = ಹಾವು ; ಕರಿ = ಆನೆ; ಅಂಬರ = ಬಟ್ಟೆ ; ಕರಿಯ ಚರ್ಮಾಂಬರ = ಆನೆಯ ತೊಗಲನ್ನುಟ್ಟವ = ಶಿವ; ಗಿರಿಜೆಯರಸ=ಶಿವ; ಗಂಗೆಮೋಹಿತ = ಶಿವ; ಶಿರದಿ = ತಲೆಯಲ್ಲಿ; ಶಶಿ = ಚಂದ್ರ; ಭೂಷಿತ = ಧರಿಸಿದವ; ತರಿದು=ಕತ್ತರಿಸಿ; ತ್ರಿಪುರ = ಮೂರು ಪಟ್ಟಣಗಳು; ಮೊರೆ = ಆಲಾಪ.

**ಭಾವಾರ್ಥ** – ಮೂರು ಕಣ್ಣುಳ್ಳವನೇ ರಕ್ಷಿಸು! ಹರಿಯ ಸಖನೇ ರಕ್ಷಿಸು! ಯಕ್ಷ, ಕಿನ್ನರ, ಭೂತಗಳ ಒಡೆಯನೇ ಪಾಲಿಸು! ನಮಗೆ ಈಗ ನೀನೇ ಶ್ರೀ ರಕ್ಷೆಯಾಗಬೇಕೇ ಹೊರತು, ಅನ್ಯ ಮಾರ್ಗಗಳು ನಮ್ಮ ಪಾಲಿಗೆ ಮುಚ್ಚಿದಂತಾಗಿವೆ. ಎಂದು ಮುನಿಗಳು ಸ್ತುತಿ ಮಾಡಿದರು. ಹಾವುಗಳನ್ನೇ ಆಭರಣಗಳನ್ನಾಗಿ ಮಾಡಿಕೊಂಡವನೇ ರಕ್ಷಿಸು! ಆನೆಯ ಚರ್ಮವನ್ನುಟ್ಟವನೇ ರಕ್ಷಿಸು! ತ್ರಿಪುರಾಸುರರನ್ನು ನಾಶ ಮಾಡಿದ ಪರಮಾತ್ಮಾ ರಕ್ಷಿಸು!.. ಅಸಹಾಯಕರಾಗಿ ಆಲಾಪಿಸುತ್ತಿರುವ ಭಕ್ತರನ್ನು ಉದ್ಧಾರ ಮಾಡುವವನೇ ಪಾಲಿಸು'' ಎಂದು ಮುನಿಗಳು ಸ್ತುತಿಸಿದರು.

ಯಾರು ಸರಿಯಿಲ್ಲಯ್ಯ ಶಿವ ಶಿವ । ಮೀರಿದಾ ದಾತಾರ ನೀನೇ ।
ಭೂರಿ ಭೋಗಗಳಿತ್ತು ಸುರರಿಗೆ ಗರಳನೀ ಕುಡಿದೇ ॥
ಸಾರಿ ಸುಲಿದರು ದೇವ ರಾಕ್ಷಸ । ರಾರು ಬಿಡದೇ ನಿನ್ನ ಮೆಚ್ಚಿಸಿ ।
ತೂರಿ ನೀನೆಲ್ಲವನು ನಿಂತೆ ವಿರಾಗಿಯಾಗುತಲೀ ॥೪॥

ಕೊರಳ ಕತ್ತರಿಸಿದೆಯೋ ಕಟುಕನೆ। ಕರುಣೆಯಿಲ್ಲದ ಸ್ವಂತ ಕುವರನ ।
ಕರಿಯ ಶಿರ ತಂದಿರಿಸಿ ತಾಯಿಯ ಶಾಂತಿಗೊಳಿಸಿದ ನೀ ॥
ಬೆರೆತ ಭಕ್ತಿಯಲಿರೆ ಮೃಕಂಡೂ । ತಳ ಮಾರ್ಕಾಂಡೇಯುನನು ಯಮ ।
ಭರದಿ ಎಳೆದೊಯ್ವಾಗ ಆತನ ತರಿದು ಹಾಕಿದಿ ನೀ ॥೫॥

ಶಬ್ದಾರ್ಥ – (೪,೫) ದಾತಾರ = ದಾನಿ; ಭೂರಿ = ಸಮೃದ್ಧಿಯಾಗಿ; ಸಾರಿ = ಬಂದು; ಗರಳ = ವಿಷ; ವಿರಾಗಿ = ತ್ಯಾಗಿ;
ಕಟುಕ = ಕರುಣೆಯಿಲ್ಲದವ; ಕರಿ = ಆನೆ; ತರಿದು = ಕತ್ತರಿಸಿ.

ಭಾವಾರ್ಥ - ಪರಮಾತ್ಮಾ! ದಾನಕೊಡುವದರಲ್ಲಿ ನಿನ್ನನ್ನು ಮೀರಿದ ದಾತಾರರು ಜಗತ್ತಿನಲ್ಲಿ ಯಾರೂ ಇಲ್ಲ. ಆದಕ್ಕೆ ನಿನ್ನ ತ್ಯಾಗ ಬುದ್ಧಿಯೇ ಸಾಕ್ಷಿಯಾಗಿದೆ. ಯಾಕೆಂದರೆ ಉಳಿದ ದೇವತೆಗಳಿಗೂ, ಅಷ್ಟದಿಕ್ಪಾಲಕರಿಗೂ ನೀನು ಸಾಕಷ್ಟೂ ಭೋಗ, ಭಾಗ್ಯ ಐಶ್ವರ್ಯಾದಿಗಳನ್ನು ಕೊಟ್ಟು ಬಿಟ್ಟೆ. ಆದರೆ ಯಾರಿಗೂ ಬೇಡವಾದ ಕಾಲಕೂಟ ವಿಷವನ್ನು ಮಾತ್ರ ನೀನೇ ಸೇವಿಸಿ, ವಿರಾಗಿಯಂತೆ ನಿಂತು ಬಿಟ್ಟೆ. ದೇವತೆಗಳೂ, ದಾನವರೂ ನಿನ್ನನ್ನು ಮೆಚ್ಚಿಸಿ, ತಮತಮಗೆ ಬೇಕಾದ ವರಗಳನ್ನೆಲ್ಲ ಪಡೆದುಕೊಂಡು, ಸುಖಿಗಳಾದರು. ಆದರೆ ನೀನು ಮಾತ್ರ ಆ ಭಕ್ತರ ಸುಖದಲ್ಲಿಯೇ ನೆಮ್ಮದಿಗೊಂಡು, ಮಹಾದೇವನೆಂದು ಕೀರ್ತಿ ಪಡೆದೆ.

**ಹೊತ್ತು ಒಯ್ಯುಲು ಹಳೆಯ ಎತ್ತೇ। ಮತ್ತೆ ನಿನಗಾಧಾರ ವಾಗಿರೆ ।**
**ಮತ್ತ ದೈತ್ಯನ ಭಕ್ತಿಗೊಲಿಯುತಲಿತ್ತೆ ಪುಷ್ಪಕವಾ ॥**
**ಕೃತ್ತಿಯೊಳು ವಾಸಿಸುವಿ ನೀನೇ। ಮತ್ತೆ ನಿನಗಿಲ್ಲೊಂದು ಮನೆಯೂ ।**
**ಇತ್ತೆ ದೇವೇಂದ್ರನಿಗೆ ಕರುಣದಿ ಸಗ್ಗದರಮನೆಯಾ ॥ ೬॥**

ಶಬ್ದಾರ್ಥ- ಕೃತ್ತಿ = ಸ್ಮಶಾನ ; ಮತ್ತ= ಸೊಕ್ಕಿನ; ಇತ್ತೆ = ಕೊಟ್ಟೆ; ಪುಷ್ಪಕ = ಪುಷ್ಪಕ ವಿಮಾನ.

**ಭಾವಾರ್ಥ-** ಪರಮಾತ್ಮಾ! ನಿನ್ನನ್ನು ಹೊತ್ತುಕೊಂಡು ಹೋಗುವದಕ್ಕೆ ಹಳೆಯದಾದ ಎತ್ತಿನ ಹೊರತು, ಬೇರೊಂದು ಆಧಾರ ನಿನಗಿಲ್ಲ. ಆದರೂ ಸಹಿತ ಉನ್ಮತ್ತನಾದ ರಾವಣನ ಭಕ್ತಿಗೆ ಮೆಚ್ಚಿ, ನೀನು ಅವನಿಗೆ ಪುಷ್ಪಕ ವಿಮಾನವನ್ನೇ ವಾಹನಾವಾಗಿ ಕೊಟ್ಟುಬಿಟ್ಟೆ!.. ನಿನಗೆ ಇರುವದಕ್ಕೂ ಒಂದು ಮನೆಯಿಲ್ಲ. ಸದಾಸ್ಮಶಾನವಾಸಿಯಾಗಿ ಕಾಲಕಳೆಯುತ್ತಿರುವಿ!... ಹಾಗಿದ್ದರೂ ಸಹಿತ ದೇವೇಂದ್ರನ ಸದ್ಭಕ್ತಿಗೊಲಿದು ಅವನಿಗೆ ಸಿರಿ ಸಂಪತ್ತಿನಿಂದೊಡಗೂಡಿದ ಸ್ವರ್ಗದ ಅರ ಮನೆಯನ್ನೇ ದಾನವಾಗಿ ಕೊಟ್ಟು, ಬಿಟ್ಟೆ!...

**ಆವ ದೇವನು ನಿನ್ನ ತ್ಯಾಗವ । ತೀವಿ ಮೆರೆದವರಿಲ್ಲ ಜಗದೊಳು।**
**ನೋವನೇ ನೀನುಂಡು ಭಕುತರಿಗೀವಿ ನಿಜ ಸುಖವಾ ॥**
**ಭಾವ ಭಿನ್ನತೆಯಿಲ್ಲದೇ ಸದ್ । ಭಾವ ಹೊಂದಿದ ಭಕುತರೆಲ್ಲರ ।**
**ಓವಿನಿಂದಪ್ಪುವಿಯೊ ಶಂಕರ ನಿನಗೆ ಸಮರುಂಟೇ ॥೭॥**

**ಭಾವಾರ್ಥ–** ಪರಮಾತ್ಮಾ!.. ಜಗತ್ತಿನಲ್ಲಿ ಯಾವ ದೇವರೂ ನಿನ್ನಂಥಾ ತ್ಯಾಗ ಬುದ್ಧಿಯನ್ನು ಹೊಂದಿಮೆರೆದ ಉದಾಹರಣೆಗಳಿಲ್ಲ. ನೀನು ನೋವನ್ನುಂಡು ನಿನ್ನ ಭಕ್ತರಿಗೆ ಸದಾ ಸುಖವನ್ನೇ ಕೊಡುತ್ತಿರುವಿ. ಸದ್ ಭಾವನೆಯನ್ನು ಹೊಂದಿದ ಭಕ್ತರನ್ನೆಲ್ಲ, ಮೇಲು ಕೀಳೆನ್ನದೇ. ಕರೆದು ಅಪ್ಪಿಕೊಳ್ಳುತ್ತಿರುವಿ. ಅಂದ ಬಳಿಕ ''ಈ ಜಗತ್ತಿನಲ್ಲಿ ನಿನಗೆ ಸಮಾನರಾದ ತ್ಯಾಗಿಗಳಾರೂ ಇಲ್ಲವೇ ಇಲ್ಲ''. ಎಂದರೂ ತಪ್ಪಾಗಲಾರದು!.... ನೀನು ನಿನ್ನ ಸ್ವಂತ ಮಗನನ್ನೇ ಕರುಣೆಯಿಲ್ಲದೇ ಕತ್ತರಿಸಿ ಹಾಕಿದ ಕಟುಕನೆಂದು ಜನ ಹಳಿಯುತ್ತಾರೆ. ನಂತರ ಪಾರ್ವತೀ ದೇವಿಯ ಮನಶಾಂತಿಗಾಗಿ ನೀನು ಆನೆಯ ಶಿರಸ್ಸನ್ನು ಅಂಟಿಸಿ ಮಗನನ್ನು ಆನೆಯ ಮುಖದವನನ್ನಾಗಿ ಮಾಡಿ ಕೂಡ್ರಿಸಿಬಿಟ್ಟಿ. ಆದರೆ, ಅದೇ ನಿನ್ನ ಭಕ್ತನಾದ ಮೃಕಂಡೂ ಮುನಿಯ ಸುಪುತ್ರ ಮಾರ್ಕಾಂಡೇಯನು, ''ಅಲ್ಪಾಯುಷಿ ಯಾಗಿರುವನೆಂದು, '' ಯಮನು ತನ್ನ ಕರ್ತವ್ಯಕ್ಕನುಸಾರವಾಗಿ ಅವನ ಜೀವವನ್ನು ಎಳೆದೊಯ್ಯಲು ಬಂದಾಗ, ಭಕ್ತಾಭಿಮಾನಿಯಾದ ನೀನು, ಸಿಟ್ಟಿನಿಂದ ಯಮನನ್ನೇ ಸಂಹರಿಸಿ ಬಿಟ್ಟ !.. ಅಂದ ಮೇಲೆ ನಿನ್ನಂಥ ಕರುಣಾಳುಗಳೂ, ಭಕ್ತ ಪ್ರೇಮಿಯೂ, ನಿಸ್ವಾರ್ಥ ಬುದ್ಧಿಯವನೂ, ಈ ಪ್ರಪಂಚದಲ್ಲಿಯೇ ಯಾರೂ ಇಲ್ಲವೆಂದು ನಾವು ಸ್ತುತಿಸುವದರಲ್ಲಿ ತಪ್ಪೇನೂ ಇಲ್ಲವೆನಿಸುತ್ತದೆ.

**ವೇದ ಪ್ರಿಯ ನೀನೆಂಬುದೂ ಸಟೆ । ನಾದ ಪ್ರಿಯ ನೀನೆಂಬುದೂ ಸಟೆ ।**
**ವೇದ ನಾದಗಳೆರಡು ಸಾಧನ ಮಾತ್ರ ಮೆಚ್ಚುಗೆಗೆ ॥**
**ವಾದ ವಿಲ್ಲದ ಶುದ್ಧ ಭಕ್ತಿಯೆ। ಸಾಧನಾಗಿದೆ ನಿನ್ನ ಒಲುಮೆಗೆ ।**
**ಆದ ಕಾರಣ ಭಕ್ತರೆಮ್ಮನು ರಕ್ಷಿಸೈ ಶಿವನೇ ॥೮॥**

ಕಾವನೂ ನೀ ಕೊಲುವನೂ ನೀ । ಭಾವ ಶುದ್ಧಿಯೊಳಿಡುವನೂ ನೀ ।
ನಾವ ತೆರದೊಳಗಿಟ್ಟರೂ ಅದರಂತೆ ಬದುಕುವೆವೂ ॥
ಸಾವ ತಂದರು ಚಿಂತೆಯಿಲ್ಲವು । ಜೀವ ವಳಿದರು ನಿನ್ನ ತೊರೆಯೆವು ।
ದೇವ ಶರಣಾಗತರು ನಾವೆಂದೆನುತ ಪೊಡ ಮಡಲೂ ॥೯॥

ಶಬ್ದಾರ್ಥ- ಸಟೆ = ಸುಳ್ಳು; ನಾದ = ಸಂಗೀತ; ವೇದ = ಶೃತಿ; ಒಲುಮೆಗೆ = ಪ್ರೀತಿಗೆ; ತೊರೆ = ಬಿಡು; ಶರಣಾಗತ = ಶರಣುಬಂದವ; ಪೊಡಮಡು = ನಮಸ್ಕರಿಸು.

**ಭಾವಾರ್ಥ**- ಶಿವನೇ! ನಿನಗೆ ವೇದಪ್ರಿಯ ಎನ್ನುವರು! ಆದರೆ ಅದು ಸುಳ್ಳೆನಿಸುತ್ತದೆ, ಕೆಲವರು ನಿನಗೆ ನಾದ ಪ್ರಿಯ ಎನ್ನುತ್ತಾರೆ!.. ಅದೂ ಸುಳ್ಳೆನಿಸುತ್ತದೆ. ವೇದ, ಮತ್ತೂ ಸಂಗೀತಗಳು ನಿನ್ನ ಮೆಚ್ಚುಗೆ ಪಡೆಯುವದಕ್ಕೆ ಸಾಧನ ಮಾತ್ರವಾಗಿವೆಯೇ ಹೊರತು, ನೀನು ವೇದ ಪ್ರಿಯನೂ ಅಲ್ಲಾ; ನಾದಪ್ರಿಯನೂ ಅಲ್ಲಾ; ಆದರೆ ವಾದವಿಲ್ಲದ ಪರಿಶುದ್ಧ ಭಕ್ತಿಯೇ ನಿನ್ನ ಒಲುಮೆಗೆ ಅವಶ್ಯವಾಗಿದೆ. ನಾವು ನಿನ್ನ ಪರಿಶುದ್ಧ ಭಕ್ತರಾಗಿದ್ದೇವೆ. ಆ ಕಾರಣದಿಂದಾಗಿ ನೀನು ನಮ್ಮನ್ನು ರಕ್ಷಿಸು! ನಮ್ಮನ್ನು ಕಾಯುವವನೂ ನೀನೇ ಆಗಿರುವಿ; ಕೊಲ್ಲುವವನೂ ನೀನೇ ಆಗಿರುವಿ! ನಮಗೆ ಇಂಥ ಪರಿಶುದ್ಧವಾದ ಭಕ್ತಿಯನ್ನಿತ್ತವನೂ ನೀನೇ ಆಗಿರುವಿ !!!... ನೀನು ನಮ್ಮನ್ನು ಯಾವ ರೀತಿಯಿಂದ ಇಡುತ್ತೀಯೋ ಆದರಂತೆಯೇ ನಾವು ಬದುಕುವದಕ್ಕೆ ಸಿದ್ಧರಾಗಿದ್ದೇವೆ. ನೀನು ನಮಗೆ ಸಾವು ತಂದರೂ ಅದರ ಚಿಂತೆ ನಮಗಿಲ್ಲಾ! ನಮ್ಮ ಜೀವ ಹೋದರೂ ನಾವು ನಿನ್ನ ಪಾದ ಬಿಡಲಾರೆವು. ಯಾಕೆಂದರೆ ನಾವು ನಿನಗೆ ಶರಣಾಗತರಾಗಿ ಬಂದಿದ್ದೇವೆ! '' ಎಂದು ನುಡಿಯುತ್ತ ಆ ಸಪ್ತ ಮುನಿಗಳೂ ಶಿವನ ಪಾದ ಪದ್ಮಗಳನ್ನು ಹಿಡಿದುಕೊಂಡರು.

ಭಾವ ಶುದ್ಧಿಯ ಸಪ್ತ ಮುನಿಗಳ । ಧಾವಿಸೆತ್ತಿದನಾ ಮಹೇಶ್ವರ ।
ನೀವು ನನ್ನಾತ್ಮಗಳು ಎನ್ನುತ ಭರದಿ ತಬ್ಬಿದನೂ ॥
ನೋವ ನಿತ್ತವನಾವ ಪಾಪಿಯು । ನೀವು ಪೇಳಿರಿ ಅವನ ಪೆಸರಂ ।
ಭಾವಜಾಂತಕ ಭಕ್ತರಂ ಕೆಣಕಿದಗೆ ಕ್ಷಮೆಯಿಲ್ಲಾ ॥೧೦॥

ಪಾವನಾತ್ಮರೆ ನೀವು ಯನ್ನಯ । ಜೀವವಾಗಿರುತಿರಲು ತಿವಿದರೆ ।
ಹಾವು ಕಚ್ಚಿದ ತೆರದಿ ಕುಕ್ಕುವೆನವರ ನಾಮುನಿದೂ ॥
ಹೇವ ವೆನ್ನುಳು ತಳೆದನಾದರೆ । ಸಾವುದೊಂದೇ ದಾರಿ ಖಳರಿಗೆ ।
ನೋವಿನಾ ಪರಿ ಪೇಳ್ವುದೆನೆ ಸಪ್ತರ್ಷಿಪೇಳಿದರೂ ॥೧೧॥

ಶಬ್ದಾರ್ಥ- (೧೦,೧೧) ಎತ್ತು = ಎಬ್ಬಿಸು; ತಬ್ಬು = ಆಪ್ಪಿಕೋ; ಭಾವಜಾಂತಕ = ಕಾಮನನ್ನು ಕೊಂದ ಶಿವ; ಕೆಣಕು = ತಡವು; ಕುಕ್ಕು = ಕಡಿ; ಮುನಿದು = ಸಿಟ್ಟಿಗೆದ್ದು.

**ಭಾವಾರ್ಥ-** (೧೧,೧೦) ಆ ಪರಿಶುದ್ಧ ಭಾವದ ಸಪ್ತರ್ಷಿಗಳನ್ನು ಪರಮಾತ್ಮನು ಧಾವಿಸಿ ಬಂದು ಎಬ್ಬಿಸಿದನು. ಮತ್ತೂ ಅವರನ್ನು ಕುರಿತು, ''ಋಷಿಗಳೇ! ನೀವು ನನ್ನ ಆತ್ಮವಾಗಿದ್ದೀರಿ!'' ಎಂದು ಅವರೆಲ್ಲರನ್ನೂ ಗಾಢವಾಗಿ ಅಪ್ಪಿಕೊಂಡನು, ''ನಿಮಗೆ ನೋವನ್ನಿತ್ತ ಪಾಪಿಯಾರು? ಆತನ ಹೆಸರನ್ನು ಹೇಳಿರಿ!... ಶಿವಭಕ್ತರನ್ನು ಕೆಣಕಿದವನಿಗೆ, ಕ್ಷಮೆಯು ಎಂದೆಂದೂ ದೊರೆಯಲಾರದು ! ಯಾಕೆಂದರೆ ನೀವೇ ನನ್ನ ಜೀವ (ಪಂಚಪ್ರಾಣ) ರಾಗಿದ್ದೀರಿ ! ನಿಮಗೆ ತೊಂದರೆ ಕೊಟ್ಟರೆ, ನನ್ನ ಜೀವಕ್ಕೆ ತೊಂದರೆ ಕೊಟ್ಟಂತೆ !... ನಾನು ಅಂಥ ದುರಾತ್ಮರನ್ನು ಸಿಟ್ಟಿಗೆದ್ದ ಹಾವು ಕಚ್ಚಿದಂತೆ ಕುಕ್ಕಿ ಕೊಲ್ಲುವೆನು, ನನ್ನ ವಿಷಯದಲ್ಲಿ ಆ ದುರಾತ್ಮರು ಪ್ರತಿಸ್ಪರ್ಧಿಗಳಾದರೆ, ಅವರಿಗೆ ಸಾವಿನ ಹೊರತು, ಬೇರೆ ಯಾವ ದಾರಿಯೂ ಇರುವದಿಲ್ಲ. ದಯವಿಟ್ಟು ನಿಮಗೊದಗಿದ ಸಂಕಷ್ಟದ ರೀತಿಯನ್ನೂ, ಅದು ಯಾರಿಂದ ನಡೆಯಿತೆಂಬುದನ್ನೂ, ತಿಳಿಸಿ ಬಿಡಿರಿ!'' ಎಂದು ಶಿವನು ಕರುಣಾಮೂರ್ತಿಯಾಗಿ ನುಡಿಯಲು, ಅದಕ್ಕೆ ಸಪ್ತರ್ಷಿಗಳು ಹೀಗೆ ಹೇಳತೊಡಗಿದರು.

ಮಲ್ಲ ಮಣಿಕರು ಎಂಬ ದೈತ್ಯರು । ಬಲ್ಲಿದವರಾಗಿರ್ದು ಭೂತಳ ।
ವೆಲ್ಲ ಸಾಲದೆ ಸ್ವರ್ಗಲೋಕವ ಸೂರೆಗೊಂಡಿಹರೂ ॥
ಇಲ್ಲ ಜಗದೊಳಗವರ ಗೆಲ್ಲಲು । ಬಲ್ಲ ಶೂರರು ಬ್ರಹ್ಮ ವರದಿಂ ।
ಖುಲ್ಲ ದೈತ್ಯರು ಕೊಬ್ಬಿ ನಿಂದಿಹರವರ ಹಾವಳಿಯೂ ॥೧೨॥

ಏನು ಹೇಳುವದಯ್ಯ ಶಿವಶಿವ । ಹಾನಿಗೊಂಡವು ನಮ್ಮ ಆಶ್ರಮ ।
ಸೂನು ಸತಿಯರ ಗೋಳನಿಕ್ಕಿಸಿ ವೇದ ಸುಟ್ಟಿಹರೂ ॥
ಮಾನ ಕಳೆಯುತ ನಮ್ಮನೆಲ್ಲರ । ಪಾನದುದಕದಲೆದ್ದಿ ತೆಗೆದರು ।
ಧೇನ ಕೆಚ್ಚಲು ಕೊಯ್ದು ರಕುತವ ನೀಂಟಿದರು ಖಲರೂ ॥೧೩॥

ಶಬ್ದಾರ್ಥ- (೧೨,೧೩) ಬಲ್ಲಿದವರಾಗಿರ್ದು = ಬಲಾಢ್ಯರಾಗಿದ್ದು; ಭೂತಳ = ಭೂಮಂಡಲ; ಖಿಲ್ಲ = ಕೆಟ್ಟ; ಸೂನು = ಮಕ್ಕಳು; ಸತಿ = ಹೆಂಡತಿ; ಗೋಳನಿಕ್ಕಿಸು = ಗೋಳಾಡಿಸು; ಪಾನದುದಕ = ಕುಡಿಯುವ ನೀರು; ಎದ್ದಿ ತೆಗೆ = ಮುಳುಗಿಸೆಬ್ಬಿಸು; ಧೇನು = ಹಸು; ಈಂಟು=ಕುಡಿ; ಖಲ = ದುಷ್ಟ.

ಭಾವಾರ್ಥ- (೧೨,೧೩) ಭೂ ಲೋಕದಲ್ಲಿ ಮಲ್ಲಾಸುರ, ಮಣಿಕಾಸುರರೆಂಬ ಇಬ್ಬರು ದೈತ್ಯರು, ಬ್ರಹ್ಮನಿತ್ತ ವರಮುದದಿಂದ ಬಹಳಷ್ಟು ಮದೋನ್ಮತ್ತರಾಗಿದ್ದಾರೆ. ಅವರ ದಾಳಿಗೆ ಭೂಲೋಕವು ಸಾಲಲಾರದೇ, ಸ್ವರ್ಗಲೋಕವನ್ನೂ ಅವರು ಸೂರೆಗೊಂಡಿರುವರು. ಶಿವಶಿವಾ! ಅವರ ದುಷ್ಕರ್ಮಗಳನ್ನು ವರ್ಣಿಸಲಿಕ್ಕಾಗದು. ಅವರು ಒಂದು ಸಮಯದಲ್ಲಿ ನಮ್ಮ ಆಶ್ರಮಗಳಿಗೆ ನುಗ್ಗಿ, ನಮ್ಮ ಆಶ್ರಮ, ಪಾಠಶಾಲೆ, ವೇದ ಶಾಲೆಗಳನ್ನೆಲ್ಲ ನಾಶ ಮಾಡಿದರು. ನಮ್ಮ ಹೆಂಡಿರು ಮಕ್ಕಳನ್ನೆಲ್ಲ ಗೋಳಾಡಿಸಿದರು. ಪವಿತ್ರವಾದ ವೇದ ಮಂತ್ರಗಳನ್ನು ಸುಟ್ಟು ಹಾಕಿದರು, ನಮ್ಮ ಕೊರಳಿಗೆ ಉರುಲು ಹಾಕಿ, ಕುಡಿಯುವ ನೀರಿನ ಬಾವಿಯಲ್ಲಿ ನಮ್ಮನ್ನೆಲ್ಲ ಮುಳುಮುಳುಗಿಸಿ ಎಬ್ಬಿಸಿದರು. ಕಾಮಧೇನುಗಳಂಥ ನಮ್ಮ ಆಕಳುಗಳ ಕೆಚ್ಚಲು ಕೊಯ್ದು, ಆ ರಾಕ್ಷಸರು ರಕ್ತಪಾನ ಮಾಡಿದರು.

ಡಿಕ್ಕಿಯಾಡಿಸಿ ತಲೆಗಳೊಡೆದರು । ಮಿಕ್ಕಿದಾಶ್ರಮ ವಟುಗಳೆಲ್ಲರ।
ಕುಕ್ಕಿ ಕಡಿದರು ವೃಕ್ಷ ತರುಲತೆ ಧ್ವಂಸ ಮಾಡಿದರೂ ॥
ಮಿಕ್ಕಿದಾ ನೋವುಗಳ ತಾಳದೆ । ಇಕ್ಕಲಾರದೆ ಅಳುಕಿ ಶಾಪವ ।
ರಕ್ಕಸಾರಿ ಸಮೇತ ನಿನ್ನನೆ ನಂಬಿ ಬಂದಿಹೆವೈ ॥೧೪॥

**ಎಂದು ನುಡಿಯುತ ಸಪ್ತಮುನಿಗಳು । ನಿಂದು ಸಾಷ್ಟಾಂಗದಲಿ ನಮಿಸಲು ।**
**ಕಂದುಗೊರಳನ ಹೃದಯ ತಳಮಳ ಗೊಂಡಿತಾಕ್ಷಣದೀ ॥**
**ಬಂದ ಬವಣೆಯ ನಂದಿಸುವೆ ನಾ। ನಂದದಿಂದಿರಿ ನಿಂದು ನೋಡಿರಿ ।**
**ಮುಂದಿನಾವಸ್ಥೆಯನು ದೈತ್ಯರದೆಂದು ಬೆಸಗೊಂಡಾ ॥೧೫॥**

**ಶಬ್ದಾರ್ಥ**- (೧೪,೧೫) ತರು = ಗಿಡ; ಲತೆ = ಬಳ್ಳಿ; ಧ್ವಂಸಮಾಡು = ಹಾಳುಮಾಡು; ಮಿಕ್ಕಿದ = ಮೀರಿದ; ರಕ್ಕಸಾರಿ = ವಿಷ್ಣು; ಕಂದುಗೊರಳ = ಶಿವ; ತಳಮಳಗೊಳ್ಳು = ಅಲ್ಲೋಲಕಲ್ಲೋಲವಾಗು ; ನಂದಿಸು = ಶಾಂತಗೊಳಿಸು; ಮುಂದಿನಾವಸ್ಥೆ = ಮುಂದಾಗುವ ಪರಿಣಾಮ; ಬೆಸೆ = ಹೇಳು.

**ಭಾವಾರ್ಥ**- ಪರಮಾತ್ಮಾ! ಅ ರಾಕ್ಷಸರು ಆಶ್ರಮದಲ್ಲಿದ್ದ ಬಹಳಷ್ಟು ಬಾಲವಟುಗಳನ್ನು ಒಬ್ಬರಿಂದೊಬ್ಬರಿಗೆ ಡಿಕ್ಕೀ ಹೊಡಿಸಿ, ಅದೆಷ್ಟೋ ಬ್ರಹ್ಮಚಾರಿಗಳ ತಲೆಗಳನ್ನೊಡೆದರು. ಆ ಶ್ರಮದಲ್ಲಿದ್ದ ಗಿಡಬಳ್ಳಿಗಳನ್ನೆಲ್ಲ , ತಮ್ಮ ಖಡ್ಗಗಳಿಂದ ಕತ್ತರಿಸಿ ಚಲ್ಲಾಪಿಲ್ಲಿಮಾಡಿದರು. ನಮಗೆ ತಾಳ್ಮೆ ಮೀರಿದ ನೋವು ಕೊಟ್ಟ ಆ ದೈತ್ಯರನ್ನು ಶಪಿಸಿ ಸುಟ್ಟು ಹಾಕೋಣವೆಂದರೆ, ನಮ್ಮ ತಪೋಭಂಗವಾಗುವದಲ್ಲಾ ಎಂಬ ಅಳುಕಿನಿಂದ ನಾವು ಅವರಿಗೆ ಶಾಪವನ್ನೂ ಕೊಡಲಿಲ್ಲ. ಆ ರಾಕ್ಷಸರ ಸೊಕ್ಕನ್ನಡಗಿಸಲು ನಾವೀಗ ಶ್ರೀ ಹರಿ ಸಮೇತರಾಗಿ, ನಿನ್ನನ್ನೇ ನಂಬಿಕೊಂಡು ಬಂದಿದ್ದೇವೆ. ಎಂದು ನುಡಿಯುತ್ತ ಆ ಸಪ್ತರ್ಷಿಗಳು ಪುನಃ ಪುನಃ ಶಿವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಆಗ ಭಕ್ತ ವತ್ಸಲನಾದ ಶಿವನ ಹೃದಯವು, ಆ ಭಕ್ತರಿಗಾದ ಅವಸ್ಥೆ ತಿಳಿದು, ಅಲ್ಲೋಲ ಕಲ್ಲೋಲವಾಯಿತು. ಆತನು ಆ ಸಪ್ತ ವಿಪ್ರರನ್ನು ಕುರಿತು, ''ಯತಿಗಳೇ! ನಿಮಗೀಗ ಬಂದೊದಗಿದ ಬವಣೆಯನ್ನು ನಾನು ಈ ಕ್ಷಣದಲ್ಲಿಯೇ ನಿರ್ನಾಮ ಮಾಡುತ್ತೇನೆ. ನೀವಿನ್ನು ಆನಂದದಿಂದ ನಿಂತು ನೋಡಿರಿ ! ಆ ದುಷ್ಟ ರಾಕ್ಷಸರಿಗೆ ಮುಂದೆ ಎಂಥೆಂಥ ಪರಿಸ್ಥಿತಿಗಳು ಬಂದೊದಗುತ್ತಿವೇ ಎಂಬುದನ್ನು ಕಣ್ಣಾರೆ ಕಂಡು ಸಂತೋಷ ಪಡಿರಿ!'' ಎಂದು ಆ ಏಳೂ ಜನ ವಿಪ್ರೋತ್ತಮರಿಗೆ ಅಭಯವನ್ನಿತ್ತನು.

ಇತಿ ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್. ಜೋಶೀ ವಿರಚಿತ ಮ್ಹಾಲಾಸಾ ಮಾರ್ತಾಂಡ ಭೈರವ ಪುರಾಣದೋಳ್,
"ಶಿವಪಾರ್ವತೀ ಸ್ತುತಿ" ನಾಮಕ ಅಷ್ಟಮೋಧ್ಯಾಯಃ ||
ಅಂತು ಅಧ್ಯಾಯ ೮ಕ್ಕಂ, ಪದ ೧೫೩ಕ್ಕಂ, ಒಟ್ಟು ಪದ ೧೩೦ಕ್ಕಂ, ಮಂಗಲ ಮಸ್ತು.

ಏಳು ಕೋಟಿಗ! ಏಳು ಕೋಟಿಗ!! ಏಳು ಕೋಟಿಗೋ!!! ಸಾಂಗಬಲೋ!...



# ಅಧ್ಯಾಯ-೯ (ನವಮೋಽಧ್ಯಾಯಃ) ಘೃತಮಾರೀ ಉತ್ಪತ್ತಿ

ಸೂಚನೆ



**ಮೃಡನು ಕೋಪದಿ ಜಡೆಯ ಕೊಡವಲ್।**
**ಜಡೆಯೊಳುದ್ಭವಿಸಿದಳು ಮಾರಿಯು ।**
**ಮೃಡನ ಸೂಚನೆಯಂತೆ ಘೃತದಿಂ ಗೈದರಬಿಷೇಕ ॥**



ಅರ್ಥ- ಶಿವನು ಕೋಪದಿಂದ ತಲೆ ಕೊಡಹಿದಾಗ ಅವನ ಜಡೆಯೊಳಗಿಂದ ಕರಾಳ ರೂಪದ ಮಾರಿಯೊಬ್ಬಳು ಅವತಾರ ತಾಳಿ ನಿಂತಳು. ಆಗ ಶಿವನು ಆ ಮಾರೀ ದೇವಿಗೆ ತುಪ್ಪದಿಂದ ಅಭಿಷೇಕ ಮಾಡಿರೆಂದು ಯತಿಗಳಿಗೆ ತಿಳಿಸಿದನು. ಆ ಮಾರಿಯು ತುಪ್ಪದ ಅಭಿಷೇಕದಿಂದ ಸಂತೃಪ್ತಿಗೊಂಡ ಘೃತಮಾರಿ ("ತುಪ್ಪದ ಮಾಳವ್ವ) ಎಂಬ ಹೆಸರಿನಿಂದ ಪ್ರಸಿದ್ಧಳಾದಳು, ಈ ವಿಷಯವು ಮುಂದಿನ ನುಡಿಗಳಲ್ಲಿ ಬರುತ್ತಿದೆ ಎಂಬುದನ್ನು ಸೂಚಿಸಿ, ಕವಿಯು ತನ್ನ ಕಥಾನಕವನ್ನು ಮುಂದು ವರಿಸ್ತಾ ಇದ್ದಾನೆ.

**ಗುಡುಗಿದನು ಶಿವ ಸಿಂಹ ನಾದದಿ । ಪೊಡವಿ ಗದಗದ ನಡುಗಿ ಹೋಯಿತು ।**
**ಜಡೆಯ ನಪ್ಪಳಿಸಿದನು ಕ್ರೋಧದಿ ಜಲಧಿಯುಕ್ಕಿದವೂ ॥**
**ಜಡಿದ ಸಪ್ಪಳ ಸಿಡಿಲ ಮೀರಿತು । ಒಡನೆ ಉದ್ಭವಿಸಿದಳು ಎದುರಲಿ ।**
**ಮೃಡನ ಮಾನಸೆಯಾಗಿ ದೈತ್ಯಾಕಾರದಲಿ ದುರ್ಗೀ ॥೧॥**

ಗುಡುಗಿದಳು ಬಾಯ್ದೆರೆದು ಭಲಿರೆನೆ। ಸಿಡಿಲು ಸಿಡಿದಂತಾಯ್ತು ದಿಗ್ತಟ ।
ನಡುಗಿದವು ದಿಗ್ಗಜಗಳೆಲ್ಲವು ಗದಗದಾಎನುತಾ॥
ಒಡೆಯ ಪೇಳೇನಪ್ಪಣೆಯು ಜವ । ದಿಡುವೆ ತುತ್ತಾಗಿಸುತ ಮುಖ ದೊಳು ।
ಒಡವನಾವನು ನಿನ್ನ ತಡಹಿದನೊಡನೆ ನುಂಗುವೆನೂ ॥೨॥

ಶಬ್ದಾರ್ಥ- ಗುಡುಗು = ಆರ್ಭಟಿಸು; ಅಪ್ಪಳಿಸು=ಬಡಿ; ಜಲಧಿ = ಸಮುದ್ರ ; ಮಾನಸೆ =ಮಾನಸಪುತ್ರಿ;
ದುರ್ಗಿ = ದುರ್ಗಾದೇವತೆ; ದೈತ್ಯಾಕಾರ= ಭಯಂಕರ ರೂಪ; ದಿಗ್ತಟ = ದಿಗಂತ; ದಿಗ್ಗಜ = ದಿಕ್ಕುಗಳನ್ನು ಹೊತ್ತ ಆನೆಗಳು ;
ಜವದಿ = ತೀವ್ರವಾಗಿ; ಮುಖದೊಳು=ಬಾಯಲ್ಲಿ; ತಡಹು = ತೊಂದರೆ ಕೊಡು,

**ಭಾವಾರ್ಥ-** ಶಿವನು ಕೋಪೋದ್ರಿಕ್ತನಾಗಿ ಭಯಂಕರವಾದ ಗರ್ಜನೆ ಮಾಡಿದನು. ಆ ಸಪ್ಪಳಕ್ಕೆ ಭೂಮಂಡಲವು ಗದಗದ ನಡುಗಿ ಹೋಯಿತು. ಆತನು ಕೋಪದಿಂದ ತನ್ನ ಜಡೆಯನ್ನು ನೆಲಕ್ಕಪ್ಪಳಿಸಿದನು. ಆ ಆಘಾತದಿಂದಾಗಿ ಸಮುದ್ರಗಳ ನೀರು ಅಲ್ಲೋಲ ಕಲ್ಲೋಲವಾಯಿತು. ಸಿಡಿಲನ್ನೂ ನಾಚಿಸುವ ಆ ಶಬ್ದದೊಂದಿಗೆ, ಶಿವನ ಜಡೆಯಿಂದ ಆತನ ಮಾನಸ ಪುತ್ರಿಯೆನಿಸುವ ದುರ್ಗಿಯೊಬ್ಬಳು, ದೈತ್ಯಾಕಾರ ತಾಳಿ ಶಿವನೆದುರಿನಲ್ಲಿ ಕೈ ಮುಗಿದು ನಿಂತಳು. ಅವಳು ತನ್ನ ವಿಶಾಲವಾದ ಬಾಯ್ದೆರೆದು, ''ಭಲೆಭಲೇ!'' ಎಂದು ಗರ್ಜನೆ ಮಾಡಿದಳು, ಆ ಗರ್ಜನೆಯು ಸಿಡಿಲಿಗಿಂತ ಮಿಗಿಲಾಗಿತ್ತು. ಆ ಸಪ್ಪಳದಿಂದಾಗಿ ದಿಗಂತದಲ್ಲಿ ಭೂಮಿಯನ್ನು ಹೊತ್ತು ನಿಂತುಕೊಂಡಿದ್ದ ಆನೆಗಳೆಲ್ಲ, ಭೀತಿಯಿಂದ ಗದಗದ ನಡುಗಿ ಹೋದವು. ಆ ಮಾರಿಯು ಶಿವನಿಗೆ ಕೈ ಮುಗಿದು, ''ಒಡೆಯಾ! ನಿನ್ನ ಅಪ್ಪಣೆಯೇನು ಬೇಗ ಹೇಳು? ನಿನಗೆ ಯಾವ ದೈವಹೀನನು ತೊಂದರೆ ಕೊಟ್ಟನೋ ಅವನನ್ನು ತತ್‌ಕ್ಷಣವೇ ನನ್ನ ಬಾಯಿಗಿಟ್ಟುಕೊಂಡು ನುರಿಸಿ ನುಂಗಿಬಿಡುವೆ''

ಸುಡಲೆ ಬ್ರಹ್ಮಾಂಡವನು ಮೇಣ್‌ಬಾಯ್। ಗಿಡಲೆ ದಿವಿಜರ ನುಂಗಲೇನಾ ।
ಸುಡಲೆ ಕಣ್ಣೋಟದಲಿ ದೈತ್ಯರ ಎನುತ ಬೊಬ್ಬಿರಿದೂ ॥
ಧೃಡದ ತೋಳ್ ಸಾಹಸ್ರ ಕ್ಷುಣಿಸುತ । ಹಿಡಿದ ಆಯುಧಗಳನು ಝಳಪಿಸೆ।
ಒಡನೆ ಓಡಿದರಯ್ಯ ಮುನಿಗಳು ಶಿವನ ಹಿಂಬದಿಗೇ ॥೩॥

**ಭಾವಾರ್ಥ-** "ಒಡೆಯಾ! ಪರಮಾತ್ಮಾ!... ಬೇಗ ಅಪ್ಪಣೆ ಕೊಡು !... ಈ ಬ್ರಹ್ಮಾಂಡವನ್ನು ಸುಟ್ಟು ಹಾಕಿಬಿಡಲೋ?... ದೇವತೆಗಳನ್ನು ನುಂಗಬೇಕೋ? ಅಥವಾ ನನ್ನ ಕಣ್ಣಿನ ಕಿಡಿಗಳಿಂದ ಯಾವುದಾದರೂ ದೈತ್ಯರನ್ನು ಸುಟ್ಟು ಹಾಕಬೇಕಾಗಿದೆಯೋ? " ಎಂದು ಆರ್ಭಟಿಸುತ್ತ ತನ್ನ ಸಹಸ್ರ ಬಾಹುಗಳಲ್ಲಿಯ ವಿಧ ವಿಧದ ಆಯುಧಗಳನ್ನು ಝುಳಪಳಿಸುತ್ತಾ ಪ್ರಶ್ನೆ ಮಾಡಿದಾಗ, ಮುನಿಗಳು ಅಂಜಿಕೆಯಿಂದಾಗಿ ಶಿವನ ಹಿಂಬದಿಗೆ ಓಡಿಹೋಗಿ ಅಡಗಿ ನಿಲ್ತಾರೆ.

ದುಡಿಕಿದರೆ ದೈತ್ಯಾಧಮರುಮ। ತ್ತೊಡೆಯ ಪೇಳ್ ಪರಿಹಾಸ್ಯ ಗೈದರೆ ।
ಮಿಡುಕಿಸಿದರೇ ನಿನ್ನ ದಿವಿಜರು ಮಾನವಾದಿಗಳೂ ॥
ಇಡುವುದಪ್ಪಣೆ ಸುಡುವೆನೆನ್ನುತ । ಒಡನೆ ಬಾಯ್ದೆರೆಯಲ್ಕೆ ದಿವಿಜರು ।
ಮೃಡನ ಮರೆಗೋಡಿದರು ಸುಮನಸ ವೃಂದ ಜಪ್ಪಿಸುತಾ ॥೪।

ಧಾರುಣೀ ಸಮ ಬಾಯದೆರೆಯುತ । ಕೋರೆ ಹಲ್ಲನು ಕಡಿದು ಕಟಕಟ ।
ವಾರೆ ಗಣ್ಣಿನ ನೋಟದಲಿ ಕೆಂಗಿಡಿಯ ತಾ ಸುರಿಸೇ ॥
ಧೀರ ದಿವಿಜರು ಬೆಚ್ಚಿ ಮೂತ್ರಿಸಿ । ಚಾರು ಚಲ್ಲಣ ನೆನಿಸಿಕೊಂಡರು ।
ಘೋರ ರೂಪದ ಮೃಡನ ಮಾನಸ ಪುತ್ರಯನು ಕಂಡೂ ॥೫॥

ಶಬ್ದಾರ್ಥ- (೪,೫) ದೈತ್ಯಾಧಮ = ಕೆಟ್ಟ ರಾಕ್ಷಸ; ಒಡೆಯ = ಯಜಮಾನ; ಪೇಳ್ = ಹೇಳು; ಗೈ = ಮಾಡು; ಮಿಡುಕಿಸು = ಗೋಳು ಹೊಯ್ಯು; ದಿವಿಜ = ದೇವತೆಗಳು; ಮಾನವ = ಮನುಷ್ಯ; ಮೃಡ = ಶಿವ; ಸುಮನಸ = ದೇವತೆಗಳು ; ವೃಂದ = ಗುಂಪು; ಜಪ್ಪಿಸು = ತಪ್ಪಿಸು; ಧಾರುಣ = ಭೂಮಿ; ಚಲ್ಲಣ = ಚಡ್ಡಿ; ನೆನಿಸಿಕೊಂಡರು = ತೋಯಿಸಿಕೊಂಡರು; ಘೋರರೂಪದ = ವಿಕಾರಾಕೃತಿಯ

**ಭಾವರ್ಥ-** (೪,೫) ಕೆಟ್ಟ ರಾಕ್ಷಸರೇನಾದರೂ ನಿನಗೆ ನಿಂದೆಯಾಡಿದರೇ? ಅಥವಾ ಹಾಸ್ಯಮಾಡಿದರೇ? ಇಲ್ಲವೇ ನಿನ್ನನ್ನು ಗೋಳು ಹೊಯ್ದುಕೊಂಡರೇ? ಅಥವಾ ದೇವತೆಗಳಾಗಲೀ, ಮಾನವರಾಗಲೀ ನಿನಗೆ ಹಾಗೆ ಮಾಡಿದ್ದರೆ ಹೇಳು! ಅವರನ್ನು ತಕ್ಷಣವೇ ಸುಟ್ಟು ಬಿಡುತ್ತೇನೆ. ಎನ್ನುತ್ತ ದೊಡ್ಡದಾಗಿ ಬಾಯಿ ತೆರೆಯಲು, ದೇವತೆಗಳು ಅಂಜಿ ಮಹಾದೇವನ ಮರೆಗೆ ಓಡಿಹೋಗಿ, ಜಪ್ಪಿಸಿಕೊಂಡು ಆ ಮಾರಿಯ ಅದ್ಭುತ ರೂಪವನ್ನೇ ನೋಡುತ್ತ ನಿಂತರು. ಭೂಮಿಯಗಲದ ಬಾಯನ್ನು, ಕಟಕಟನೇ ಕಡಿಯುತ್ತಿರುವ ಕೋರೆ ಹಲ್ಲುಗಳನ್ನು, ಕೆಂಗಣ್ಣಿನಿಂದ ಕಿಡಿಕಾರುತ್ತಿರುವ ಆ ಶಿವ ಮಾನಸ ಪುತ್ರಿಯನ್ನು ಕಂಡು, ಧೀರರೆಂದೆನಿಸಿಕೊಂಡಿದ್ದ ಮಹಾ ಮಹಾ ದೇವತೆಗಳು ನಿಂತಲ್ಲಿಯೇ ಮೂತ್ರ ಹೊಯ್ದುಕೊಂಡು ತಮ್ಮ ಸುಂದರವಾಗಿದ್ದ ಚಡ್ಡಿ (ಚಲ್ಲಣ)ಗಳನ್ನು ತೋಯಿಸಿಕೊಂಡು ಬಿಟ್ಟಿದ್ದರು.

**ಬಳಿಕಲುಸುರಿದಾನಾ ಮಹೇಶ್ವರ । ಕುಳಿತುಕೋ ಮಮ ತನುಜೆಯೆನ್ನುತ ।**
**ಇಳೆಯ ದೈವತರಿಂದ ಘೃತಸ್ನಾನವನು ಮಾಡಿಸಿದಾ॥**
**ಅಳಿಯಿತಲ್ಲಿಗೆ ಘೋರ ರೂಪವು । ತಳೆದಳಾಕ್ಷಣ ಶಾಂತರೂಪವ ।**
**ಉಲಿಪುದೊಡೆಯಾಯನ್ನ ಕರ್ತವ್ಯವನು ಪೇಳೆನಲೂ ॥೬॥**

ಶಬ್ದಾರ್ಥ- ಮಹೇಶ್ವರ = ಶಿವ; ಮಮ=ನನ್ನ; ತನುಜೆ = ಮಗಳು; ಘೃತಸ್ನಾನ=ತುಪ್ಪದಿಂದ ಅಭಿಷೇಕ ಮಾಡಿಸುವದು; ಇಳೆಯದೈವತ = ಬ್ರಾಹ್ಮಣರು; ಅಳಿ = ನಾಶವಾಗು ; ತಳೆ = ತಾಳು; ಉಲಿಪುದು = ಹೇಳುವುದು.

**ಭಾವಾರ್ಥ-** ನಂತರ ಶಿವನು ಆ ಮಾರೀ ದೇವಿಯನ್ನು ಕುರಿತು, ''ಮಗಳೇ ಕುಳಿತುಕೋ'' ಎಂದು ಪ್ರೀತಿಯಿಂದ ನುಡಿದು, ಆ ಬ್ರಾಹ್ಮಣರಿಂದ ಆ ಮಾರೀ ದೇವಿಗೆ ತುಪ್ಪದಿಂದ ಅಭಿಷೇಕ ಮಾಡಿಸಿದನು. ತಕ್ಷಣವೇ ದೇವಿಯ ಕ್ರೂರ ರೂಪವು ಮಾಯವಾಗಿ, ಅವಳು ಶಾಂತಳಾದಳು. ಮತ್ತೂ ಶಿವನನ್ನು ಕುರಿತು, ''ತಂದೆಯೇ! ನನ್ನ ಕರ್ತವ್ಯವೇನೆಂಬುದನ್ನು ಆಜ್ಞೆ ಮಾಡಬೇಕು!'' ಎಂದು ಬಿನ್ನೈಸಿ ಕೊಂಡಳು.

ಮಲ್ಲ ಮಣಿಕಾಸುರರು ಮಣಿಚೂಲ್ । ದಲ್ಲಿ ಋಷಿಗಳ ಕಾಡುತಿಪ್ಪರು ।
ಅಲ್ಲಿ ನೀನುದಿಸುವದು ಘೃತಮಾರೆಂಬ ನಾಮದಲೀ ॥
ಸಲ್ಲೆ ಪಿಡಿಯುತ ಗೌರಿ ಬಪ್ಪಳು । ಬಲ್ಲಿದಾಶ್ವದ ಬೆನ್ನನೇರುತ।
ಮಲ್ಲ ಮಣಿಕರ ಕೊಲ್ಲಲೋಸುಗ ನಾನು ಇಳೆಗಿಳಿವೆ ॥೭॥

ಬಂದ ದೈತ್ಯರ ತಿಂದು ತೇಗುವ । ದೆಂದು ಶಿವನಾಣತಿಯನಿಕ್ಕಲು।
ತಂದೆ ಸೈಸೈ ಎನುತ ನಡೆದಳು ಗಾಳಿಯಂದದಲೀ ॥
ಚಂದದಾ ಮಣಿಚೂಲ ಪರ್ವತ । ದಂದವನು ನೋಡುತ್ತಲಲ್ಲಿಯೆ।
ನಿಂದು ಶಿವ ದಾಳಿಂಗೆ ಸಮಯವ ಕಾಯತೊಡಗಿದಳು ॥೮॥

ಶಬ್ದಾರ್ಥ- ಉದಿಸು = ಹುಟ್ಟು; ಸಲ್ಲೆ = ಬರ್ಚಿ; ಗೌರಿ = ಪಾರ್ವತಿ; ಇಳೆಗಿಳಿ = ಅವತಾರ ತಾಳು; ಅಣತಿ = ಅಪ್ಪಣೆ; ದಾಳಿ =ಯುದ್ಧ.

**ಭಾವಾರ್ಥ-** ಆಗ ಶಿವನು "ಮಗಳೇ! ಭೂಮಿಯ ಮೇಲಿನ ಮಣಿಚೂಲ ಪರ್ವತ ಪ್ರದೇಶದಲ್ಲಿ ಮಲ್ಲಾಸುರ ಮಣಿಕಾಸುರ ರೆಂಬ ದೈತ್ಯರು ಹುಟ್ಟಿಕೊಂಡು, ಋಷಿಗಳನ್ನು ಕಾಡುತ್ತಿದ್ದಾರೆ. ಆದಕ್ಕಾಗಿ ನೀನು ಅಲ್ಲಿ ಘೃತಮಾರಿಯೆಂಬ ಹೆಸರಿನಿಂದ ಅವತಾರ ತಾಳು! ಮಲ್ಲ ಮಣಿಕರನ್ನು ಕೊಲ್ಲುವದಕ್ಕಾಗಿ, ನಾನೂ ಭೂಮಿಯಲ್ಲಿ ಅವತರಿಸುತ್ತೇನೆ. ನನ್ನೊಂದಿಗೆ ಕೈಯ್ಯಲ್ಲಿ ಭರ್ಚಿಯನ್ನು ಹಿಡಿದುಕೊಂಡು ಗೌರಿಯೂ ಗಂಗೆ ಮಾಳವ್ವನೆಂಬ ಹೆಸರಿನಿಂದ ಅವತರಿಸುವಳು. ನಾವಿಬ್ಬರೂ ಬಲವಾದ ಕುದುರೆಯ ಬೆನ್ನೇರಿಕೊಂಡು ದೈತ್ಯರೊಂದಿಗೆ ಯುದ್ಧ ಮಾಡುವೆವು. ಆ ವೇಳೆಯಲ್ಲಿ, ನೀನೂ ದೈತ್ಯರೊಂದಿಗೆ ಹೋರಾಡಿ ನಿನ್ನ ಪರಾಕ್ರಮ ತೋರಿಸು. ಯುದ್ಧಕ್ಕೆ ಬಂದ ದೈತ್ಯರನ್ನು, ನೀನಾಗ ತಿಂದು ತೇಗು!" ಎಂದು ಶಿವನು ಅಪ್ಪಣೆಯನ್ನಿತ್ತ ಕೂಡಲೇ, ಘೃತಯಾರಿಯು ಆನಂದದಿಂದ

"ಹಾಗೇ ಆಗಲಿ ತಂದೇ" ಎಂದು ಒಪ್ಪಿಕೊಂಡು, ಗಾಳಿಯಂತೆ ಮಣಿಚೂಲ ಪರ್ವತದತ್ತ ಹೊರಟೇ ಬಿಟ್ಟಳು, ಮತ್ತೂ ಭೂಮಿಗೆ ಬಂದು, ಮಣಿಚೂಲ ಪರ್ವತದ ಸೌಂದರ್ಯವನ್ನು ನೋಡುತ್ತ, ಅಲ್ಲಿಯೇ ಉಳಿದುಕೊಂಡು, ಶಿವನು ದೈತ್ಯರ ಮೇಲೆ ದಾಳಿಎಬ್ಬಿಸಿಕೊಂಡು ಬರುವ ಸಮಯವನ್ನು ನಿರೀಕ್ಷಿಸ ತೊಡಗಿದಳು.

**ಇತಿ ಸಾಹಿತ್ಯರತ್ನಾಕರ ಶ್ರೀ ನಿಂಗಭಟ್. ಜೋಶಿ ವಿರಚಿತ ಮ್ಹಾಲಾಸಾ ಮಾರ್ತಾಂಡ ಭೈರವ ಪುರಾಣದೋಳ್**
**"ಘೃತಮಾರೀ ಉತ್ಪತ್ತಿ" ನಾಮಕ ನವವೋಧ್ಯಾಯಃ ॥**
**ಅಂತು ಅಧ್ಯಾಯ ೯ಕ್ಕಂ, ಪದ ೮ಕ್ಕಂ, ಒಟ್ಟು ಪದ ೧೩೮ ಕ್ಕಂ, ಮಂಗಲಮಸ್ತು!...**

**ಏಳು ಕೋಟಿಗ !     ಏಳುಕೋಟಿಗ!!     ಏಳು ಕೋಟಿ ಗೋ !!!...     ಸಾಂಗಬಲೋ!...**

**@@@@@**

# ಅಧ್ಯಾಯ-೧೦ ದಶವೋಧ್ಯಾಯಃ ॥ ಮಾರ್ತಾಂಡ ಭೈರವಾವತಾರ



ಸೂಚನೆ:-

**ಶಿವನು ಶ್ರೀ ಮಾರ್ತಾಂಡ ಭೈರವ ।**
**ಶಿವೆಯು ಮಾಲತಿಯಾಗಿ ಭರದಲಿ।**
**ಭುವಿಗೆ ಹೊರಟರು ಏಳು ಕೋಟೀ ಸೈನ್ಯ ಸಹಿತದಲೀ ॥**

ಅರ್ಥ - " ಶಿವನು ಮಾರ್ತಾಂಡ ಭೈರವ ನಾಗಿಯೂ, ಪಾರ್ವತಿಯು ಮಾಲತಿಯಾಗಿಯೂ, ಏಳುಕೋಟಿ ಸೈನಿಕರನ್ನೊಡಗೂಡಿ ಭೂಮಿಗೆ ಹೊರಟರು". ಎಂಬುದನ್ನು ಸೂಚಿಸುತ್ತ ಕವಿಯು ಮುಂದಿನ ಕಥಾನಕವನ್ನು ಈ ರೀತಿಯಾಗಿ ಬಣ್ಣಿಸ್ತಾ ಇದ್ದಾನೆ.

**ಮೃಡನು ಭೈರವ ರೂಪ ತಾಳ್ದನು । ಒಡನೆ ಸತಿ ಮಾಲತಿಯು ಆದಳು।**
**ಬೆಡಗಿನಿಂದೇರಿದರು ಶ್ವೇತಾಶ್ವವನು ಹೂಂಕರಿಸೀ ॥**
**ಹಿಡಿದನ್ನೈ ಶಿವ ಶೂಲ ಡಮರುಗ । ಎಡದ ಹಸ್ತದಿ ಪಾನ ಪಾತ್ರೆಯ ।**
**ಜಡಿದ ಕೊರಳಿಗೆ ರುಂಡ ಮಾಲೆಯ ರುದ್ರ ಭೀಷಣದಾ ॥೧॥**

**ಜರಿಯ ಪೀತಾಂಬರದ ಮೇಲ್ಗಡೆ । ಕರಿಯ ಚರ್ಮವ ಸುತ್ತಿ ಧರಿಸುತ ।**
**ಸರುವ ಅಂಗದಿ ಭಸ್ಮ ಭಂಡಾರಗಳ ತಾಧರಿಸೀ ॥**
**ಗಿರಿಜೆ ಮಾಲತಿಯಾಗಿ ಸಬಳವ । ಕರದಿ ಪಿಡಿಯುತ ವೀರ ವೇಷವ ।**
**ಧರಿಸಿ ಶಿವನೊಡಗೂಡಿ ಹೊರಟಳು ದೈತ್ಯ ವಧೆಗಾಗೀ ॥೨॥**

ಶಬ್ದಾರ್ಥ - ಮೃಡ = ಶಿವ; ಸತಿ = ಪಾರ್ವತಿ; ಶ್ವೇತಾಶ್ವ = ಬಿಳೀ ಕುದುರೆ; ಶೂಲ = ತ್ರಿಶೂಲ ;
ಡಮರುಗ = ಬುಡುಬುಡಿಕೆ ; ಪಾನಪಾತ್ರೆ = ಕುಡಿಯುವ ಪಾತ್ರೆ ; ರುಂಡ ಮಾಲೆ = ತಲೆಬುರುಡಿಗಳ ಹಾರ; ಕರಿ = ಆನೆ ;
ಭಂಡಾರ = ಅರಿಪಿಣ ಬಣ್ಣದ ಪುಡಿ; ಅಂಗ = ಅವಯವ ; ವಧೆ = ಕೊಲ್ಲು

ಭಾವಾರ್ಥ - (೧.೨) ಶಿವನು ಭೈರವ ರೂಪವನ್ನು ಧಾರಣೆ ಮಾಡಿದನು. ಕೂಡಲೇ ಆತನ ಸತಿಯಾದ ಪಾರ್ವತಿಯು ಮಾಲತೀ ರೂಪ ಧಾರಣೆ ಮಾಡಿದಳು. ಅವರಿಬ್ಬರೂ ವೈಭವದಿಂದ ಬಿಳೀ ಕುದುರೆಯ ಬೆನ್ನ ಮೇಲೆ ಹತ್ತಿ ಹೂಂಕರಿಸಿದರು. ಶಿವನು ತ್ರಿಶೂಲ ಖಡ್ಗ ಗಳನ್ನು ಬಲದೋಳಿನಲ್ಲಿಯೂ, ಎಡಗಡೆಯ ಎರಡು ಹಸ್ತ ಗಳಲ್ಲಿ ಬುಡಬುಡಿಕೆ ಮತ್ತೂ ಪಾನ ಪಾತ್ರೆಗಳನ್ನು ಧರಿಸಿದ್ದನು. ಕೊರಳಲ್ಲಿ ಭೀಕರವಾದ ರುಂಡ ಮಾಲೆಯನ್ನು ಧರಿಸಿದ್ದನು. ಜರಿಯ ಪೀತಾಂಬರವನ್ನು ಟ್ಟು, ಅದರ ಮೇಲ್ಗಡೆಗೆ ಆನೆಯ ಚರ್ಮವನ್ನು ಸುತ್ತಿ ಕೊಂಡಿದ್ದನು. ಮತ್ತೂ ಸಕಲ ಅಂಗಾಂಗಳಿಗೆ ಭಸ್ಮ ಭಂಡಾರಗಳನ್ನು ಲೇಪಿಸಿ ಕೊಂಡಿದ್ದನು. ಅವನ ಸತಿಯಾದ ಗಿರಿಜೆಯು ಮಾಲತಿಯ ವೇಷ ಧರಿಸಿ, ವೀರ ಪೋಷಾಕುಗಳೊಂದಿಗೆ ಕೈಯ್ಯಲ್ಲಿ ಬರ್ಚಿಯನ್ನು ಧರಿಸಿ, ದೈತ್ಯ ವಧೆಗಾಗಿ ಭೈರವನೊಡಗೂಡಿ ಹೊರಟಳು.

**ಚಾರ ಭುಜ ಮೂರ್ಗಣ್ಣು ಮುಖದಲಿ । ಧಾರಣೆಯ ಮಾಡಿದನು ಶಶಿಧರ ।**
**ಚಾರಗಪಣೆಯ ಧರಿಸಿ ಭಂಡಾರದಲಿ ತಾಮಿಂದೂ ॥**
**ಚಾರು ಚಿನ್ನದ ಮುಕುಟ ಮೋರಿಸಿ। ಮೋರಗರಿ ಮೌಕ್ತಿಕದಿ ರಂಜಿಸಿ।**
**ವೀರ ಗರ್ಜನೆ ಗೈಯ್ಯೆ ಶಿವ ಪರಿವಾರ ಸನ್ನಯದೀ ॥೩॥**

**ಸಾರಮೇಯಗಳಾಗಿ ಬೊಗುಳುತ । ಸಾರಿ ಬಂದವು ಸರ್ವಶ್ರುತಿಗಳು ।**
**ಮಾರ ಹರನೇ ನೀಡು ನಮಗವಕಾಶವೆನ್ನುತ್ತಾ ॥**
**ಘೋರ ರಕ್ಕಸರಿಂದ ನಾವತಿ । ಚೂರು ಚೂರಾಗಿಹೆವು ಸೇಡನು ।**
**ತೀರಿಸುವ ಸುಸ್ಸಮಯ ಬಂದಿದೆ ಒಯ್ಯು ನಿನ್ನೊಡನೇ ॥೪॥**

**ವೀರತನದಿಂ ಕಚ್ಚಿ ಕ್ರೂರರ । ಸಾರಮಾಂಸವ ಸವಿದು ಪಾಕಿಮ ।**
**ಘೋರ ಹಿಂಸೆಯ ತಾಪ ಕಳೆವೆವು ಓದಯಾಘನನೇ ॥**
**ಮಾರ ಹರನೊಪ್ಪಿದನು ಪ್ರೇಮದಿ । ಧಾರುಣಿಗೆ ಕರೆ ತಂದನಾ ಖಲ।**
**ಕಾರುಭಾರವ ಮೆಟ್ಟಿಸಲು ಹಿಂಬದಿಗೆ ನಾಯಿಗಳಾ ॥೫॥**

ಶಬ್ದಾರ್ಥ - (೩,೪,೫) ಚಾರ ಭುಜ = ನಾಲ್ಕು ಭುಜ; ಮೂರ್ಗಣ್ಣು = ಮೂರು ಕಣ್ಣು; ಶಶಿಧರ = ಶಿವ;
ಚಾರಗಪಣಿ = ಕಂಬಳಿಯ ನಿಲುವಂಗಿ; ಮಿಂದು = ಎರಕೊಂಡು; ಮುಕುಟ = ಕಿರೀಟ; ಮೋರಿಸಿ = ತಲೆಗಿಟ್ಟು;
ಮೋರಗರಿ = ನವಿಲ ಪುಚ್ಚ; ಮೌಕ್ತಿಕ = ಮುತ್ತು; ರಂಜಿಸಿ = ಅಲಂಕರಿಸಿ; ಸನ್ನಯದಿ = ಸಜ್ಜಾಗಿ ಸಾರಮೇಯ = ನಾಯಿ;
ಶ್ರುತಿ = ವೇದ; ಮಾರಹರ = ಶಿವ; ನೀಡು = ಕೊಡು; ಸುಸ್ಸಮಯ = ಒಳ್ಳೇವೇಳೆ; ಕ್ರೂರರ = ರಾಕ್ಷಸರ;
ಸವಿದು = ತಿಂದು; ಪಾಕಿಮ = ಬೆಂದ (ನೋವಿನ) ಧಾರುಣಿ = ಭೂಮಿ ಖಲ = ದುಷ್ಟ; ಕಾರುಭಾರ = ಆಳ್ವಿಕೆ;
ಮೆಟ್ಟಿಸು = ತುಳಿಸು; ಖಲಕಾರುಭಾರ = ದುರಾಡಳಿತ.

ಭಾವಾರ್ಥ - (೩.೪.೫) ಭೈರವನು ನಾಲ್ಕು ಭುಜಗಳಿಂದಲೂ, ಮೂರು ಕಣ್ಣುಗಳಿಂದಲೂ ಸುಶೋಭಿತನಾಗಿ ಚಂದ್ರಧಾರಿಯಾದನು. ಕಂಬಳಿಯ ನಿಲುವಂಗಿ ಧರಿಸಿ, ಭಂಡಾರದಲ್ಲಿ ಎರಕೊಂಡನು. ಚೆಲುವಾದ ಚಿನ್ನದ ಮುಕುಟವನ್ನು ತಲೆಗೇರಿಸಿಕೊಂಡನು. ನವಿಲ ಗರಿ ಹಾಗೂ ಮುತ್ತುಗಳ ಜಾಲರಿಯೊಂದಿಗೆ ಅದಕ್ಕೆ ಅಲಂಕಾರ ಮಾಡಿದ್ದರು. ಭೈರವನು ವೀರ ಗರ್ಜನೆ ಮಾಡಿದೊಡನೆಯೇ ಶಿವನ ಪರವಾರದವರೆಲ್ಲರೂ ಯುದ್ಧ ಸಿದ್ಧತೆಯಲ್ಲಿ

ಸಮ್ಮಿಳಿತರಾದರು. ಮಲ್ಲ ಮಣಿಕಾಸುರರಿಂದ ನೋವನ್ನನುಭಿಸಿದ ವೇದಗಳು, ನಾಯಿಗಳಾಗಿ ಓಡೋಡುತ್ತ ಶಿವನ ಬಳಿಗೆ ಬಂದವು. ಅಲ್ಲದೇ ಶಿವನನ್ನು ಕುರಿತು, "ಆ ಘೋರ ರಾಕ್ಷಸರಿಂದ ನಾವು ನೋವನ್ನನು ಭವಿಸಿ ಚಿಂದಿಚಿಂದಿಯಾಗಿ ಹೋಗಿದ್ದೇವೆ. ಅದರ ಪ್ರತೀಕಾರ ತೀರಿಸಿಲು ನಮಗೀಗ ಸರಿಯಾದ ಅವಕಾಶ ಸಿಕ್ಕಿದೆ. ಅದಕ್ಕಾಗಿ ಮಹಾ ಮಹಿಮನೇ! ನೀನು ನಿನ್ನೊಂದಿಗೆ ನಮ್ಮನ್ನೂ ಭೂಮಿಗೆ ಕರೆದುಕೊಂಡು ನಡೆ!.. ಅಲ್ಲಿ ನಾವು ವೀರತನದಿಂದ ಕಾದಾಡಿ, ನಮ್ಮನ್ನು ಈ ಮೊದಲು ಹಿಂಸಿಸಿದ ಸೇಡನ್ನು ಪರಿಹಾರ ಮಾಡಿಕೊಳ್ಳುತ್ತೇವೆ". ಎಂದು ಬಿನ್ನವಿಸಿಕೊಂಡವು. ಅದಕ್ಕೆ ಕರುಣಾಳುವಾದ ಶಿವನು ಪ್ರೀತಿಯಿಂದ ಒಪ್ಪಿ ಕೊಂಡು, ಆ ನಾಯಿಗಳನ್ನೆಲ್ಲ ತನ್ನ ಜೊತೆಗೆ ಭೂಮಿಗೆ ಕರೆದೊಯ್ಯಲು ಸಿದ್ಧನಾದನು. ಭೂಮಿಯ ಮೇಲೆ ನಡೆದಿರುವ ದೈತ್ಯರ ದುರಾಡಳಿತವನ್ನು ತುಳಿಯುವದಕ್ಕಾಗಿ ವೇದಗಳೆಂಬ ಆ ನಾಯಿಗಳು, ಶಿವನನ್ನು ಬೆಂಬತ್ತಿ ಭೂಮಿಗಿಳಿಯಲು ಸಿದ್ಧವಾದವು.

ಊದಿದನು ಶಂಖವನು ಶಂಕರ । ಮೇದಿನಿಗೆ ಹೊರಡುವದು ದಿವಿಜರು ।
ಕಾದುವದು ದೈತ್ಯಾಧಮರ ಮದ ಮುರಿದು ಕೊಲ್ಲುವದೂ ॥
ಭೇದಿಸುವದವರೆಲ್ಲರಾದಳ । ಬೂದಿ ಗೈವುದು ಛಿನ್ನ ಛಿದ್ರದಿ।
ಮೇದಿನಿಯ ಭಾರವನು ತಗ್ಗಿಪುದೆಂದು ಶಿವ ನುಡಿಯೇ ॥ ೬॥

ಭೂತ ವೇತಾಳಾದಿ ಗಣಗಳು । ಓತು ಬಂದವು ಶಿವನ ಸನ್ನಿಧಿ ।
ಗಾತು ನಿಲ್ಲುತ ಶಂಭೋ ಜೈ ಜೈ ಎನುತ ಭೋಹರಿಸೇ ॥
ಭೂತ ಪತಿ ಸಜ್ಜಾಗಿ ಶಿವಗಿರಿ। ಗಾತು ನಿಂದಿಹ ಸಕಲ ಸೈನ್ಯಕೆ ।
ನಾಥನೀ ಶ್ರೀ ಸ್ಕಂದ ದೇವನು ಎನಲು ಒಕ್ಕೊರಲಿಂ ॥೭॥

ಮೋರ ವಾಹನನಿಂಗೆ ಜೈ ಜೈ । ಮಾರಹರ ಸುತನಿಂಗೆ ಜೈ ಜೈ ।
ಘೋರ ದೈತ್ಯಾಧಮರ ಹಂತಕ ವೀರ ಕೇಸರಿ ಜೈ ॥
ತಾರಕಾಸುರ ನೆಂಬ ದೈತ್ಯನ । ಘೋರ ಕಾಟವ ಕಳೆದನಿವ ಜೈ ।
ಧೀರ್ ಚಮೂಪತಿ ಎಂದು ಉಗ್ಗಡಸಿದರು ಹರ್ಷದಲೀ ॥೮॥

ಶಬ್ದಾರ್ಥ - (೬.೭.೮) ಮೇದಿನಿ = ಭೂಮಿ; ದಿವಿಜರು = ದೇವತೆಗಳು ; ಕಾದು = ಯುದ್ದ ಮಾಡು; ದೈತ್ಯಾಧಮ = ಕೆಟ್ಟ ರಾಕ್ಷಸ; ಮದ = ಸೊಕ್ಕು; ದಳ = ದಂಡು; ಭೇದಿಸು = ಛೇದಿಸು (ಕೊಲ್ಲು) ಬೂದಿ ಗೈವುದು = ನಾಶ ಮಾಡತಕ್ಕದ್ದು; ತಗ್ಗಿಪುದು = ತಗ್ಗಿಸುವದು; ವೇತಾಳ = ಭೂತದೊಡೆಯ; ಗಣ = ಗುಂಪು ; ಭೋಹರಿಸು = ಪರಾಕುಹಾಕು; ಸಜ್ಜಾಗಿ = ತಯಾರಿಯಾಗಿ ; ಆತು = ಬೆನ್ನುಕೊಟ್ಟು; ನಾಥ = ಒಡೆಯ ; ಸ್ಕಂದ ದೇವ = ಕುಮಾರಸ್ವಾಮಿ ; ಒಕ್ಕೊರಲಿಂ = ಏಕ ಕಂಠದಿಂದ; ಮೋರವಾಹನ = ಷಣ್ಮುಖ; ಚಮೂಪತಿ = ದಂಡನಾಯಕ; ಉಗ್ಗಡಿಸು = ಆನಂದೋದ್ಗಾರತೆಗೆ

ಭಾವಾರ್ಥ (೬.೭.೮) ಶಿವನು ಶಂಖವನ್ನೂದಿ, ''ದೇವತೆಗಳೆಲ್ಲರೂ ಸೊಕ್ಕಿನ ದೈತ್ಯರ ಮದ ಮುರಿದು ಕೊಲ್ಲವದಕ್ಕಾಗಿ ಭೂಮಿಗೆ ಹೊರಡತಕ್ಕದ್ದೆಂದು'' ಆಜ್ಞೆ ಮಾಡಿದನು. ದೈತ್ಯರ ಪ್ರಾಬಲ್ಯದಿಂದ ಭಾರವಾಗಿರುವ ಭೂಮಿಯನ್ನು ದೈತ್ಯರೊಂದಿಗೆಕಾದಾಡಿ, ಅವರ ದಂಡನ್ನೆಲ್ಲ ಛಿದ್ರ ವಿಚ್ಛಿದ್ರಗೊಳಿಸಿ, ಧೂಳಿಪಟ ಮಾಡಿ ಹಾರಿಸಿ. ಭೂಭಾರವನ್ನು ಕಡಿಮೆ ಮಾಡತಕ್ಕದ್ದೆಂದು ಶಿವನು ಕಟ್ಟಾಜ್ಞೆಯನ್ನಿತ್ತನು. ಆ ಕೂಡಲೇ ದೇವತೆಗಳೂ, ಭೂತಗಣಗಳೂ. ಶಿವನ ಸನ್ನಿಧಿಗೆ ಒಡೋಡುತ್ತ ಯುದ್ಧ ಸಿದ್ಧತೆಯಲ್ಲಿ ಬಂದು, ಹಿಮಗಿರಿಯ ಕೆಳಭಾಗದ ಬೈಲಿನಲ್ಲಿ, ಕೇಂದ್ರಿಕೃತರಾಗಿ, ಶಿವನಿಗೆ ಜೈ ಜೈ ಕಾರ ಮಾಡತೊಡಗಿದರು. ಆಗ ಭೂತಪತಿಯಾದ ಶಿವನು ದೇವಗಣ ಭೂತ ವೇತಾಳಾದಿ ಸಕಲ ಸೈನಿಕರನ್ನುದ್ದೇಶಿಸಿ, ''ವೀರರೇ! ಈ ಷಣ್ಮುಖ ಸ್ವಾಮಿಯು ನಿಮ್ಮೆಲ್ಲರಿಗೂ ದಂಡನಾಯಕನಾಗಿದ್ದಾನೆ.'' ಎಂದು ಆಜ್ಞೆ ಮಾಡಿದನು. ತತ್‌ಕ್ಷಣವೇ ''ನವಿಲ ವಾಹನನಿಗೆ ಜಯವಾಗಲಿ !.. ಶಿವ ಸಂಜಾತನಿಗೆ ಜಯವಾಗಲಿ !! ಘೋರ ದೈತ್ಯರನ್ನು ನಾಶಮಾಡಿದ ಶ್ರೀ ಸ್ಕಂದ ದೇವನಿಗೆ ಜಯವಾಗಲೀ !!! ತಾರಕಾಸುರ ನೆಂಬ ಕ್ರೂರ ದೈತ್ಯನನ್ನು ಕೊಂದವನಿಗೆ ಜಯವಾಗಲಿ !!!. ಇಂಥ ಸಮರ್ಥ ಸೇನಾನಿಯನ್ನು ನಮಗೆ ದಣ್ಣಾಯಕನಾನ್ನಾಗಿ ಮಾಡಿದ್ದು. ಶ್ಲಾಘ್ಯಘನೀಯ!!'' ಎಂದು ದೇವತೆಗಳೂ ಭೂತಗಣಗಳೂ ಕೂಡಿಕೊಂಡು, ಹರ್ಷ ಪುಲಕಿತರಾಗಿ ಒಕ್ಕೊರಲಿನಿಂದ ಜೈ ಜೈ ಕಾರಮಾಡಿದರು.

ಇತಿ ಸಾಹಿತ್ಯ ರತ್ನಾಕರ ಶ್ರೀ ನಂಗಭಟ್. ಜೋಶಿ ವಿರಚಿತ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್
"ಮಾರ್ತಾಂಡ ಭೈರವಾವತಾರ" ನಾಮಕ ದಶಮೋಧ್ಯಾಯಃ ||
ಅಂತು ಅಧ್ಯಾಯ ೧೦ಕ್ಕಂ, ಪದ ೮ಕ್ಕಂ; ಒಟ್ಟು ಪದ ೧೪೬ ಕ್ಕಂ, ಮಂಗಲ ಮಸ್ತು

ಏಳುಕೋಟಿಗ ! ಏಳುಕೋಟಿಗ !!.. ಏಳುಕೋಟಿಗೋ !!!.... ಸಾಂಗಬಲೋ!.....








## ಅಧ್ಯಾಯ-೧೧ ಏಕಾದಶೋಧ್ಯಾಯ : ಶಿವ ಪರಿವಾರ ವರ್ಣನ

ಸೂಚನೆ :-

**ಏಳು ಕೋಟೀ ಸೈನ್ಯ ಸಹಿತದಿ । ಮೇಳಗೊಳ್ಳುತ ಹೊರಟನಾಶಿವ । ಧೂಳಿಪಟ ಮಾಡಲ್ಕೆ ದೈತ್ಯರ ಮಾಲತೀ ಸಹಿತಾ॥**

ಅರ್ಥ - ''ಏಳು ಕೋಟಿ ಸೈನಿಕರಿಂದೊಡಗೂಡಿ, ಪರಮಾತ್ಮನು ಗಂಗೆಮ್ಮಾಳವ್ವನ ಸಮೇತನಾಗಿ, ದೈತ್ಯರನ್ನು ಧೂಳೀಪಟ ಮಾಡುವದಕ್ಕಾಗಿ ಭೂಲೋಕಕ್ಕೆ ಹೊರಟನು'' ಎಂಬುದಾಗಿ ಸೂಚಿಸಿ, ಕವಿಯು ಮುಂದಿನ ಕಥಾನಕವನ್ನು ಈ ರೀತಿಯಾಗಿ ಬಣ್ಣಿಸುತ್ತಿದ್ದಾನೆ.

**ಒಂದು ಕೋಟೀ ರುದ್ರಗಣ ಇ । ನ್ನೊಂದು ಕೋಟೀ ದೇವಗಣ ಮ।**
**ತ್ತೊಂದು ಕೋಟೀ ಪ್ರೇತಗಣ ಪೈಸಾಚಿ ಗಣ ಸೇರೀ ॥**
**ಒಂದು ಕೋಟೀ ಮಾತೃ ಗಣ ಒಂ। ದೊಂದು ಕೋಟೀ ಶಾಕ ಡಾಕಿಣಿ।**
**ಮಂದ ವೈತಾಳಗಳು ಸೇರುತಲೇಳು ಕೋಟಿಗಳೂ ॥೧॥**

**ನಿಂದವಾ ನೆಲದಲ್ಲಿ ಯುದ್ಧದ । ಅಂದದಾಯುಧ ಕವಚ ಕೋಲ್ಗಳ ।**
**ನೊಂದು ಬಿಡದೇ ಧರಿಸಿ ಮುಂದಿನ ಆಜ್ಞೆ ಕಾಯುತ್ತಾ ॥**
**ನಿಂದ ಸೈನ್ಯವನೊಂದು ಬಾರಿಗೆ । ಸ್ಕಂದ ನೋಡಿದ ಲಕ್ಷ್ಯವೀಯುತ ।**
**ಮುಂದೆ ಸಾಗುತ ಶಿವನಿಗೊಂದಿಸಿ ಕುವರ ಬೆಸಗೊಂಡಾ ॥೨॥**

ಶಬ್ದಾರ್ಥ - ಕೋಲ್ಗಳ = ಬಾಣಗಳನ್ನು ; ಕವಚ = ಉಕ್ಕಿನ ಚಿಲಕತ್ತು; ಸ್ಕಂದ = ಕುಮಾರಸ್ವಾಮಿ; ಬೆಸಗೊಳ್ಳು = ವಿನಂತಿಸು (ಹೇಳು)

ಭಾವಾರ್ಥ - ಒಂದು ಕೋಟಿ ರುದ್ರಗಣಗಳೂ, ಒಂದು ಕೋಟಿ ದೇವತಾ ಸೈನಿಕರೂ, ಒಂದು ಕೋಟಿ ಪ್ರೇತ ಪಿಶಾಚಿಗಳೂ, ಒಂದು ಕೋಟಿ ಮಾತೃ ಗಣಗಳೂ ಒಂದು ಕೋಟಿ ಡಾಕಿನಿಯರೂ, ಒಂದು ಕೋಟಿ ಶಾಕಿನಿಯರು, ಸಂಘಟಿತರಾದರು. ಅವರೆಲ್ಲರೂ ಯುದ್ಧಕ್ಕೆ ಅವಶ್ಯವಾಗಿದ್ದ ತರತರದ ಆಯುಧ, ಬಾಣ ಬತ್ತಳಿಕೆ, ಚಿಲಕತ್ತು (ಉಕ್ಕಿನ ಎದೆ ಕವಚ) ಗಳನ್ನು ಧಾರಣೆ ಮಾಡಿಕೊಂಡಿದ್ದರು, ಮತ್ತೂ ದಣ್ಣಾಯಕನ ಮುಂದಿನ ಆಜ್ಞೆಗಾಗಿ ಅವರು ಕಾಯ್ದುಕೊಂಡು ನಿಂತಿದ್ದರು. ಹಾಗೆ ಅಚ್ಚುಕಟ್ಟಾಗಿ ನಿಂತ ಸೈನ್ಯ ಸಮೂಹವನ್ನು ಕುಮಾರಸ್ವಾಮಿಯು, ಒಂದು ಸಲ ಲಕ್ಷ್ಯಪೂರ್ವಕವಾಗಿ ನೋಡಿ ತೃಪ್ತಿಗೊಂಡನು. ಮತ್ತೂ ಮುಂದೆಸಾಗಿ ಶಿವನ ಸನ್ನಿಧಿಗೆ ಬಂದು ನಮಸ್ಕರಿಸಿ, ವಿನಯದಿಂದಾ ಈ ರೀತಿಯಾಗಿ ಹೇಳ್ತಾ ಇದ್ದಾನೆ.

**ತಂದೆ ಕೇಳ್ ಮುಂದಿರುವ ಮೋರ್ಕ್ಮಯ । ಅಂದದಾಯುಧ ಶಕ್ತಿ ಕುಂತದ ।**
**ಸಿಂಧ ಸಾಹಸ್ರಗಳ ಸೇನೆಯು ನನ್ನದಾಗಿಹೂದೂ ॥**
**ಹಿಂದೆ ಸಾಗುತ್ತಿರುವ ಸೇನೆಯು । ಇಂದ್ರ - ಚಂದ್ರರ ವಿದ್ದು ಅದರಲಿ ।**
**ಒಂದು ಲಕ್ಷಕು ಮಿಕ್ಕಿ ವಜ್ರಾಯುಧದ ಪಡೆ ಇಹುದೂ ।೩।।**

ಶಬ್ದಾರ್ಥ - ಮೋರ್ಕ್ಮಯ = ನವಿಲುಗಳಿಂದ ತುಂಬಿದ; ಶಕ್ತಿ. ಕುಂತ = ಇವು ಆಯುಧಗಳು; ಸಿಂಧ = ಪತಾಕೆ, ಸಾಹಸ್ರ = ಸಾವಿರ; ಪಡೆ = ಸೈನಿಕರು.

ಭಾವಾರ್ಥ - ತಂದೆಯೇ ಕೇಳು ! ನವಿಲುಗಳಿಂದ ತುಂಬಿದ ಆ ಮುಂದಿರುವ ಸೈನ್ಯವು ನನ್ನ ಸ್ವಂತದ್ದಾಗಿದೆ. ನನ್ನ ಸೇನಾನಿಗಳು ಬಲವಾದ ಶಕ್ತಿ ಆಯುಧ, ಮತ್ತೂ ಕುಂತಗಳನ್ನು ಧರಿಸಿದ್ದಾರೆ. ಸಾವಿರ ಸಂಖ್ಯೆಯ ಬಾವುಟ ಯುಕ್ತ ರಥಗಳು ನನ್ನ ಸೇನೆಯಲ್ಲಿವೆ. ಆದರ ಹಿಂದೆ ಸಾಗುತ್ತಿರುವ ಸೈನ್ಯಗಳು ಇಂದ್ರನವೂ, ಚಂದ್ರನವೂ ಆಗಿದ್ದು, ಆ ಪಡೆಗಳಲ್ಲಿ ಒಂದು ಲಕ್ಷಕ್ಕೂ ಮಿಕ್ಕಿದ ವಜ್ರಾಯುಧ ಧಾರಿಗಳಾದ ವೀರ ಸೈನಿಕರಿದ್ದಾರೆ.

ಇಂದ್ರನೈರಾವತವನೇರುತ । ಚಂದ್ರ ಜಿಂಕೆಯ ರಥವನೇರುತ ।
ಅಂದಗೊಂಡಿಹರಯ್ಯ ಪಡೆ ಮಧ್ಯದಲಿ ಶೋಭಿಸುತಾ ॥
ಮುಂದೆ ಸಾಗುತ್ತಿರುವ ಸಾಸಿರ । ಅಂದದಾನೆಗಳೆಲ್ಲ ವೈಭವ ।
ದಿಂದ ಕಂಗೊಳಿಸುತಿವೆ ತಂದೆಯೆ ಅಲ್ಲಿ ನೋಡೆಂದಾ ॥೪॥

ರವಿಯ ಪಡೆ ಇದು ಇಲ್ಲಿ ಬರುತಿದೆ । ಭುವಿಗೆ ಚೇತನವಿಡುತ ದೇವನೆ ।
ಸವಿತ ಮುದಗೊಂಡಿರ್ಪ‌ಶ್ವೇತಾಶ್ವಗಳ ರಥದಲ್ಲೀ ॥
ಕವಿದ ಕತ್ತಲೆಯನ್ನು ಸರಿಸುತ । ರವಿಯ ರಥ ಸಾರಥ್ಯದರುಣನು।
ಜವದಿ ಸಪ್ತಾಶ್ವಗಳ ನೋಡಿಸುತಿರುವ ನೋಡಲ್ಲೀ ॥೫॥

ಯಮನ ದಳವಿದು ಕೊಬ್ಬಿ ಕೋಣಾ। ಗಮನ ಗೊಂಡಿದೆ ದಂಡ ಪಾಶದಿ ।
ಸುಮನ ಸಾರಿಗಳನ್ನು ಕೊಲ್ಲಲು ಕಾಯ್ದು ನಿಂತಿಹುದೂ ॥
ವಿಮಲ ಅಗ್ನಿಯು ವರುಣ ನೈರುತ । ಸಮ-ಸುಸಜ್ಜಿತರಾಗಿ ಕದನದ ।
ಸಮಯ ಕಾಯುತ್ತಿಹರು ದಿಕ್ಪಾಲಕರು ಓ ಪ್ರಭುವೇ ॥೬॥

ಶಬ್ದಾರ್ಥ - ಐರಾವತ = ಇಂದ್ರನ ಏಳು ಸೊಂಡಲಿನ ಆನೆ; ಜಂಕೆ = ಚಿಗರಿ; ರಥ = ಬಂಡಿ; ಪಡೆ = ಸೈನ್ಯ; ಸಾಸಿರ = ಸಾವಿರ;
ರವಿ = ಸೂರ್ಯದೇವ; ಭುವಿ = ಭೂಮಿ; ಚೇತನ = ಚೈತನ್ಯ; ಸವಿತ = ಸೂರ್ಯ;
ಮುದಗೊಂಡಿರ್ಪ = ಸಂತೋಷದಿಂದಿರುವ; ಶ್ವೇತಾಶ್ವ = ಬಿಳಿಕುದುರೆ; ಕವಿ = ಮುಸುಕು; ಸಾರಥ್ಯ = ರಥ ಓಡಿಸುವವ; (ಸಾರಥಿ)
ಅರುಣ = ಸೂರ್ಯನ ರಥ ಓಡಿಸುವ ಸಾರಥಿ; ಜವ = ಬೇಗನೇ; ಕೋಣಾಗಮನಗೊಳ್ಳು = ಕೋಣನನ್ನು ಹತ್ತಿಕೊಂಡು ಬರು;
ಕೊಬ್ಬ = ಸೊಕ್ಕಿ; ದಂಡ = ಬಡಿಗೆ; ಪಾಶ = ಹಗ್ಗ; ಸುಮನಸಾರಿ = ರಾಕ್ಷಸರು; ಅಗ್ನಿ, ವರುಣ, ನೈರುತ = ಇವರೆಲ್ಲ
ದಿಕ್ಪಾಲಕರು, ಸಮ = ಸುಸಜ್ಜಿತರಾಗಿ = ಸಂಪೂರ್ಣ ಸಜ್ಜುಗೊಂಡು; ಕದನ = ಯುದ್ಧ; ಸಮಯ = ವೇಳೆ.

**ಭಾವಾರ್ಥ - (೪,೫,೬)** " ಇಂದ್ರನು ಐರಾವತವನ್ನೇರಿಯೂ, ಚಂದ್ರನು ಚಿಗರಿಗಳನ್ನು ಹೂಡಿದ ರಥವನ್ನೇರಿಯೂ, ಅವರವರ ಸೈನ್ಯ ಪಡೆಯ ಮಧ್ಯದಲ್ಲಿ ಶೋಭಿಸುತ್ತಿರುವರು. ತಂದೆಯೇ! ಅಲ್ಲಿ ನೋಡು ! ಅವರ ಮುಂಭಾಗದಲ್ಲಿ ಸಾವಿರ ಸಂಖ್ಯೆಯ ಸೊಕ್ಕಿದ ಆನೆಗಳು ಹೇಗೆ ಅಂದವಾಗಿ ಶೋಭಿಸುತ್ತಿವೆ?'' ಎಂದು ಷಣ್ಮುಖನು ಶಿವನಿಗೆ ತೋರಿಸಿದನು. ಇನ್ನು, ''ತಂದೆಯೇ! ಇದು ನೋಡು ಸೂರ್ಯದೇವನ ಪಡೆಯು ಇಲ್ಲಿ ಬರುತ್ತಿದೆ. ಅದು ಭೂಮಿಗೆ ಹೊಸ ಚೈತನ್ಯವನ್ನು ನೀಡುತ್ತಲಿದೆ. ಸೂರ್ಯ ನಾರಾಯಣನು, ಬಿಳೀ ಕುದುರೆಗಳನ್ನು ಹೂಡಿದ ರಥದಲ್ಲಿ ಮಂದಸ್ಮಿತನಾಗಿ ಕುಳಿತುಕೊಂಡಿದ್ದಾನೆ. ಅವನ ರಥದ ಸಾರಥಿಯಾದ ಅರುಣನು ಶ್ವೇತಾಶ್ವಗಳನ್ನು ಹೂಡಿದ ಆ ಸೂರ್ಯದೇವನ ರಥವನ್ನು ಹೇಗೆ ಓಡಿಸ್ತಾ ಬರ್‍ತಾ ಇದ್ದಾನೆ? ''ನೋಡೂ'' ಎಂಬುದಾಗಿ, ಷಣ್ಮುಖನು ತಂದೆಗೆ ತೋರಿಸ್ತಾ ಇದ್ದಾನೆ. ಆಹಹಾ! ಪರಮಾತ್ಮಾ! ಇಲ್ಲಿ ನೋಡು!. ಕೊಬ್ಬಿದ ಕೋಣಗಳನ್ನೇರಿಕೊಂಡು, ದಂಡ, ಪಾಶಗಳನ್ನು ಧರಿಸಿ ಬರುತ್ತಿರುವ ಯಮದೇವನ ಸೇನೆಯನ್ನು ನೋಡು!... ಆ ಸೈನಿಕರು ರಾಕ್ಷಸರನ್ನು ಕೊಲ್ಲುವದಕ್ಕಾಗಿ ಕಾಯ್ದುಕೊಂಡು ನಿಂತಿದ್ದಾರೆ. ಅಲ್ಲದೇ ಅಗ್ನಿ ವರುಣ, ನೈರುತ ಮುಂತಾದ ಅಷ್ಟದಿಕ್ಪಾಲಕರು, ಸಂಪೂರ್ಣ ಸುಸಜ್ಜಿತರಾಗಿ ಯುದ್ಧಕ್ಕೆ ಹೊರಡುವ ಆಜ್ಞೆಯನ್ನು ನಿರೀಕ್ಷಿಸ್ತಾ ನಿಂತುಕೊಂಡಿದ್ದಾರೆ. '' ಎಂಬುದಾಗಿ ಕುಮಾರ ಸ್ವಾಮಿ ತಂದೆಗೆ ಅರಿಕೆ ಮಾಡಿಕೊಳ್ತಾ ಇದ್ದಾನೆ.

**ವಿಧಿಯ ವೇದಾಸ್ತ್ರಗಳ ಪಡೆಯಿದು । ಮುದದಿ ಚಾತುರ್ವೇದ ನುಡಿಸುತ ।**
**ಲದರ ಬಲದಿಂ ದೈತ್ಯ ನಾಶಕ್ಕಾಗಿ ನಿಂತಿಹುದೂ ॥**
**ಅಧರದಿಂದುಚ್ಚರಿಸಿ ಮಂತ್ರವ । ಉದಕದಿಂ ಅರಿಬಲಕೆ ಚಿಮುಕಿಸೆ ।**
**ಕುದಿದು ಪೋಪುದು ದೈತ್ಯ ನಿಕರವು ಆಲಿಸೈ ಪ್ರಭುವೇ ॥೭॥**

ನೀಲ ಗರುಡಗಳೇರಿ ಕುಳಿತಿಹ । ಸಾಲು ಸಾಲಾಗಿರ್ಪ ಸೇನೆಯು ।
ವಾಲಿ ಮರ್ದನ ಕೈಟ ಭಾರಿಯದಯ್ಯ ಪರಮೇಶಾ ॥
ಲೋಲ ಪದ್ಮವು ಶಂಖ ಚಕ್ರಾ । ಮೇಲು ಗದೆ ಶಾರ್ಙ್ಗವದಿ ಶೋಭಿಸಿ ।
ಸಾಲು ದೈತ್ಯರ ಸೂರೆಗೊಳ್ಳಲು ಕಾಯ್ದು ಕುಳಿತಿಹುದೂ ॥೮॥

ಭೂತವೇತಾಳಾದಿ ನಿನ್ನಯ । ಖ್ಯಾತಿವೆತ್ತಿದ ಗಣಗಳಿಲ್ಲಿವೆ ।
ಓತು ಬಂದಿವೆ ವಿವಿಧ ಆಕಾರಗಳನೊಡಗೂಡೀ ॥
ಬಾತ ಮುಖ ಬೆಚ್ಚಿಸುವ ಮುಖ -ವಿ। ಖ್ಯಾತ ದೈತ್ಯ ರ ನಗಿದು ನುಂಗುವ ।
ಪ್ರೇತ ಮುಖದವರಿರುವರೈ ಪರಮೇಶ ವಿಧವಿಧದಾ ॥೯॥

ಸಿಂಗ ಮುಖ ಸಾರಂಗ ಮುಖ ಮೇಣ್ । ಸಿಂಗಳೀಕವು ಪುಲಿಯು ಶರಭದ ।
ರಂಗುರಂಗಿನ ಸರ್ಪ ಮಕರಾದಿಗಳ ಮುಖಧರಿಸೀ ॥
ರಂಗುಗೊಂಡಿದೆ ಕೇಳು ಪಿತನೇ । ರಂಗ ಕಿಳಿಯಲು ಸಿದ್ಧವಾಗಿದೆ ।
ಮಂಗಳಾಂಗನೆ ಕಾಯುತಿದೆ ನಿನ್ನಾಜ್ಞೆಗೆಂದೆನಲೂ ॥೧೦॥

ಶಬ್ದಾರ್ಥ - (೭,೮,೯) ವಿಧಿ = ಬ್ರಹ್ಮ; ವೇದಾಸ್ತ್ರ = ಮಂತ್ರಾಸ್ತ್ರ; ಚಾತುರ್ವೇದ = ೪ವೇದ; ಅಧರ = ತುಟಿ;
ಕೈಟಭಾರಿ = ಕೈಟಭನನ್ನು ಕೊಂದವ; (ಹರಿ) ವಾಲಿ ಮರ್ದನ = ವಾಲಿಯನ್ನು ಕೊಂದವ; (ರಾಮ) ಪದ್ಮ = ಕಮಲ; ಶಾರ್ಙ್ಗ = ವಿಷ್ಣು ಧನುಸ್ಸು;
ಖ್ಯಾತಿವೆತ್ತಿದ = ಪ್ರಖ್ಯಾತರಾದ; ಗಣ = ಸಮೂಹ; ಓತು = ತಳೆದು; ಬಾತ = ಉಬ್ಬಿದ;
ಪ್ರೇತ ಮುಖ = ವಿಕರವಾದ ಮುಖ; ವಿಧವಿಧದಾ = ತರತರದ; ಸಿಂಗ = ಸಿಂಹ; ಮೇಣ್ = ವತ್ತೂ; ಪುಲಿ = ಹುಲಿ;
ಶರಭ = ಸಿಂಹಗಳನ್ನು ಬೇಟೆಯಾಡುವ ಭಯಾನಕ ಪಕ್ಷಿ; ಮಕರ = ಮೊಸಳೆ; ರಂಗಕಿಳಿಯಲು = ರಣರಂಗಕ್ಕೆ ಹೊರಡಲು; ಮಂಗಳಾಂಗ = ಶಿವ.

ಭಾವಾರ್ಥ - (೭ರಿಂದ ೧೦) ತಂದೆಯೇ! ಇದು ಬ್ರಹ್ಮ ದೇವನ ವೇದಾಸ್ತ್ರಗಳ ಪಡೆಯು! ಋಗ್ವೇದ ಸಾಮವೇದ ಯಜುರ್ವೇದ, ಅರ್ಥರ್ವಣ ವೇದಗಳನ್ನು ತುಟಿಯಿಂದ ಉಚ್ಚರಿಸಿ, ಶಪಿಸಿದರೆ, ವೈರಿಗಳು ನಿಂತಲ್ಲಿಯೇ ಬೆಂದು ಬೂದಿಯಾಗುವರು, ಇನ್ನು ನೀಲಬಣ್ಣದ ಗರುಡಗಳನ್ನೇರಿ ಕುಳಿತಿರುವ ಈ ಸಾಲು ಸಲಾಗಿರುವ ಸೇನೆಯು, ವಾಲಿಯನ್ನು ಕೊಂದವನೂ. ಕೈಟಭನನ್ನು ನಾಶಮಾಡಿದವನೂ. ಆದ ಮಹಾವಿಷ್ಣುವಿನದು! ಇದು ಸಾಲು ದೈತ್ಯರನ್ನು ವಧಿಸುವದಕ್ಕಾಗಿ ಕಾಯ್ದು ನಿಂತಿದೆ. ಇನ್ನು ಭೂತ ವೇತಾಳಗಳಿಂದಲೂ, ಪ್ರಸಿದ್ಧ ಗಣನಾಥರಿಂದಲೂ, ಪ್ರಖ್ಯಾತಿ ಪಡೆದ ಈ ಮಹಾ ಸೈನ್ಯವು. ಪ್ರಭುವೇ ನಿನ್ನದಾಗಿದೆ. ನಿನ್ನ ಪಡೆಯು ವಿವಿಧ ಆಕಾರ, ವಿಧ ವಿಧದ ಮುಖಗಳನ್ನು ಹೊಂದಿ, ಅದ್ಭೂತವಾಗಿ ಕಾಣುತ್ತದೆ. ಉಬ್ಬಿದ ಮುಖದವರು, ಹೆದರಿಕೆ ತರಿಸುವಂಥ ಮುಖದವರು, ಪ್ರಖ್ಯಾತ ದೈತ್ಯರನ್ನೆಲ್ಲ ಅಗಿದು ನುಂಗಬಲ್ಲ ವಿಕಾರ ಮುಖದ ಸೈನಿಕರು, ನಿನ್ನ ಪಡೆಯಲ್ಲಿದ್ದಾರೆ, ಸಿಂಹದ ಮುಖವುಳ್ಳವರೂ, ಸಾರಂಗದ ಮುಖವುಳ್ಳವರೂ, ಸಿಂಗಳೀಕದ ಮುಖ ಹೊಂದಿದವರೂ, ಸಿಂಹದ ಬೇಟೆಯಾಡುವ ಶರಭ ಪಕ್ಷಿಯ ಮುಖ ಹೊಂದಿದವರೂ, ಹುಲಿಯ ಮುಖದವರೂ, ಬಣ್ಣ ಬಣ್ಣದ ಹಾವು, ಮೊಸಳೆಗಳ ಮುಖಧರಿಸಿದ ಅದೆಷ್ಟೋ ವಿಚಿತ್ರ ಸೈನಿಕರು ನಿನ್ನ ಪಡೆಯಲ್ಲಿ ಯುದ್ಧಾಕಾಂಕ್ಷಿಗಳಾಗಿ, ಕೇವಲ ನಿನ್ನ ಆಜ್ಞೆಗಾಗಿ ಮಾತ್ರ ಕಾಯ್ದು ನಿಂತಿದ್ದಾರೆ. '' ಅಂತಾ ಷಣ್ಮುಖನು ತಂದೆಗೆ ವಿವರಿಸಿ ಹೇಳ್ತಾ ಇದ್ದಾನೆ.

ಗಿಡ್ಡ ರೂಪದಿ ಹಿಂದೆ ಬರುತಿಹ । ಅಡ್ಡ ಗಂಧದ ಲೇಪದೊಪ್ಪಿದ ।
ದೊಡ್ಡ ಹೊಟ್ಟೆಯ ಸೈನ್ಯವಿದು ವಿಘ್ನಾರಿ ಅಣ್ಣನದೂ ॥
ದೊಡ್ಡ ಇಲಿಗಳನೇರಿ ಮುದ್ಗರ । ಗಿಡ್ಡ ಪಾಶಾಂಕುಶವ ಧರಿಸುತ ।
ಅಡ್ಡೆ ಆತಂಕಗಳ ತರಿಯುತ ರಕ್ಷೆಯಾಗಿಹುದೂ ॥೧೧॥

ಶಬ್ದಾರ್ಥ - ಗಂಧದಲೇಪದೊಪ್ಪಿದ = ಗಂಧವನ್ನು ಧಾರಣೆ ಮಾಡಿಕೊಂಡ; ಮುದ್ಗರ = ಒಂದು ಆಯುಧ; ಪಾಶ = ಹಗ್ಗ; ಅಂಕುಶ = ಆನೆಗಳನ್ನು ಪಳಗಿಸುವುದಕ್ಕಾಗಿ ಬಳಸುವ ಉಕ್ಕಿನ ಆಯುಧ; ತರಿಯುತ = ನಿವಾರಣೆ ಮಾಡುತ್ತ; ರಕ್ಷಕ = ರಕ್ಷಣೆ ಮಾಡುವವ.

**ಭಾವಾರ್ಥ** - ''ತಂದೆಯೇ! ಇನ್ನು ಎಲ್ಲಕ್ಕೂ ಹಿಂದೆ ಬರುತ್ತಿರುವ ಗಿಡ್ಡ ರೂಪದ ತೇಜ: ಪುಂಜವಾದ ದೊಡ್ಡ ಹೊಟ್ಟೆ ಹಾಗೂ ಅಡ್ಡ ಗಂಧದ ನಾಮ ಧರಿಸಿ ಬರುತ್ತಿರುವ ಸೇನೆಯು, ವಿಘ್ನನಾಶಕನಾದ ನನ್ನ ಅಣ್ಣ ಗಣಪತಿಯದಾಗಿದೆ. ಆತನ ಸೈನಿಕರು ದೊಡ್ಡ ದೊಡ್ಡ ಇಲಿಗಳನ್ನೇರಿಕೊಂಡು, ಮುದ್ಗರ, ಪಾಶ, ಅಂಕುಶ, ಮುಂತಾದ ವಿವಿಧ ಬಗೆಯ ಆಯುಧ ಧರಿಸಿ, ನಮ್ಮ ಈ ಧರ್ಮಯುದ್ಧಕ್ಕೆ ಯಾವದೇ ರೀತಿಯ ತೊಡಕು ತೊಂದರೆಗಳು ಬಾರದಂತೆ, ಆತಂಕಾದಿಗಳನ್ನು ನಿರ್ಮೂಲನ ಮಾಡುತ್ತಾ ಹೊರಟಿದ್ದಾರೆ, '' ಎಂದು ಷಣ್ಮುಖ ಸ್ವಾಮಿಯು ಶಿವನನ್ನು ಕುರಿತು, ಯುದ್ಧಕ್ಕೆ ಅಣಿಯಾದ ಆ ದೇವ ಬಲದ ವಿವರಣೆಯನ್ನೆಲ್ಲಾ ನೀಡುತ್ತಾ ಇದ್ದಾನೆ.

ಕೇಳಿ ತಲೆದೂಗಿದನು ಶಂಕರ । ಕಾಳ ಭೈರವನಾಗಿ ಡಮರುಗ ।
ತಾಳಗೊಳಿಸಲು ಗಿರಿಯು ನಡುಗಿತು ಗದಗದಾ ಎನುತಾ ॥
ಕಾಳಿ ಕೋವಿಗಳುಲಿದವ್ವೆ ರಣ । ದಾಳಿಯಿಕ್ಕುವ ಭೇರಿ ಝಾಗಟೆ ।
ಮೇಳಗೊಳ್ಳುತ ನುಡಿಯೆ ಲಕ್ಷಾ ವಧಿಯ ಸಂಖ್ಯೆಯಲೀ ॥೧೨॥

ಗಗನ ಮಂಡಲ ಬಿರಿದು ಭೋರ್ಗರೆ । ಮೊಗವ ಕೊಡಹಿದ ನಾದಿ ಶೇಷನು ।
ಮಿಗಿಲು ಗೊಂಡಿಹ ಶಬ್ದ ಸಿಡಿಲಿಗೆ ಕಿವಿಯು ಗಡಚಿಕ್ಕೀ ॥
ಬಗೆಬಗೆಯ ಬಿನ್ನಾಣ ದುಡುಗೆಯ । ಝಗಿಪ ದೇವ ಸ್ತ್ರೀ ಸಮೂಹವು ।
ಲಗು ಬಗೆಯ ಲೆತ್ತಿದರು ಆರತಿ ಮೃಡಗೆ ಮಾಲತಿಗೇ ॥೧೩॥

ಗಗನ ಮಾರ್ಗದಿ ಹೊರಟಿತ್ತಾ ದಳ । ಮುಗಿಲ ಮುಟ್ಟುವ ಸಿಂಧ ಸಾಸಿರ ।
ಬಗೆಯ ರತ್ನಾವಳಿಯ ಕೆಚ್ಚಿದ ಲಕ್ಷ ರಥ ಸಹಿತಾ ॥
ಮಿಗಿಲುಗೇಕೆಯ ಗೈವ ಸೈನಿಕ । ಜಿಗಿದು ಹಾರುವ ತುರಗ ನವಿಲಿನ ।
ಸೊಗವ ನಾನೇನೆಂಬೆ ಖುರಪುಟ ಗಜವು ಘೀಳಿಡುವಾ ॥೧೪॥

ಇಂತು ವೈಭವದಿಂದ ಬರುತಿಹ । ಕಂತುಹರ ಸೇನೆಯ ದಿಗಂತದಿ ।
ನಿಂತು ನೋಡಿದರ ಬಬ ಏನಿದು ಮಿಂಚು ಹೊಡೆದಂತೇ ॥
ಆಂತು ಮಣಚೂಲಕ್ಕೆ ಇಳಿಯುವ । ಅಂತವಿಲ್ಲದ ದೇವ ಸೇನೆಯು ।
ಬಂತು ಮಣಚೂಲಕ್ಕೆ ಎಂಬುವ ವಾರ್ತೆಯರುಹಿದರೂ ॥೧೫॥

ಶಬ್ದಾರ್ಥ - (೧೨ರಿಂದ೧೫) ತಾಳಗೊಳಿಸು = ಬಾರಿಸು; ಉಲಿದವು = ನುಡಿದವು; ಭೇರಿ = ರಣವಾದ್ಯ; ಬಿರಿದು = ಒಡೆದು ; ಭೋರಿಡು = ಆಕ್ರಂದಮಾಡು ; ಕೊಡಹು = ಅಲುಗಿಸು; ಆದಿ ಶೇಷ = ಭೂಮಿಯನ್ನು ಹೊತ್ತ ಸರ್ಪ; ಮಿಗಿಲುಗೊಂಡಿಹ = ಮೇಲ್ಮಟ್ಟದ; ಬಿನ್ನಾಣದ = ಚಲುವಿನ; ಝಗಿಪ = ಥಳಥಳಿಸುವ; ಸ್ತ್ರೀ ಸಮೂಹ = ಹೆಂಗಸರ ಗುಂಪು ; ದಳ = ಸೈನ್ಯ; ಸಿಂಧ = ಪತಾಕೆ; ಸಾಸಿರ ಸಾವಿರ ; ಮಿಗಿಲುಗೇಕೆ = ಭಯಂಕರ ಕೂಗು , ತುರಗ = ಕುದುರೆ, ಸೊಗ = ಸೌಂದರ್ಯ; ಖುರಪುಟ = ಕುದುರೆಗಳೋಡುವ ಸದ್ದು ; ಘೀಳಿಡು = ಒದರು; ಕಂತುಹರ = ಶಿವ ; ದಿಗಂತ = ಭೂಮಿ ಆಕಾಶ ಒಂದಾದ ಜಾಗೆ, ಅಂತವಿಲ್ಲದ = ಎಣಿಕೆ ಇಲ್ಲದ;

**ಭಾವಾರ್ಥ -** (೧೨ರಿಂದ೧೫) ಷಣ್ಮುಖನು ವಿವರಿಸಿದ ವಾರ್ತೆಯನ್ನೆಲ್ಲ ಶಿವನು ಕೇಳಿ ತಲೆದೂಗಿದನು ಮತ್ತೂ ತತ್‌ಕ್ಷಣವೇ ಭೈರವನಾಗಿ ಡಮರುಗವನ್ನು ಬಾರಿಸತೊಡಗಿದನು. ಆ ಬುಡಬುಡಕಿಯ ಸಪ್ಪಳಕ್ಕೆ ಹಿಮಗಿರಿಯು ಗದಗದ ನಡುಗಿ ಹೋಯಿತು ದೇವತೆಗಳು ಕಾಳಿ, ಕೋವಿ, ಭೇರಿ ಝಾಗಟೆ ಮಂತಾದ ರಣವಾದ್ಯಗಳನ್ನು ಬಾರಿಸತೊಡಗಿದರು. ಅವು ಯುದ್ಧಕ್ಕೆ ಹೊರಡುವ ಸೂಚನೆಗಳಾಗಿದ್ದವು, ಸಹಸ್ರಾರು ಸಂಖ್ಯೆಯ ರಣವಾದ್ಯಗಳು

ಏಕಾಗಿ ಬಾರಿಸಲ್ಪಟ್ಟಾಗ, ಆದಿ ಶೇಷನು ಆ ಧ್ವನಿ ಕೇಳಿ ಸಿಡಿಲ ಧ್ವನಿಯನ್ನಾಲಿಸಿದವನಂತೆ ಬೆಚ್ಚಿ ತಲೆ ಕೊಡಹಿದನು, ಅವನ ಕಿವಿಗಳು ಆ ಸಪ್ಪಳದಿಂದ ಗಡಚಿಕ್ಕಿದಂತಾದವು. ಕೂಡಲೇ ದೇವತಾ ಸ್ತ್ರೀ ಯರು ಬೆಡಗು ಬಿನ್ನಾಣದ ಉಡುಗೆ ತೊಡುಗೆ ಧರಿಸಿಕೊಂಡು, ಭೈರವನಿಗೂ ಗಂಗೆಮಾಳವ್ವನಿಗೂ ಆರತಿಯನ್ನೆತ್ತಿದರು, ನಂತರ ಗಗನ ಮಾರ್ಗವಾಗಿ ಆ ದೇವ ಸೇನೆಯು ಹೊರಟಿತು. ಮುಗಿಲಿನೆತ್ತರದ ಸಾವಿರಾರು ಸಂಖ್ಯೆಯ ಪತಾಕೆಗಳು ಆ ದಳದಲ್ಲಿದ್ದವು, ರತ್ನ ಖಚಿತ ವಾದ ಒಂದು ಲಕ್ಷ ರಥಗಳು ಆ ಸೇನೆಯಲ್ಲಿ ಸಮ್ಮಿಳಿತವಾಗಿದ್ದವು, ಕ್ರೂರವಾಗಿ ಕೇಕೆ ಹಾಕುವ ಸೈನಿಕರಿಂದಲೂ, ಜಿಗಿಜಿಗಿದು ಹಾರುವ ಕುದುರೆ, ನವಿಲುಗಳ ಗುಂಪಿನಿಂದಲೂ, ಕುದುರೆಗಳ ಖುರಪುಟ, ಆನೆಗಳ ಘೀಳಡಿಕೆಗಳಿಂದಲೂ, ಶೋಭಿಸುತ್ತಿರುವ, ಆ ಸೈನ್ಯದ ಸಂಭ್ರಮವನ್ನು ವರ್ಣಿಸಲಿಕ್ಕಾಗದು!...

ಈ ಪ್ರಕಾರವಾಗಿ ವೈಭವದಿಂದ ಸಾಗಿದ್ದ ಶಿವಸೇನೆಯನ್ನು, ಮಣಿಚೂಲ ಪರ್ವತದ ಮೇಲೆ ನಿಂತ ಮಲ್ಲನ ಪರಿಚಾರಕರು ನೋಡಿದರು, ಅವರು ದಿಗಂತದಲ್ಲಿ ಇಳಿದು ಬರುತ್ತಿರುವ ದೇವ ಸೇನೆಯನ್ನು ನೋಡಿ, ಮಿಂಚು ಕಂಡವರಂತೆ ಗಾಬರಿಯಾದರು ಮತ್ತು ತಮ್ಮ ದೊರೆಗಳಾದ ಮಣಿಕಾಸುರ, ಮಲ್ಲಾಸುರರಿಗೆ ದೇವ ಸೇನೆಯು ಮಣಿಚೂಲ ಪರ್ವತಕ್ಕೆ ದಾಳಿ ಮಾಡುತ್ತಿರುವ ವಾರ್ತೆಯನ್ನು ವಿನಯದಿಂದ ಅರುಹಿದರು.

ಇತಿ ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್. ಜೋಶಿ ವಿರಚಿತ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್,
" ಶಿವ ಪರಿವಾರ ವರ್ಣನ " ನಾಮಕ ಏಕಾದಶೋಧ್ಯಾಯಃ ॥

ಅಂತು ಅಧ್ಯಾಯ ೧೧ಕ್ಕಂ ಪದ ೧೫ ಕ್ಕಂ, ಒಟ್ಟು ಪದ ೧೯೧ ಕ್ಕಂ, ಮಂಗಲ ಮಸ್ತು !

ಏಳು ಕೋಟಗ ! ಏಳು ಕೋಟಿಗ !! ಏಳುಕೋಟಿಗೋ !!! ಸಾಂಗಬಲೋ



# ಅಧ್ಯಾಯ-೧೨ ದ್ವಾದಶೋಧ್ಯಾಯಃ ಮಲ್ಲ ದೈತ್ಯ ಸೈನ್ಯ ವರ್ಣನ

ಸೂಚನೆ :-

ಚಾರರಾ ನುಡಿಗೇಳಿ ಕೌತುಕ । ಧಾರಿಯಾಗುತ ಮಲ್ಲ ದೈತ್ಯನು ।
ವೀರರೇ ಎದ್ದೇಳಿ ಬವರಕೆ ಎಂದು ಸಾರಿಸಿದಾ ॥

ಅರ್ಥ - ದೂತರು ಹೇಳಿದ ಮಾತುಗಳನ್ನು ಕೇಳಿ ಮಲ್ಲ ದೈತ್ಯನು ಆಶ್ಚರ್ಯ ಚಕಿತನಾದನು. ಮತ್ತೂ ತನ್ನ ವೀರ ಸೈನಿಕರಿಗೆಲ್ಲ "ಯುದ್ಧ ಹೂಡುವದಕ್ಕಾಗಿ ಬೇಗ ಹೊರಟು ಬರಬೇಕೆಂದು" ಡಂಗುರ ಸಾರಿಸಿದನು. ಎಂಬ ವಿಷಯವನ್ನು ಸೂಚಿಸುತ್ತಾ ಕವಿಯು ಮುಂದಿನ ಕಥೆಯನ್ನು ಈ ರೀತಿಯಾಗಿ ಹೇಳ್ತಾ ಇದ್ದಾನೆ.

ನುಡಿಯನಾಲಿಸಿ ತನ್ನ ದೂತರ । ಒಡನೆ ಏರಿದ ಚೂಲ ಗಿರಿಯನು ।
ಪೊಡವಿ ಆಗಸಕೇಕಗೊಂಡಿಹ ಪಡೆಯ ನೋಡಿದನು ॥
ಕಡಿದು ಹಲ್ಲನು ರೋಷ ಉಕ್ಕಿಸಿ । ಬಡವ ಹಾರುವರಿಂಗೆ ಒಲಿದನೆ।
ಮೃಡನ ಬಡಿವಾರವನು ಬಿಡಿಸುವೆನೆನುತ ಬೊಬ್ಬಿರಿದೂ ॥ ೧॥

ಕೂಗಿ ಕರೆದನು ಅನುಜ ಮಣಿಕನ । ಬೇಗ ಎಬ್ಬಿಸು ದೈತ್ಯ ಸೇನೆಯ ।
ಆಗಲೀಗಲೆ ಯುದ್ಧ ಕೈ ತೋರಿಸುವ ದಿವಿಜರಿಗೇ ॥
ಭೋಗ ಸುಖಗಳ ಮರೆತು ಬೆಂಬಲ। ವಾಗಿ ಕದನಕ್ಕಿಳಿದ ಖೂಳರ ।
ಲಾಗ ಹಾಕಿಸಿ ನಗುವ ಹರಿಹರರಾದಡೆಮಗೇನೂ ॥೨॥

ಶಬ್ದಾರ್ಥ - ದೂತ = ಸೇವಕ; ಚೂಲಗಿರಿ = ಮಣಚೂಲ ಪರ್ವತ ; ಆಗಸ = ಆಕಾಶ, ಪಡೆ = ಸೈನ್ಯ; ಪೊಡವಿ ಆಗಸಕೇಕೆ ಗೊಂಡಿಹ = ಭೂಮಿ ಆಕಾಶಗಳಿಗೆ ಏಕಾಗಿ ನಿಂತಿರುವ ; ರೋಷ ಉಕ್ಕಿಸಿ = ಸಿಟ್ಟಿಗೆದ್ದು; ಹಾರುವ = ಬ್ರಾಹ್ಮಣ; ಒಲಿದನೆ = ಮೆಚ್ಚಿಕೊಂಡನೇ; ಬಡಿವಾರ = ಬಿಂಕ ; ಬೊಬ್ಬರಿದು = ಆರ್ಭಟಿಸಿ; ಅನುಜ = ಕಿರಿಯ ಸಹೋದರ ; ಮಣಕ = ಮಲ್ಲನ ತಮ್ಮ; ಬೆಂಬಲವಾಗಿ ಬರು = ಪೋಷಕರಾಗಿ ನಿಲ್ಲು; ಕದನಕ್ಕಿಳಿ = ಯುದ್ಧಕ್ಕಣಿಯಾಗು; ಲಾಗಹಾಕಿಸಿ = ಕೆಡವಿ.

**ಭಾವಾರ್ಥ -** ಮಲ್ಲದೈತ್ಯನು ತನ್ನ ದೂತನು ಹೇಳಿದ ನುಡಿಗಳನ್ನು ಕೇಳಿ, ತಟ್ಟನೆ ಆಶ್ಚರ್ಯ ಚಕಿತನಾಗಿ ಮಣಿಚೂಲ ಪರ್ವತದ ಮೇಲೇರಿ ನೋಡಿದನು, ಭೂಮಿಗೂ ಆಕಾಶಕ್ಕೂ ಏಕಾಕಾರವಾಗಿ ಇಳಿಯುತ್ತಿರುವ ದೇವ ಸೇನೆಯನ್ನು ನೋಡಿ ತಲ್ಲಣಗೊಂಡನು. ಆತನು ಭಯಂಕರ ಸಿಟ್ಟಿನಿಂದ ಹಲ್ಲುಗಳನ್ನು ಕಡಿಯುತ್ತಾ "ಆ ದರಿದ್ರ ಬ್ರಾಹ್ಮಣರಿಗೆ ಶಿವನು ಬೆಂಬಲಿಗನಾಗಿ ಬಂದನೇ? ಸರಿ ಸರಿ ; ಆ ಶಿವನ ಬಡಿವಾರವಾದರೂ ಎಷ್ಟಿದೆಯೋ ನೋಡಿಯೇ ಬಿಡುತ್ತೇನೆ" ಎಂದು ಆರ್ಭಟಿಸಿದನು. ಮತ್ತೂ ತನ್ನ ಸಹೋದರನಾದ ಮಣಿಕಾಸುರನನ್ನು ಕೂಗಿ ಕರೆದು, "ತಮ್ಮಾ! ಬೇಗನೇ ಯುದ್ಧ ಮಾಡುವದಕ್ಕಾಗಿ ದೈತ್ಯ ಸೇನೆಯನ್ನು ಎಬ್ಬಿಸುವ ಏರ್ಪಾಡು ಮಾಡು! ದೇವತೆಗಳೊಂದಿಗೆ ನಮ್ಮ ಯುದ್ಧವು ಈಗಿಂದಿಗಲೇ ಆಗಿ ಹೋಗಲಿ! ಆಮದೋನ್ಮತ್ತರಿಗೆ ನಮ್ಮ ಕೈ ತೋರಿಸೋಣ ತಮ್ಮಷ್ಟಕ್ಕೆ ತಾವು ಸುಖವಾಗಿ ರುವದನ್ನು ಬಿಟ್ಟು, ಆ ಬ್ರಾಹ್ಮಣ ಯತಿಗಳ ಬೆನ್ನು ಕಟ್ಟಿ ನಮ್ಮೊಂದಿಗೆ ಜಗಳಕ್ಕಿಳಿದಿದ್ದಾರೆ. ಅವರು ಹರಿ, ಹರ. ವಿರಂಚಿಗಳಾದರೆ ನಮಗೇನು ? ಯುದ್ಧದಲ್ಲಿ ಅವರನ್ನು ಬಗ್ಗು ಬಡಿದು, ಲಾಗ ಹಾಕಿಸಿ ನಕ್ಕು ಬಿಡೋಣ! " ಎಂದು ಉನ್ಮತ್ತತೆಯಿಂದ ಆಜ್ಞೆ ಮಾಡಿದನು ಮತ್ತೂ ಹೇಳಿದ್ದೇನೆಂದರೆ

**ಹರಿಯು ಎಮ್ಮಯ ಆದಿ ವೈರಿಯು । ಹರನು ಆತಗೆ ಬೆಂಬಲಾದವ ।**
**ಅರಿತು ನೋಡಿದರೀರ್ವರೂ ಶಿಕ್ಷಾರ್ಹರಾಗಿಹರೂ ॥**
**ತರಿದು ಹಾಕುವದವರ ಸೈನ್ಯವ । ಮುರಿದು ಇಕ್ಕಿರಿಸುವದು ಕನಸಲಿ ।**
**ಬರಿಯ ದೈತ್ಯರೆ ಕಾಂಬ ತೆರದಲಿ ಪಾಠ ಕಲಿಸುವದೂ ॥೩॥**

ಸಾರಿಸ್ಯೆ ಡಂಗುರವ ಬೇಗನೆ । ವೀರರೆಲ್ಲರು ಸೇರಿಕೊಳ್ಳಲಿ ।
ವೀರ ವೀಳ್ಯೆಯ ಪಡೆದು ಬವರದಿ ಶೌರ್ಯ ತೋರಿಸಲೀ ॥
ಮಾರ ಪಿತ ಮಾರಾರಿ ದಿವಿಜರು । ಕಾರಿ ನೆತ್ತರು ಸಾವನಪ್ಪಲಿ ।
ಧೀರರೆಂದರೆ ದೈತ್ಯ ರೆಂಬುವ ಬಿರುದು ನಮಗಿರಲೀ ॥೪॥

ವೀರ ರಾವಣನೆಮ್ಮ ಕುಲದವ । ತೂರಿ ಹಿಮಗಿರಿಯನ್ನು ತೊಟ್ಟಲ ।
ದಾರವೆಳೆದಂತೆಳೆದ ಸಂಗತಿ ಮರೆದನೇ ಶಿವನೂ ॥
ಘೋರ ರಕ್ಕಸರೆಮ್ಮ ತಡವಲು । ಮೀರಿ ಬಂದಿದೆ ಮರಣ ಯೋಗವು ।
ಸಾರಿ ನಿಂತಂತಿಹುದು ಕೈಲಾಸದಲಿ ಪ್ರಳಯಾಗ್ನೀ ॥೫॥

ಶಬ್ದಾರ್ಥ - (೩,೪,೫) ಆದಿ ವೈರಿ = ಮುಖ್ಯವೈರಿ; ಬೆಂಬಲಾದವ = ಬೆಂಬಲಿಗನಾದವ; ಶಿಕ್ಷಾರ್ಹ = ಶಿಕ್ಷೆಗೆ ಯೋಗ್ಯನಾದವ; ತರಿದು = ಕತ್ತರಿಸಿ; ಇಕ್ಕರಿಸು = ಹೊಡೆ; ಕಾಂಬ ತೆರದಲಿ = ಕಾಣುವಂತೆ; ಪಾಠ ಕಲಿಸು = ಬುದ್ಧಿಗಲಿಸು; ವೀರ ವಿಳ್ಯೆ = ವೀರಕಾಣಿಕೆ; ಮಾರಪಿತ = ಶ್ರೀ ಹರಿ; ಮಾರಾರಿ = ಶಿವ; ದಿವಿಜ = ದೇವತೆಗಳು; ಧೀರ = ಶೂರ; ಕಾರಿ ನೆತ್ತರು ಸಾವನಪ್ಪಲಿ = ನೆತ್ತರು ಕಾರಿಕೊಂಡು ಸತ್ತು ಹೋಗಲಿ; ಬವರ = ಯುದ್ಧ; ಬಿರುದು = ಹೆಮ್ಮೆಯ ದ್ಯೋತಕ; ತೂರಿ = ಎತ್ತಿ; ಹಿಮಗಿರಿ = ಕೈಲಾಸ; ತೊಟ್ಟಲ ದಾರವೆಳೆದಂತೆ = ತೊಟ್ಟಲಿನಂತೆ ತೂಗಿ; ಮರೆದನೆ = ಮರೆತನೇ; ತಡವು = ತೊಂದರೆಕೊಡು; ಮರಣ ಯೋಗ = ಮೃತ್ಯುಗಳಿಗೆ; ಸಾರಿ = ಬಂದು; ಪ್ರಲಯಾಗ್ನಿ = ಪ್ರಳಯ ಕಾಲದಲ್ಲಿ ಉಂಟಾಗುವ ಭಯಾನಕ ಬೆಂಕಿ.

**ಭಾವಾರ್ಥ -** ಹರಿಯಂತೂ ಮೊದಲಿನಿಂದಲೂ ನಮ್ಮ ಕಡು ವೈರಿಯೇ ಆಗಿದ್ದಾನೆ. ಶಿವನು ಆತನಿಗೆ ಬೆಂಬಲಿಗನಾಗಿ ಬಂದವನು. ಅಂದ ಮೇಲೆ ವಿಚಾರಿಸಿ ನೋಡಿದರೆ, ಹರಿಹರರಿಬ್ಬರೂ ನಮ್ಮ ದೃಷ್ಟಿಯಲ್ಲಿ ಶಿಕ್ಷೆಗೆ ಯೋಗ್ಯರೇ ಆಗಿದ್ದಾರೆ. ಆದಕಾರಣ ನಾವೀಗ ಅವರ ಸೈನ್ಯವನ್ನು ಹಿಂದು ಮುಂದಿನ ವಿಚಾರ ಮಾಡದೇ ಕತ್ತರಿಸಿ ಹಾಕತಕ್ಕದ್ದು!... ಅವರ ಸೇನಾ ಬಲವನ್ನೆಲ್ಲ ಕಡಿದು ಇಕ್ಕರಿಸತಕ್ಕದ್ದು. ಅವರ ಕನಸಿನಲ್ಲಿ ಸಹಿತ ಕೇವಲ

ದೈತ್ಯರೇ ಕಾಣುವಂತೆ, ಅವರಿಗೆ ಬುದ್ಧಿ ಗಲಿಸಬೇಕು !... ಅದಕ್ಕಾಗಿ ಸಹೋದರ ಶ್ರೀಮನೇ!... ನೀನೀಗ ಡಂಗುರ ಸಾರಿಸಿ, ದೈತ್ಯ ವೀರರನ್ನೆಲ್ಲ ನಮ್ಮ ಅರಮನೆಗೆ ಕರಿಸು! ಅವರು ಅರಮನೆಯಿಂದ ವೀರ ಕಾಣಿಕೆಯನ್ನು ಪಡೆದು ಕೊಂಡು, ಯುದ್ಧದಲ್ಲಿ ತಮ್ಮ ಮಹಾಶೌರ್ಯವನ್ನು ಪ್ರಕಟಗೊಳಿಸಲಿ!.. ಶಿವ, ವಿಷ್ಣು, ಸಕಲದೇವತೆಗಳು, ಎಲ್ಲರೂ ಅವರ ಪರಾಕ್ರಮದ ಹೊಡೆತ ತಿಂದು ರಕ್ತ ಕಾರಿ ಸಾಯುವಂತಾಗಲಿ!... ''ಜಗತ್ತಿನಲ್ಲಿ ಮಹಾ ಪರಾಕ್ರಮಿಗಳೆಂದರೆ ದೈತ್ಯರೇ!..'' ಎಂಬ ಹೆಗ್ಗಳಿಕೆಯು ನಮ್ಮದಾಗಲಿ!..

ನಮ್ಮ ಕುಲದವನೇ ಆದ ರಾವಣನೆಂಬ ಮಹಾ ಶೂರನು, ಕೈಲಾಸವನ್ನು ಎತ್ತಿ ತೊಟ್ಟಿಲದಂತೆ ತೂಗಾಡಿಸಿದ ಸಂಗತಿಯನ್ನು, ಆ ಶಿವನು ಮರೆತಿರಬಹುದು. ನಾವು ದೈತ್ಯರು!.. ಮಹಾ ಪರಾಕ್ರಮಿಗಳು!! ನಮಗೆ ತೊಂದರೆ ಕೊಟ್ಟಿರುವರೆಂದ ಮೇಲೆ ಅವರಿಗೆ ಮರಣಯೋಗವು ಕೂಡಿ ಬಂದಂತಾಗಿದೆ. ಪ್ರಳಯಾಗ್ನಿಯು ಕೈಲಾಸ ಮಂದಿರಕ್ಕೆ ಸಾಗಿ ಬಂದಂತಾಗಿದೆ.

ಎಂದು ಹೇಳಿದ ಅಣ್ಣನಾಜ್ಞೆಯ । ನಿಂದು ಆಲಿಸಿ ಘೋರ ನಗೆಯಿಂ।
ದಿಂದು ಬಂದಿತು ಅಳಿವು ತ್ರೈಮೂರ್ತಿಗಳ ಲೋಕಕ್ಕೇ॥
ಎಂದು ಮನದಲ್ಲಾಂತು ಮುದವನು । ಸಂದಿತೈ ತೋಳ್ತಿಂಡಿಗಪ್ಪಟ ।
ಸಂಧಿ ದೊರೆದುದು ಎಂದು ಗಹಗಹಿಸುತ್ತ ಮಣಿ ನಡೆದಾ ॥೬॥

ಸಾರಿ ಡಂಗುರ ಮೇರು ರಕ್ಕಸ । ವೀರರಂ ಕರೆಕರಿಸಿ ಮಲ್ಲನ ।
ಧೀರ ಹಸ್ತದಲಿಡಿಸಿದನು ತರತರದ ಉಡುಗರೆಯಾ॥
ಮೇರೆ ಮೀರಿದ ಧನವು ರತ್ನದ । ಹಾರ ಕೇಯೂರಾದಿ ಕನಕದ।
ಭಾರಿಯಗ್ಗದ ಮುತ್ತು ಮಾಣಿಕ ವಜ್ರ ವೈಢೂರ್ಯಾ ॥೭॥

**ಚಾರು ರಥಗಳು ರತ್ನ ಕೆಚ್ಚಿದ । ವೀರ ಖಡ್ಗೋನ್ನತದ ಗದೆತಲ ।**
**ವಾರ ವಿತ್ತ್ಯಾದಿಗಳು ದೊರೆತವು ಸಕಲ ವೀರರಿಗೇ ॥**
**ಮೇರು ದೈತ್ಯರ ಸೈನ್ಯ ಪತಿಗಳ । ಭಾರಿ ಯಗ್ಗದ ಶ್ರೇಷ್ಠ ಪಟುಗಳ ।**
**ವೀರ ರಥಿಕಾದಿಗಳ ಕರೆಸುತಲಿತ್ತ ಕಾಣಿಕೆಯಾ ॥೮॥**

**ಭಾವಾರ್ಥ -** (೬ರಿಂದ ೮) ಈ ಪ್ರಕಾರವಾಗಿ ಹೇಳಿದ ಅಣ್ಣನ ಆಜ್ಞೆಯನ್ನು ಕೇಳಿ, ತಮ್ಮನಾದ ಮಣಿಕಾಸುರನು ಘನಘೋರವಾಗಿ ನಕ್ಕು ಬಿಡ್ತಾ ಇದ್ದಾನೆ, "ಅಂತೂ ಈ ದಿನ ತ್ರಿಮೂರ್ತಿಗಳ ಲೋಕಗಳಿಗೆ ಅಳಿಗಾಲ ಬಂದಂತಾಯ್ತೂ" ಎಂದು ಮನಸ್ಸಿನಲ್ಲಿ ಯೇ ಸಂತೋಷಪಡ್ತಾ ಇದ್ದಾನೆ, ನಾವುಗಳೆಲ್ಲ ಬಹುದಿನಗಳಿಂದ ನಮ್ಮ ತೋಳ್ಬಲ ತೋರಿಸುವದಕ್ಕೆ ಅವಕಾಶವೇ ಸಿಕ್ಕಿರಲಿಲ್ಲಾ!.. ಈಗ ಮಾತ್ರ ನಮ್ಮ ಭುಜಬಲದ ಪರಾಕ್ರಮವನ್ನು ಪ್ರಕಟಗೊಳಿಸೋದಕ್ಕೆ ಇದೊಂದು ಸರಿಯಾದ ಸಮಯ ಸಿಕ್ಕಂತಾಯ್ತೂ" ಅಂತಾ ಸಂತೋಷದಿಂದ ಗಹಗಹಿಸಿ ನಗುತ್ತಾ ಧೀರನಾದ ಆ ಮಣಿಕಾಸುರನು ತನ್ನ ಮುಂದಿನ ಕರ್ತವ್ಯಗಳ ಕಡೆಗೆ ಗಮನಕೊಡ್ತಾ ಇದ್ದಾನೆ, ರಾಜ್ಯದಲ್ಲೆಲ್ಲಾ ಡಂಗುರ ಸಾರಿಸಿ, ಮಹಾ ಮಹಾ ವೀರರೂ, ಧೀರರು, ರಥ ಕುದುರೆಗಳನ್ನೋಡಿಸುವ ನಿಪುಣರೂ, ಮಾವುತರು, ಆ ಖಂಡ ಸೇನಾ ಬಲವೆಲ್ಲ ಅರಮನೆಗೆ ಬಂದು, ಮಲ್ಲ ಮಹಾ ಚಕ್ರವರ್ತಿಯಿಂದಾ ವೀರೋಚಿತ ವಿಳ್ಯಪಡೆದು, ಸಮರಾಂಗಣಕ್ಕೆ ಹೊರಡತಕ್ಕದ್ದೂ ಽ" ಅಂತಾ ಇಡೀ ರಾಜ್ಯದಲ್ಲೆಲ್ಲ ಡಂಗುರಸಾರಿದಾಗ, ಕೋಟ್ಯಾವಧಿಯ ದೈತ್ಯ ವೀರರು ಅರಮನೆಯ ಸಭಾಂಗಣಕ್ಕೆ ಬರ್ತಾ ಇದ್ದಾರೆ. ಹಾಗೂ ಸಮರ್ಥ ವೀರನಾದಂಥಾ ಮಲ್ಲಾಸುರನ ವೀರ ಹಸ್ತದಿಂದ ತರತರದ ಉಡುಗೊರೆಗಳನ್ನು ಪಡೆದುಕೊಂಡು, ಮಹಾರಾಜನಿಗೆ ಜೈ ಜೈ ಕಾರಮಾಡುತ್ತ, ಸಮರ ಸಿದ್ಧತೆಯೊಂದಿಗೆ ವೀರ ಗರ್ಜನೆ, ಮಾಡುತ್ತ ಸಮರಾಂಗಣದತ್ತ ಹೆಜ್ಜೆ ಹಾಕ್ತಾ ಇದ್ದಾರೆ, ವೀಳ್ಯದ ರೂಪದಲ್ಲಿ ತಮಗೆ ಚಕ್ರವರ್ತಿಯಿಂದ ದೊರೆತ, ಧನ, ರತ್ನಹಾರ, ಕನಕ, ಕೇಯೂರ, ಬಹು ಶ್ರೇಷ್ಠವಾದ ಮುತ್ತಿನ ಸರ, ಮಾಣಿಕ್ಯದುಂಗುರ, ವಜ್ರ ವೈಢೂರ್ಯಾದಿಗಳನ್ನೆಲ್ಲ ಸಂತೋಷದಿಂದ ಸ್ವೀಕರಿಸ್ತಾ ಇದ್ದಾರೆ.

ಎಷ್ಟೋ ವೀರರಿಗೆ ರತ್ನ ಕೆಚ್ಚಿದ ರಥಗಳು ಪ್ರಾಪ್ತವಾಗ್ತಾ ಇದ್ದಾವೆ, ಇನ್ನೆಷ್ಟೋ ಜನರಿಗೆ ರತ್ನಗೆಚ್ಚಿದ ವೀರ ಖಡ್ಗಗಳೂ, ಗದೆಗಳು ತಲವಾರಗಳೂ ಧನುರ್ಬಾಣಗಳೂ, ಹೀಗೆ ಅಸಂಖ್ಯಾತವಾದ ಉಡುಗೊರೆಗಳನ್ನು, ಮಲ್ಲ ದೈತ್ಯನು ವೀರ ವಿಳ್ಯದೊಂದಿಗೆ ಕಾಣಿಕೆಯಾಗಿ ನೀಡ್ತಾ ಇದ್ದಾನೆ. ಒಟ್ಟಾರೆ ಅದೊಂದು ಸಂಭ್ರಮವೋ ಸಂಭ್ರಮ! ರಾಕ್ಷಸ ವೀರರೆಲ್ಲ ಚಕ್ರವರ್ತಿಯಾದ ಮಲ್ಲಾಸುರನಿಗೆ ಜಯಜಯಕಾರ ಮಾಡುತ್ತ ಸಮರಾಂಗಣದತ್ತ ಪ್ರಯಾಣ ಬೆಳಿಸ್ತಾ ಇದ್ದಾರೆ.

ಕಾಲನೇತ್ರ, ಕರಾಳ ಖರನಖ । ಲೋಲ ನೇತ್ರ, ಬುಧಾಂತ ಬರ್ಬರ।
ಶೂಲಗ್ರೀವ ತ್ರಿಕರ್ಣ ನಿರ್ಜರರಾರಿ ಉದಗ್ರಾಮ್ಯಾ॥
ಕಾಲದಂಡನು ಕ್ರೂರ ದೃಷ್ಟಿಯು । ಶೂಲರೋಮ ವಿನಾಶ ದುರ್ಮದ ।
ನೀಲಿಯಾನನ ವೀರ ಖಾದನರಿಂಗೆ ಬಲವಿತ್ತೂ ।೯॥

ಕಾಲರಂದದಿ ಕಾದಿ ದಿವಿಜರ । ಸೋಲಿಸುವದೆಂದಾಜ್ಞೆಯಿಕ್ಕಲು ।
ಸಾಲು ಸೇನಾಪತಿಗಳಿದ್ದರು ಕುಕುಬನಿಕ್ಕು ತಲೀ ॥
ಸಾಲು ಭೇರಿಯು ಲಕ್ಷ ಮೊಳಗಿತು । ಕಾಳಿ ಕೋವಿ ಯು ರಣದ ಝೂಗಟೆ ।
ತಾಳವಿಲ್ಲದೆ ಮೊಳಗಿ ಅಬ್ಬರ ಗೊಳಿಸಿದವು ಭುವಿಯಾ ।೧೦॥

**ಭಾವಾರ್ಥ-** ಮಲ್ಲ ಚಕ್ರವರ್ತಿಯು ತನ್ನ ಸೇನಾಪತಿಗಳಾದಂಥಾ ಕಾಲನೇತ್ರ, ಕರಾಳ, ಖರನಖ, ಲೋಲನೇತ್ರ, ಬುಧಾಂತ, ಬರ್ಬರ, ಶೂಲಗ್ರೀವ, ತ್ರಿಕರ್ಣ, ನಿರ್ಜರಾರಿ, ಉದಗ್ರಾಮ್ಯಾ ಕಾಲದಂಡ, ಕ್ರೂರದೃಷ್ಟಿ, ಶೂಲರೋಮ, ವಿನಾಶ, ದುರ್ಮದ, ನೀಲಿಯಾನನ, ವೀರಖಾದನ, ಇವರೆಲ್ಲರಿಗೂ ಬಹು ಅಮೂಲ್ಯವಾದ ಕಾಣಿಕೆ, ಹಾಗೂ ಚತುರಂಗ ಬಲಗಳನಿತ್ತನು. ಮತ್ತೂ ರಣರಂಗದಲ್ಲಿ ಕಾಲರಂತೆ ಕಾದಾಡಿ, ದೇವತೆಗಳ ಸೈನ್ಯವನ್ನೆಲ್ಲ ಸೋಲಿಸತಕ್ಕದ್ದೆಂದು ಆಜ್ಞೆಮಾಡಿದನು. ಆಗ ಸಾಲು ಸಾಲಾಗಿ ನಿಂತಿದ್ದ ಸೇನಾಪತಿಗಳೆಲ್ಲರೂ ರಾಜಾಜ್ಞೆಗೊಪ್ಪಿ, ಸಂತಸದಿಂದ ಕೇಕೆ ಹಾಕಿದರು. ಕೂಡಲೇ ಲಕ್ಷೋಪಲಕ್ಷ ರಣಭೇರಿಗಳು ಮೊಳಗತೊಡಗಿದವು. ಕಾಳಿ, ಕೋವಿ, ರಣ ಝೂಗಟೆಗಳು ತಾಳಗೆಟ್ಟು ಚೀತ್ಕಾರ ಮಾಡತೊಡಗಿದವು. ಆ ಶಬ್ದದ ಅಬ್ಬರಕ್ಕೆ ಭೂಮಿಯು ತಲ್ಲಣಿಸತೊಡಗಿತು.

**ಸಿಡಿದವೈ ಆಗಸದಿ ಚುಕ್ಕಿಗ । ಒಡೆದು ಪುಡಿಪುಡಿಯಾಗಿ ಉದುರುತ ।**
**ಸಿಡಿದು ಬೀಳಲು ಭೂಮಿ ಅದರಿಂ ಬೆಚ್ಚಿ ಬಾಯ್ದೆರೆಯೇ ॥**
**ನಡುಗಿ ಪೋದವು ಸಪ್ತ ಸಾಗರ । ಗುಡುಗು ಮಿಂಚೇಳುತ್ತ ಆನಭ ।**
**ಪಿಡುಗುಗೊಂಡಂತಾಯ್ತು ಶರಧಿಗಳುಕ್ಕಿ ಮಿಕ್ಕಿದವೂ ॥೧೧॥**

**ಧರಣಿ ಯಲುಗಲು ಬೆಚ್ಚಿದಾ ನವ। ತರುಣಿಯರ್ ಅಪ್ಪುತ್ತ ಪತಿಗಳ ।**
**ಭರದಿ ಅನ್ಯ ಸ್ಥಳಕೆ ಓಡಿದರೈ ಕಿರಾತಕರು ॥**
**ಕರಿಯ ಬೆನ್ನೇರುತ್ತ ಮಣಿಕನು । ವರ ಸಹಸ್ರಾಕ್ಷದಲಿ ಮಲ್ಲನು।**
**ಮೆರೆದು ಮಿಂಚಿದರಬಬ ಆರುವ ದೀಪ ಉರಿದಂತೇ ॥೧೨॥**

**ಶಬ್ದಾರ್ಥ-** ಸಿಡಿ = ಚೂರುಚೂರಾಗು; ಚುಕ್ಕಿ = ಚಿಕ್ಕೆ; ಸಪ್ತಸಾಗರ = ಏಳೂ ಸಮುದ್ರ; ನಭ = ಆಕಾಶ; ಪಿಡುಗುಗೊಂಡಂತಾಗು = ವಿನಾಶಕ್ಕೆ ಬಂದಂತಾಗು; ಉಕ್ಕಿ ಮಿಕ್ಕಿದವು = ತುಂಬಿ ಹೆಚ್ಚಾದವು; ಧರಣಿಯಲುಗಲು = ಭೂಕಂಪನವಾಗಲು; ಕಿರಾತಕ = ಬೇಡ ಜನ; ಸಹಸ್ರಾಕ್ಷ = ಮಲ್ಲಾಸುರನ ಎತ್ತರವಾದ ರಥದ ಹೆಸರು; ಮೆರೆದು = ಹೊಳೆದು.

**ಭಾವಾರ್ಥ -** ಆ ಭೀಕರವಾದ ಶಬ್ದ ಗರ್ಜನೆಯಿಂದ ಆಕಾಶದಲ್ಲಿದ್ದ ಅನೇಕ ನಕ್ಷತ್ರಗಳು ಒಡೆದು ಪುಡಿ ಪುಡಿಯಾಗಿ ನೆಲಕ್ಕೆ ಬಿದ್ದವು. ಆದರಿಂದಾಗಿ ಭೂಮಿಯು ಬೆಚ್ಚಿ ಬಾಯ್ಬಿಡ ತೊಡಗಿತು. ಸಪ್ತ ಸಾಗರಗಳು ಗದಗದನೇ ನಡುಗಿ ಹೋದವು. ಆಕಾಶದಲ್ಲಿ ಗುಡುಗು ಮಿಂಚುಗಳು ಆರ್ಭಟಿಸತೊಡಗಿ, ಗಗನವೆಲ್ಲ ಪಿಡುಗಿನ ಮಡುವಾಗಿ ಮಾರ್ಪಟ್ಟಿತು. ಸಾಗರಗಳು ಉಕ್ಕಿ ದಾರಿಸಿಕ್ಕತ್ತ ಹರಿಯ ತೊಡಗಿದವು. ಭೂಮಿಯು ಗದಗದನೇ ನಡುಗ

ತೊಡಗಲು ಆ ಪ್ರದೇಶದಲ್ಲಿ ವಾಸವಾಗಿದ್ದ ಕಿರಾತ ತರುಣಿಯರು ಭಯಗೊಂಡು ತಮ್ಮ ತಮ್ಮ ಗಂಡಂದಿರನ್ನಪ್ಪಿಕೊಂಡರು. ಮತ್ತೂ ಆ ಪ್ರದೇಶವನ್ನು ಬಿಟ್ಟು ಗಂಡಂದಿರ್ರೊಂದಿಗೆ ಬೇರೆ ಸ್ಥಳಕ್ಕೆ ಓಡಿ ಹೊರಟರು, ಆನೆಯ ಬೆನ್ನ ಮೇಲೆ ಹತ್ತಿದ್ದ ಮಣಿಕಾಸುರನೂ, ಸಹಸ್ರಾಕ್ಷವೆಂಬ ಎತ್ತರದ ರಥದಲ್ಲಿ ಕುಳಿತ ಮಲ್ಲಾಸುರನೂ, ಆರುವ ದೀಪವು ಕೊನೆಗಾಲದಲ್ಲಿ ಪ್ರಕಾಶ ಮಾನವಾಗಿ ಉರಿಯುವಂತೆ, ಒಳ್ಳೇ ಜಾಜ್ವಲ್ಯ ಮಾನವಾಗಿ ಗೋಚರಿಸ ತೊಡಗಿದರು.

**ಇತಿ, ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್ ವಿರಚಿತ, ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್ "ಮಲ್ಲದೈತ್ಯ ಸೈನ್ಯ ವರ್ಣನ" ನಾಮಕ ದ್ವಾದ ಶೋಧ್ಯಾಯಃ ||**

**ಅಂತು ಅಧ್ಯಾಯ ೧೨ಕ್ಕಂ, ಪದ ೧೨ಕ್ಕಂ, ಒಟ್ಟು ಪದ ೧೭೩ ಕ್ಕಂ, ಮಂಗಲಮಸ್ತು.**

**ಏಳುಕೋಟಿಗ! ಏಳುಕೋಟಿಗ!! ಏಳುಕೋಟಿಗೋ !!! ಸಾಂಗಬಲೋ!**



# ಅಧ್ಯಾಯ-೧೩ ತ್ರಯೋದಶಾಧ್ಯಾಯಃ । ಮಲ್ಲಾಸುರ ಸೈನ್ಯ ವಧ

ಸೂಚನೆ

ಕೊಬ್ಬಿನಿಂದುಬ್ಬುಬ್ಬಿ ಬರುತಿಹ ।
ಅಬ್ಬರದ ದಾನವರ ಸೇನೆಯ ।
ಮಬ್ಬು ಬಿಡಿಸುತಲಟ್ಟದನು ಯಮಪುರಿಗೆ ಷಣ್ಮುಖನೂ ॥

ಅರ್ಥ:- "ಸೊಕ್ಕಿನಿಂದ ಉಬ್ಬುಬ್ಬಿ ಯುದ್ಧಕ್ಕೆ ಬಂದ ದೈತ್ಯರ ಸೇನಾಬಲವನ್ನೆಲ್ಲ, ಶಿವ ಸಂಜಾತನಾದ ಷಣ್ಮುಖ ಸ್ವಾಮಿಯು ಸಂಹರಿಸಿ, ಅವರ ಸೊಕ್ಕನ್ನು ಮುರಿದು ಯಮಲೋಕಕ್ಕೆ ಕಳಿಸಿದನೆಂದು" ಸೂಚಿಸುತ್ತಾ ಕವಿಯು ತನ್ನ ಮುಂದಿನ ಕಥಾ ಭಾಗವನ್ನು ಈ ರೀತಿಯಾಗಿ ವರ್ಣಿಸಿ ಹೇಳ್ತಾ ಇದ್ದಾನೆ, ಅದೇನೆಂದರೆ

ಗಿರಿಯು ಮಣಿಚೂಲದಲಿ ನೆರೆದಿಹ । ಪರಮ ದೈತ್ಯರ ನಿಕರ ದಂಡಿನ ।
ತುರಗ ಕರಿ ರಥ ಸಿಂಧ ವೀಕ್ಷಿಸಿ ಶಿವನು ಸುತಗೆಂದಾ ॥
ತರಳನೇ ನೀ ನಂಜದಿರು ಮಮ । ಹರಕೆ ನಿನ್ನಯ ಶಿರದೊಳಾಂತಿದೆ ।
ತರಿಯುವದು ರಕ್ಕಸರ ನಿಕ್ಕರಿಸುತ್ತ ಕಾದುವದೂ ॥೧॥

ಮರೆಯು ಮೋಸದ ಯುದ್ಧ ಸಲ್ಲದು । ಧರಣಿ ವೀರರ ಮನವು ಮೆಚ್ಚುವ ।
ತೆರದಿ ಹೋರಾಡುವದು ಅಂತ್ಯದಿ ನಿಮಗೆ ಜಯವಿಹುದೂ ॥
ಕರೆಸಿ ಬೆಸೆ ಸರ್ವರಿಗು ಯುದ್ಧದ । ಪರಿಯ ಮೀರದಿರಲ್ಕೆ ಬಿಡುವಿನ ।
ಮೊರೆತ ಮೊಳಗಿದ ಮೇಲೆ ಆಯುಧವೆತ್ತದಿರಲೆನುತಾ ॥೨॥

ತರಣಿಯುದಯಕೆ ಸಾರು ಯುದ್ಧವ । ಮೊರೆತು ಮೊಳಗಲಿ ಕಾಳಿ ಕೋವಿಯು ।
ಭರದ ಬವರಕೆ ಬರಲಿ ಸಾಗುತ ದೈತ್ಯಾರಾ ಸೇನೆ ॥
ಕರುಣವಿಲ್ಲದೆ ಕಾದು ಕಡಿಯಿರಿ । ಶರಣು ಬಂದವರೆರಡು ಹಸ್ತದ ।
ಹಿರಿಯ ಬೆರಳಂತರಿದು ಬಿಡುವದು ಅವರ ಜೀವಿತದೀ॥೩॥

ಗರುವ ವೆಂದಿಗು ಬೇಡ ಬವರದಿ। ಮರೆಯ ಕೂಡದು ಆತ್ಮ ಸ್ಥೈರ್ಯವ ।
ವರ ಪ್ರಭಾಕರನಸ್ತ ಕಾಲಕೆ ನುಡಿಸಿ ಭೇರಿಗಳಾ॥
ವಿರಮ ಘೋಷಿಸು ಶತ್ರು ಸೇನೆಗೆ । ತೊರೆದು ನೀವೂ ನಿಮ್ಮ ಪಡೆಗಳಿ ।
ಗುರುತರದ ಮೃಷ್ಟಾನ್ನ ಭುಜಿಸುವದವರವರ ಬಗೆಯಾ॥೪॥

ಶಬ್ದಾರ್ಥ - (೧ರಿಂದ ೪) ನೆರೆ = ಕೂಡು; ಪರಮ = ಶ್ರೇಷ್ಠ; ನಿಕರ = ಗುಂಪು; ತುರಗ = ಕುದುರೆ, ಕರಿ = ಆನೆ, ಸಿಂಧ = ಪತಾಕೆಗಳು; ತರಳನೇ = ಮಗನೇ; ಶಿರದೊಳಾಂತಿದೆ = ತಲೆಗೆರಕ್ಷೆಯಾಗಿದೆ; ತರಿ = ಕಡಿ; ಇಕ್ಕರಿಸು = ಹೊಡೆ; ಕಾದುವದು = ಯುದ್ಧ ಮಾಡುವದು; ಸಲ್ಲದು = ಬೇಡ; ಬೆಸೆ = ಹೇಳು; ಪರಿ = ರೀತಿ; ಬಿಡುವಿನ ಮೊರೆತ ಮೊಳಗಿದ ಮೇಲೆ = ವಿಶ್ರಾಂತಿ ಸೂಚನೆ ಕೇಳಿದ ಮೇಲೆ; ತರಣಿ = ಸೂರ್ಯ; ಬವರ = ಯುದ್ಧ; ಹಿರಿಯ ಬೆರಳಂ ತರಿದು = ಹೆಬ್ಬೆಟ್ಟುಗಳನ್ನು ಕತ್ತರಿಸಿ; ಜೀವಿತದಿ = ಜೀವದಿಂದ; ಗರುವ = ಸೊಕ್ಕು; ಆತ್ಮಸ್ಥೈರ್ಯ = ಆತ್ಮ ಬಲ; ಪ್ರಭಾಕರ = ಸೂರ್ಯ; ಉರುತರದ = ಶ್ರೇಷ್ಠವಾದ; ಮೃಷ್ಟಾನ್ನ = ಪಕ್ವಾನ್ನ; ಅವರವರಬಗೆಯ = ಇಷ್ಟಾನುಸಾರವಾಗಿ.

ಭಾವಾರ್ಥ (೧ರಿಂದ೪) ಶಿವನು ಮಣಿಚೂಲಗಿರಿ ಪ್ರದೇಶದಲ್ಲಿ ಕೇಂದ್ರೀಕೃತವಾಗಿದ್ದ ದೈತ್ಯರ ಪರಿವಾರವನ್ನೂ, ಆನೆ, ಕುದುರೆ, ರಥ, ಕಾಲಾಳು, ಬಹು ಸಂಖ್ಯಾತವಾದ ಪತಾಕೆಗಳನ್ನು ನೋಡಿ, ತನ್ನ ಮಗನಾದ, ಹಾಗೂ ಸೇನಾಪತಿಯಾದ ಷಣ್ಮುಖನನ್ನು ಕುರಿತು, ಹೀಗೆ ಹೇಳ್ತಾನೆ "ಕಂದಾS! ಅಸಂಖ್ಯಾತವಾದ ಈ ದೈತ್ಯ ಸೇನೆಯನ್ನು ನೋಡಿ ನೀನು ಕಂಗೆಡ ಬೇಡ! ನಿನಗೆ ಸದಾಕಾಲ ನನ್ನ ಹರಕೆಯು ರಕ್ಷಕವಾಗಿದೆ. ರಾಕ್ಷಸರ ಸೇನೆಯನ್ನು ಯಾವ ಕಕ್ಕುಲಾತೆಯನ್ನೂ ಇಡದಂತೆ ಕತ್ತರಿಸಿ ಹಾಕುತ್ತ ಸಾಗಿರಿ!.. ಮರೆ - ಮೋಸದ ಯುದ್ಧವನ್ನು ಮಾತ್ರ ಯಾವ ಕಾಲಕ್ಕೂ ಮಾಡಬೇಡಿರಿ!.. ವೀರ ಪುರುಷರು, "ಹೌದಪ್ಪಾದು" ಎನ್ನುವ ರೀತಿಯಲ್ಲಿ ಸಮರ್ಥವಾಗಿ ಹೋರಾಡಿರಿ!... ಯುದ್ಧಾಂತದಲ್ಲಿ ಜಯವು ನಿಮಗೆ ಕಟ್ಟಿಟ್ಟ ಬುತ್ತಿಯಾಗಲಿದೆ.

ನೀನು ಈಗಿಂದಿಗಲೇ ನಿನ್ನ ಮಾಂಡಲಿಕ ಸೇನಾಪತಿಗಳನ್ನೆಲ್ಲ ಕರಿಸಿ, ಅವರಿಗೆ ಯುದ್ಧ ನೀತಿಯನ್ನು ಸರಿಯಾಗಿ ತಿಳಿಸಿಹೇಳು! ವಿರಾಮದ ಭೇರಿಗಳು ಬಾರಿಸಿದ ನಂತರ, ಯಾರೂ ಆಯುಧಗಳನ್ನು ಧರಿಸಿ, ಶತ್ರು ಸೇನೆಯನ್ನು ಸಂಹರಿಸದಂತೆ ಎಚ್ಚರಿಕೆ ನೀಡು! ನಾಳಿನ ಪ್ರಾತಃಕಾಲಕ್ಕೆ ಸರಿಯಾಗಿ ನೀನು ಯುದ್ಧವನ್ನು ಘೋಷಿಸು!... ಯುದ್ಧ ವಾದ್ಯಗಳಾದ ಕಾಳಿ, ಕೋವಿ, ಭೇರಿ, ಡಮರುಗ, ನಪೂರಿ, ಮುಂತಾದ ರಣವಾದ್ಯಗಳು ಮೊಳಗಲಿ!.. ಆ ಶಬ್ದ ಕೇಳಿದ ದೈತ್ಯ ಸೇನೆಯು ಸಜ್ಜಾಗಿ ಯುದ್ಧಕ್ಕೆ ಬರಲಿ!!... ಆಗ ನೀವು ಕರುಣೆಯಿಲ್ಲದೇ ಪರಾಕ್ರಮದಿಂದ ಯುದ್ಧಮಾಡಿ, ಶತ್ರು ಸೇನೆಯನ್ನು ವಿಧ್ವಂಸಗೊಳಿಸಿರಿ! ಶರಣಾಗತರಾದ ವೈರಿಗಳನ್ನು ಕೊಲ್ಲಬೇಡಿರಿ... ಅವರ ಎರಡೂ ಹಸ್ತಗಳ ಹೆಬ್ಬೆರಳುಗಳನ್ನು ಕತ್ತರಿಸಿಕೊಂಡು, ಜೀವದಿಂದ ಬಿಟ್ಟು ಬಿಡಿರಿ! ಇದು ಯುದ್ಧ ನೀತಿಯ ಸ್ವರಕ್ಷಕ ತಂತ್ರವಾಗಿದೆ. ಇದರಿಂದ ಶರಣಾಗತನಾದವನ ಜೀವನಕ್ಕೂ ಹಾನಿಯಿರುವದಿಲ್ಲ "ಮಗೂ ಷಣ್ಮುಖಾ! ಯುದ್ಧ ಸಮಯದಲ್ಲಿ ಯಾರಿಗೂ ಗರ್ವವೆಂಬುದು ಬರಕೂಡದು. ಆತ್ಮಸ್ಥೈರ್ಯವನ್ನು ಯಾವ ಕಾಲಕ್ಕೂ ಬಿಟ್ಟು ಕೊಡಕೂಡದು. ಸೂರ್ಯೋದಯದ ವೇಳೆಗೆ ಸರಿಯಾಗಿ ಯುದ್ಧ ಸಾರಿದ ನೀವುಗಳು, ಸೂರ್ಯಾಸ್ತವಾಗುವ ಸಮಯಕ್ಕೆ ಸರಿಯಾಗಿ ವಿರಾಮದ (ಬಿಡುವಿನ) ಭೇರಿಗಳನ್ನು

ನುಡಿಸಿ, ಶತ್ರು ಸೇನೆಗೆ ಸೂಚನೆ ಕೊಡು! ಆ ವೇಳೆಯಲ್ಲಿ ನೀವೂ ಯುದ್ಧ ಕಾರ್ಯಕ್ಕೆ ವಿರಾಮಕೊಟ್ಟು, ನಿಮ್ಮ ನಿಮ್ಮ ಪಡೆಗಳ ಯೋಗಕ್ಷೇಮ ನೋಡಿಕೊಂಡು, ಅವರವರ ಇಷ್ಟಕ್ಕೆ ಮೆಚ್ಚುಗೆಯಾದ ಪಕ್ವಾನ್ನಗಳನ್ನು ಅವರವರಿಗೆ ಸಂತೃಪ್ತಿಯಾಗುವಂತೆ ನೀಡಿಸಿ, ಸಕಲ ಸೇನಾಬಲವನ್ನೆಲ್ಲ ತುಷ್ಟಿಪಡಿಸು!'' ಎಂಬುದಾಗಿ ನುಡಿದು, ಶಿವನು ಷಣ್ಮುಖನಿಗೆ ಯುದ್ಧ ನೀತಿಯನ್ನು ವಿವರವಾಗಿ ತಿಳಿಸಿಕೊಟ್ಟನು.

ಎಂದು ಹಿತ ನುಡಿಗಳನು ಪೇಳಿದ। ತಂದೆಯಣತಿಗೆ ಮಣಿದು ಷಣ್ಮುಖ।
ಚಂದದಿಂದಾ ಸಕಲ ಸೇನೆಗೆ ನೀತಿ ಬೆಸಗೊಂಡಾ॥
ಮುಂದೆ ಪ್ರತ್ಯೂಷ ದಲಿ ಸೇನೆಗ । ಳೊಂದರಾ ಮುಂದೊಂದು ನಿಲ್ಲುತ।
ಸಂಧಿಗಾಯುತ ನಿಂದವೈ ಸರ್ವಾಸ್ತ್ರಗಳ ಧರಿಸೀ ।೩॥

ಹೊಡೆದಾವಾ ಭೇರಿಗಳು ಢಮ ಢಮ । ನುಡಿದವೈ ಕಾಳಿಗಳು ಕೋವಿಯು।
ಜಡಿಯಲಾಯಿತು ಲಕ್ಷ ಡಮರುಗ ಕಿವಿಯು ಗಡಚಿಕ್ಕೀ ॥
ಗುಡುಗಿದರು ರಾಕ್ಷಸರು ಅಬ್ಬರ । ವಿಡುತ ಲಕ್ಷಾವಧಿಯ ಸಿಂಧವ।
ಪಿಡಿದು ಮಲ್ಲಗೆ ಜಯಜಯಾ ಎಂದೆನುತ ಬೊಬ್ಬಿರಿಯೀ ।೬॥

ದುಡುಕಿತ್ತೈ ಆ ನುಡಿಯ ಕೇಳುತ । ಪಡೆಯು ರೋಷಾವೇಶದಿಂದಲಿ ।
ಜಡಿದು ಕೊಲ್ಲಿರಿ ಖೂಳ ದೈತ್ಯರ ನೆನುತ ಸುರಸೇನೆ ॥
ಪಿಡಿದ ಕತ್ತಿಯು ಢಾಲ ಸಪ್ಪಳ । ಖಡ ಖಡಾ ಎಂತೆಂಬ ನಾದವು ।
ಪೊಡವಿ ಆಗಸಕೇಕಗೊಂಡಿತು ಕಾಂಬ ಪರ್ಯಂತಾ ।೭॥

ಶಬ್ದಾರ್ಥ - (೫,೬,೭) ಅಣತಿ = ಅಪ್ಪಣೆ; ಮಣದು = ತಲೆಬಾಗಿ; ಷಣ್ಮುಖ = ಕುಮಾರಸ್ವಾಮಿ; ಪ್ರತ್ಯೂಷಿ = ನಸುಕು; ಸಂಧಿ ಸಮಯ; ಗುಡುಗು = ಆರ್ಭಟಮಾಡು; ಸಿಂಧ = ಪತಾಕೆ; ಬೊಬ್ಬೆರಿಯೆ = ಕೂಗಾಡಲು; ರೋಷಾವೇಶದಿಂದಲಿ = ಕ್ರೋಧ ಮತ್ತೂ ಆವೇಶ ಭರಿತರಾಗಿ; ಸುರಸೇನೆ = ದೇವತೆಗಳ ಸೈನ್ಯ; ಢಾಲು = ಆಮೆಯ ಬೆನ್ನೆಲಿವಿನಿಂದ ಸಿದ್ಧಪಡಿಸಿದ ಖಡ್ಗದ ಆಘಾತವನ್ನು ಸೈರಿಸುವ ಗಟ್ಟಿಯಾದ ಸಾಧನ (ಇದನ್ನು ಯುದ್ಧ ಕಾಲದಲ್ಲಿ ಕತ್ತಿಹೋರಾಟಗಾರರು ಎಡಗೈಯ್ಯಲ್ಲಿ ಹಿಡಿದುಕೊಂಡು, ವೈರಿಗಳ ಖಡ್ಗಾಘಾತಕ್ಕೆ ಅಡ್ಡಹಿಡಿವರು) ಕಾಂಬ ಪರ್ಯಂತ = ಕಣ್ಣಿಗೆ ಕಾಣುವಷ್ಟು ದೂರದುದ್ದಕ್ಕೂ).

**ಭಾವಾರ್ಥ - (೫,೬,೭)** ಈ ಪ್ರಕಾರವಾಗಿ ಯುದ್ಧ ನೀತಿಯನ್ನು ಹೇಳಿದ ತಂದೆಯ ಹಿತೋಕ್ತಿಗಳನ್ನು ಕೇಳಿ, ಷಣ್ಮುಖಸ್ವಾಮಿಯು ತಲೆಬಾಗಿ ನಮಸ್ಕರಿಸಿದನು ಮತ್ತೂ ಸಕಲ ದೇವತೆಗಳ ಸೈನ್ಯಗಳಿಗೆ ತಂದೆ ಹೇಳಿದ, ಆ ಯುದ್ಧ ನೀತಿಯನ್ನು ಪ್ರಚುರ ಪಡಸಿದನು. ಮರುದಿವಸ ನಸುಕಿನಲ್ಲಿಯೇ, ದೇವ ಸೇನೆಗಳು ಒಂದರ ಮುಂದೊಂದು ಶಸ್ತ್ರ ಸುಸಜ್ಜಿತವಾಗಿ ನಿಂತುಕೊಂಡು, ಯುದ್ಧದ ಸಮಯ ಸೂಚನೆಗಳನ್ನು ನಿರೀಕ್ಷಿಸ ತೊಡಗಿದವು.

ಹೀಗಿರುವಾಗ ಒಮ್ಮಿಂದೊಮ್ಮಿಲೆ ರಣಭೇರಿಗಳು ಢಮಢಮ ಎಂದು ಸಪ್ಪಳ ಮಾಡತೊಡಗಿದವು. ಕಾಳಿ, ಕೋವಿ ಮೊದಲಾದ್ದ ರಣವಾದ್ಯಗಳು ಮೊಳಗತೊಡಗಿದವು. ಲಕ್ಷೋಪಲಕ್ಷ ಡಮರುಗಗಳು ಕಿವಿಗಳು ಗಡಚಿಕ್ಕುವಂತೆ ನುಡಿಯ ತೊಡಗಿದವು. ಎದುರಿನ ರಾಕ್ಷಸ ಪಡೆಗಳಲ್ಲಿದ್ದ ವೀರರು ಆರ್ಭಟಿಸುತ್ತ ಲಕ್ಷಾವಧಿಯ ವೀರ ಪತಾಕೆಗಳನ್ನು ಹಿಡಿದುಕೊಂಡು, ''ಚಕ್ರವರ್ತಿಮಲ್ಲಾಸುರನಿಗೆ ಜಯವಾಗಲೀ!'' ... ಎಂದು ಪುನಃ ಪುನಃ ನುಡಿಯುತ್ತ ಕೇಕೆ ಹಾಕತೊಡಗಿದರು.

ಆ ಅಬ್ಬರದ ನುಡಿಗಳನ್ನು ಆಲಿಸುತ್ತಲೇ ದೇವಸೇನೆಯು ತನ್ನ ಸಂಯಮನ ಕಳೆದುಕೊಂಡು, ರೋಷ ಮತ್ತೂ ಆವೇಶಗಳಿಗೊಳಗಾಗಿ ''ಹೀಗೆ ಅವಾಚ್ಯ ನುಡಿ ಯುತ್ತಿರುವ ದೈತ್ಯ ಸೇನೆಯನ್ನು ಬಡಿದು ಕೊಲ್ಲಿರಿ!... ಆ ಖೂಳ ರಾಕ್ಷಸರನ್ನು ಜೀವದಿಂದ ಬಿಡಬೇಡಿರಿ!''.. ಎಂದು ಆರ್ಭಟಿಸುತ್ತ ಕತ್ತಿಯುದ್ಧವನ್ನು ಪ್ರಾರಂಭಿಸಿಯೇ ಬಿಟ್ಟರು. ಲಕ್ಷೋಪಲಕ್ಷ ಹಿರಿದ ಕತ್ತಿಯು ಖಣಖಣಾತ್ಕಾರಗಳಿಗೂ, ಢಾಲುಗಳಿಂದ ಉದ್ಭವಿಸಿದ ಕಿವಿಗಡಚಿಕ್ಕುವ ಶಬ್ದಗಳಿಗೂ, ಭೂಮಿಯು ತಲ್ಲಣಿಸಿ ಹೋಯಿತು. ಭೂಮಿಯಿಂದ ಆಕಾಶದವರೆಗೂ, ಅಷ್ಟೇ ಅಲ್ಲಾ, ಕಣ್ಣಿಗೆ ಕಾಣುವ ದೂರದುದ್ದಕ್ಕೂ ದೇವ ದಾನವರ ಸೇನಾಪಡೆಗಳು ಹಬ್ಬಿಕೊಂಡು, ಯುದ್ಧ ಮಾಡತೊಡಗಿದವು.

ತೂಗಿ ಕಿವಿವರೆಗೆಳೆದು ಕಣೆಗಳ । ತಾಗಿಸುವ ವೀರಾಧಿ ವೀರರು ।
ಲಾಗುವೇಗವ ನುಸುಳಿ ತರಿಯುವ ಖಡ್ಗ ಧಾರಿಗಳೂ ॥
ವೇಗ ದಾಳಿಗಳೇನು ಪೇಳಲಿ । ಸಾಗುತಿರೆ ಇಬ್ಬಣದ ಮಧ್ಯದಿ।
ಕೂಗುತಿರ್ದರು ಭಾಪು,ಭಲೆ, ಎಂತೆಂಬ ಶಬ್ದಗಳಾ ॥೮॥

ಧಾರುಣಿಯ ತುಂಬಿರ್ದವೀರರ । ಸೋರು ರಕುತದಿ ಧರಣಿ ನೆನೆಯಿತು ।
ಚಾರು ರಥ ಕರಿ ಕುದುರೆ ಮಡಿದವು ಲಕ್ಷ ಸಂಖೆಯಲೀ ॥
ಹಾರಿ ಕಡಿಯುವ ಶೂರರಿಂದಲಿ। ಚೀರಿ ಸಾಯುವ ಸೇನೆಯಿಂದಲಿ।
ಮೋರೆ ಕಡಿದರು ಮುಂಡದಿಂದ್ಹೋರಾಡುವರ ಪರಿಯೂ ॥೯॥

ವೀರರೆಂದರೆ ಇವರೆ ಎಂಬಾ । ಘೋರ ಸತ್ಯವ ಸಾರುತಿರ್ದವು।
ವೀರ ಸ್ವರ್ಗವು ಇವರಿಗಲ್ಲದೆ ಹೇಡಿಗಳಿಗುಂಟೇ ॥
ಮೇರೆ ಇಲ್ಲದ ರಕ್ತನದಿಗಳು । ಸಾರಿಹೊರಟವು ತುಂಗೆಯತ್ತಲು ।
ಘೋರ ಭೀಕರವಾಗಿ ಕಂಗೊಳಿಸಿತ್ತು ಮಣಚೂಲ ॥೧೦॥

**ಎಲ್ಲಿ ನೋಡಿದಡಲ್ಲಿ ರಕುತವು । ಚೆಲ್ಲಿ ಹರಿಯಿತು ನದಿಗಳಂದದಿ।**
**ಹಲ್ಲೆಗೊಂಡಿಹ ಹೆಣಗಳೋಡಿದವಾ ಪ್ರವಾಹದಲೀ ॥**
**ಸೊಲ್ಲು ಸೊಲ್ಲಿಗು ರಕುತ ಹೆಚ್ಚುತ । ನಿಲ್ಲದೋಡಿತು ತುಂಗೆ ಮಡಿಲಿಗೆ ।**
**ಎಲ್ಲ ನೀರೂ ರಕ್ತ ರಂಜಿತವಾಗಿ ಮೆರೆದಿತ್ತೂ ॥೧೧॥**

**ಶಬ್ದಾರ್ಥ - (೮ರಿಂದ೧೧)** ಕಣೆ = ಬಾಣ; ತಾಗಿಸು = ಹೂಡಿಹೊಡೆ; ಲಾಗುವೇಗ = ಹಿಡಿತ ; ನುಸುಳಿ = ತಪ್ಪಿಸಿ; ಇಬ್ಬಣ = ಎರಡೂ ಪಕ್ಷ; ಮುಂಡ = ತಲೆಯೇ ಇಲ್ಲದ ದೇಹ; ಪರಿ = ರೀತಿ; ಘೋರಸತ್ಕ = ನಿಷ್ಠುರ ಸತ್ಕ; ರಕುತ = ರಕ್ತ; ಸೊಲ್ಲು ಸೊಲ್ಲಿಗೆ = ಕ್ಷಣ ಕ್ಷಣಕ್ಕೆ ; ಮಡಿಲು = ಗರ್ಭ; ರಕ್ತ ರಂಜಿತ = ಕೆಂಪುವರ್ಣದ್ದಾಗಿ.

**ಭಾವಾರ್ಥ - (೮ರಿಂದ೧೧)** ಧನಸ್ಸಿನ ಸೂತ್ರವನ್ನು ಕಿವಿಯವರೆಗೂ ಜಗ್ಗಿ ಬಾಣ ಬಿಡುವ ಶೂರರದಿಂದಲೂ, ಹಾಗೆ ಬಿಟ್ಟ ಬಾಣಗಳನ್ನು ಚಪಲತನದಿಂದ ತಪ್ಪಿಸಿಕೊಂಡು, ಖಡ್ಗಗಳಿಂದ ಆ ಬಾಣಗಳ ಮಳೆಯನ್ನು ಕತ್ತರಿಸಿಹಾಕುವ ಖಡ್ಗಧಾರಿ ಭಟರಿಂದಲೂ, ಆ ರಣಾಂಗಣವು ತುಂಬಿ ಹೋಗಿತ್ತು. ಆ ಅಬ್ಬರದ ದಾಳಿಯ ವೇಗವನ್ನು ಎಷ್ಟೆಂದು ವರ್ಣಿಸಲಿ? ಎರಡೂ ಪಕ್ಷಗಳಲ್ಲಿಯ ವೀರಾಧಿದೀರರು ಮೇಲಿಂದ ಮೇಲೆ ''ಭಲೆಭಲೆ'' ಎಂಬ ಶಬ್ದಗಳನ್ನು ಮೆಚ್ಚಿ ಉಚ್ಚರಿಸುತ್ತಿದ್ದರು. ರಣರಂಗದಲ್ಲೆಲ್ಲ ತುಂಬಿ ಸೂಸುತ್ತಿದ್ದ ಆ ವೀರರ ಖಡ್ಗ ದಾಳಿಯಿಂದ ಸೋರಿದ ರಕ್ತದಿಂದ ಭೂಮಿಯೆಲ್ಲ ನೆನೆದು ಹೋಯಿತು, ಸುಂದರವಾದ ರಥ, ಲಕ್ಷೋಪಲಕ್ಷ ಸಂಖ್ಯೆಯ ಆನೆಗಳೂ, ಕುದುರೆಗಳೂ, ಕಡಿಯಲ್ಪಟ್ಟು, ನೆಲಕ್ಕೆ ಬಿದ್ದವು. ಮೇಲಕ್ಕೆ ಹಾರಿಹಾರಿ, ಖಡ್ಗದಿಂದ ಇರಿಯುವ ಶೂರರಿಂದಲೂ, ಹತ್ಯೆಗೆ ಆಹುತಿಯಾಗಿ ಚೀರಿ ಸಾಯುತ್ತಿರುವ ಸೇನಾಬಲದಿಂದಲೂ, ರುಂಡ ಕತ್ತರಿಸಿ ಹೋಗಿದ್ದರೂ ಸಹಿತ, ಬರೀ ಮುಂಡದಿಂದಲೇ ಕೈಯ್ಯಲ್ಲಿ ಖಡ್ಗ ಹಿಡಿದು ಈರಾಡುವ ಶೂರರಿಂದಲೂ, ಆ ರಣಾಂಗಣವು ತುಂಬಿ ಹೋಗಿತ್ತು.

ನಿಜವಾದ ವೀರರೆಂದರೆ ಇವರೇ ಎಂಬ ಕಟು ಸತ್ಯವನ್ನು ಸಾರಿಸಾರಿ ಹೇಳುವಂತಾಗುತ್ತಿತ್ತು. ''ವೀರ ಸ್ವರ್ಗವು ಇಂಥ ಪರಾಕ್ರಮಶಾಲಿಗಳಿಗಲ್ಲದೇ ಹೇಡಿಗಳಿಗೆ ಹೇಗೆ ದೊರೆತೀತು?'' ಅಂತಾ ಕವಿಯು ಆ ಶೂರರ ಬಗ್ಗೆ ಅಭಿಮಾನ ಪಡ್ತಾ ಇದ್ದಾನೆ. ಆ ರಣಭೂಮಿಯಲ್ಲಿ ಅಸಂಖ್ಯಾತವಾದ ರಕ್ತದ ನದಿಗಳು ಹುಟ್ಟಿಕೊಂಡು, ತುಂಗಾ ನದಿಯತ್ತ ಹರಿಯುತ್ತ ಹೊರಟವು, ಆ ಮಣಿಚೂಲ ಗಿರಿಯ ರಣಾಂಗಣವೆಲ್ಲ ರುದ್ರಭೀಕರವಾಗಿ ಗೋಚರಿಸತೊಡಗಿತು, ಎಲ್ಲಿ ನೋಡಿದರೂ ರಕ್ತವೇ ರಕ್ತ! ಕಾಲುವೆಗಳಾಗಿ, ನಂತರ ನದಿಗಳಾಗಿ, ಆ ರಕ್ತದ ಪ್ರವಾಹಗಳು ಹರೀತಾ

ಹೊರಟವು. ಗಾಯಗೊಂಡ ಗಾಯಾಳುಗಳೂ, ಅರೆ ಜೀವವಾಗಿದ್ದ ಆನೆ, ಕುದುರೆ, ಕಾಲಾಳುಗಳೂ ಆ ಭೀಕರವಾದ ಪ್ರವಾಹದಲ್ಲಿ ತೇಲಿ ತೇಲಿ ಹೋಗತೊಡಗಿದವು. ಕ್ಷಣ ಕ್ಷಣಕ್ಕೂ ಹೆಚ್ಚಾಗುತ್ತಿರುವ ಆ ರಕ್ತ ಪ್ರವಾಹಗಳು, ತುಂಗಾನದಿಗೆ ಸೇರಿಕೊಂಡು, ಆ ನದಿಯ ನೀರೆಲ್ಲವೂ ರಕ್ತ ಮಯವಾಗಿ ಗೋಚರಿಸತೊಡಗಿತು.

ಮೊದಲು ದೈತ್ಯರ ಕೈಯ್ಯೆ ಮಿಗಿಲಾ । ಗಿಡುದ ಕಂಡನು ಭೈರವಾರ್ಕನು ।
ಬದಿಯೊಳಿರ್ದಾ ಭೂತಸೈನ್ಯಕೆ ಸನ್ನೆ ಮಾಡಿದನೂ ॥
ಇದನೆ ಕಾಯುತಲಿರ್ದ ಸೇನೆಯು । ಹೊದೆಯಿತಾಕ್ಷಣ ಖೂಳ ರಕ್ಕಸ ।
ರೆದೆಯ ನಿರಿಯುತಲೆಂಟು ದಿಕ್ಕಲಿ ಗಾಳಿ ವೇಗದಲೀ ॥೧೨॥

ಅಬಬ ಏನೀ ಭೂತ ಸೇನೆಯ। ಸೊಬಗ ಬಣ್ಣಿಪುದೇ ಅಸಾಧ್ಯವು ।
ಗಬಗಬನೆ ನುಂಗತ್ತ ಸಾಗಿತು ದೈತ್ಯ ಸೇನೆಗಳಾ ॥
ರಭಸದಿಂದೆತ್ತೆತ್ತಿ ತೂರುತ । ಸಬಲ ಆಯುಧ ಅಸಿ ಸಮೇತದಿ।
ಕಬಳಿಸುತ್ತಿಹ ಪರಿಯ ನೋಡುತೆ ಬೆದರಿ ಅರಿ ಸೇನೇ ॥೧೩॥

ಸತ್ತೆವೈ ನಮಗುಳಿವು ಇಲ್ಲವು । ಮುತ್ತಿದಡೆ ಪೈಸಾಚಿ ಪಡೆಗಳು ।
ಎತ್ತ ಪೋಗುವದೆಂದು ರಕ್ಕಸ ಸೇನೆ ಭಯಗೊಂಡೂ ॥
ಒತ್ತಿ ಓಡಿತು ದಿಕ್ಕು ದಿಕ್ಕಲಿ । ಮುತ್ತಿ ಇರಿದವು ಪ್ರೇತ ಬೆನ್ನಲಿ।
ಮತ್ತೆ ಹರಿದವು ವೇದ ನಾಯ್ಗಳು ಚೂರುಚೂರಾಗಿ ॥೧೪॥

ಗಿರಿಯ ತುದಿಯಲಿ ನಿಂತುನೋಡಿದ । ವರ ಸಹಸ್ರಾಕ್ಷದಲಿ ಮಲ್ಲನು ।
ಸುರರ ವೈರಿಂಗಳಿಗೆ ಒದಗಿದ ಘೋರ ವೇದನೆಯಾ ॥
ತೆರೆದು ಬಾಯ್ ಹಲ್ಗಳನು ಕಟಕಟ । ಅರೆದು ವರೆಗಿಕ್ಕಿದನು ಕೈಗಳ ।
ಹಿರಿದನಾ ಖಡ್ಗವನು ಕೋಪದಿ ಸಾಸಿರ ಪ್ರಭೆಯಾ ॥೧೫॥

ಚದುರಿ ಓಡಿದರೆಲ್ಲ ದೈತ್ಯರು । ವಿಧ ವಿಧದ ಆಘಾತ ಹೊಂದುತ ।
ಮುದದಿ ದಿವಿಜರು ಪುಷ್ಪ ವೃಷ್ಟಿಯ ಕರೆದು ಭೈರವಗೇ ॥
ಸದಮಲಾಂತಃ ಕರಣ ವಿಪ್ರರು। ಮುದದಲಾರುತಿ ಎತ್ತಿ ಮಾಲತಿ ।
ಯಧಿಪತಿಯ ನುತುತಿಸಿದರು ವೇದಾಂಗಗಳನುಚ್ಚರಿಸೀ ॥೧೬॥

ಶಬ್ದಾರ್ಥ - (೧೨ರಿಂದ೧೬) ಕೈ ಮಿಗಿಲಾಗು = ಬಲವು ಹೆಚ್ಚಾಗು; ಭೈರವಾರ್ಕ = ಮಾರ್ತಾಂಡಭೈರವ; ಸನ್ನೆ = ಸೂಚನೆ;
ಹೊದೆ = ಮೇಲೆ ಬೀಳು; ಇರಿ = ಕತ್ತರಿಸು; ಗಾಳಿ ವೇಗದಲಿ = ತೀವ್ರದಿಂದ; ಸೊಬಗು = ರೀತಿ (ಸೌಂದರ್ಯ) ಅಸಿ = ಖಡ್ಗ;
ಕಬಳಿಸು = ತಿನ್ನು; ಬೆದರಿ = ಹೆದರಿ; ಅರಿ ಸೇನೆ = ವೈರಿಗಳ ಸೈನ್ಯ; ಉಳಿವು = ಉಳಿಗಾಲ; ಪಡೆ = ಸೈನ್ಯ;
ಇರಿ = ಹೊಡೆ (ಕಡಿ) ಒತ್ತಿ ಓಡು = ದಿಕ್ಕಾಪಾಲಾಗಿ ಓಡು; ಬೆನ್ನಲಿ = ಬೆನ್ನಿಗೆ; ವೇದನಾಯ್ಗಳು = ವೇದಗಳೆಂಬ ನಾಯಿಗಳು;
ಸುರರ ವೈರಿಗಳಿಗೆ = ರಾಕ್ಷಸರಿಗೆ; ಅರೆದು = ಕಡಿದು; ವರೆ = ಖಡ್ಗವನ್ನಿಕ್ಕುವ ತೊಗಳ ಚೀಲ. ಸಾಸಿರ ಪ್ರಭೆಯ = ಸಾವಿರ ಸೂರ್ಯ ಪ್ರಕಾಶವುಳ್ಳ; ಚದುರಿ = ದಿಕ್ಕಾಪಾಲಾಗಿ; ಆಘಾತ = ನೋವು; ದಿವಿಜರು = ದೇವತೆಗಳು;
ಪುಷ್ಪವೃಷ್ಟಿ = ಹೂವಿನ ಮಳೆ; ಸದಮಾಲಾಂತಃಕರಣ = ಒಳ್ಳೇಹೃದಯದ; ವಿಪ್ರ = ಬ್ರಾಹ್ಮಣ;
ಮಾಲತಿಯಧಿಪತಿ = ಮಾರ್ತಾಂಡ ಭೈರವ; ವೇದಾಂಗಗಳು = ವೇದಭಾಗಗಳು.

**ಭಾವಾರ್ಥ** - ಯುದ್ಧದ ಪೂರ್ವಾರ್ಧದಲ್ಲಿ ದೈತ್ಯರ ಸೇನಾ ಪಡೆಯ ಬಲವು ಹೆಚ್ಚಾಗಿ ದೇವ ಸೈನ್ಯವು ನಾಶವಾಗುತ್ತಿರುವ ಸಂಗತಿಯನ್ನು ಮಾರ್ತಾಂಡ ಭೈರವನು, ಲಕ್ಷ ಪೂರ್ವಕವಾಗಿ ಅವಲೋಕಿಸಿದನು. ಮತ್ತು ಬದಿಯಲ್ಲಿಯೇ ಇದ್ದ ಭೂತ ಸೈನ್ಯಕ್ಕೆ ಯುದ್ಧಕ್ಕೆ ನುಗ್ಗುವಂತೆ ಸನ್ನೆ ಮಾಡಿ ಸೂಚಿಸಿದನು. ಶಿವನ ಆಜ್ಞೆಗಾಗಿಯೇ ಕಾಯುತ್ತ ನಿಂತುಕೊಂಡಿದ್ದ ಭೂತ ಸೈನ್ಯವು, ತತ್‌ಕ್ಷಣವೇ ಎಂಟೂ ದಿಕ್ಕುಗಳಿಂದ ರಾಕ್ಷಸ ಸೇನೆಗೆ ಮುತ್ತಿಗೆ ಹಾಕಿ, ರಾಕ್ಷಸರ ಎದೆಗಳನ್ನಿರಿಯುತ್ತ ಗಾಳಿಯ ವೇಗದಿಂದ ಹಲ್ಲೆ ನಡಿಸಿತು, ಅಬ್ಬಾ! ಆ ಭೂತ ಸೇನೆಯ ಯುದ್ಧದ ರೀತಿಯನ್ನು ಬಣ್ಣಿಸುವದೇ ಅಸಾಧ್ಯವಾದ ಮಾತು! ರಭಸದಿಂದ ದಂಡಾಳುಗಳನ್ನು ತೂರಿ ತೂರಿ, ಅವರನ್ನು ಆಯುಧ ಸಮೇತರಾಗಿ ನುಂಗುತ್ತ ಹೊರಟ ಭೂತ ಸೈನ್ಯವನ್ನು ನೋಡಿ, ರಾಕ್ಷಸ ಸೇನೆಯು ಗಾಬರಿಗೊಂಡಿತು. ''ಅಯ್ಯೋ ನಾವಿನ್ನು ಈ ಭೂತ ಸೈನ್ಯದ ದೃಷ್ಟಿಗೆ ಬಿದ್ದರೆ, ನಮಗಿನ್ನು ಉಳಿಗಾಲವಿಲ್ಲ'' ಎಂದು ಯೋಚಿಸಿದ ರಾಕ್ಷಸ ಸೇನೆಯು, ''ಜೀವ ಉಳಿದರೆ ಸಾಕೆಂಬ'' ಭಯದಿಂದ, ದಿಕ್ಕುಗಾಣದೇ ಓಡಿ ಹೋಗ ತೊಡಿದವು. ಹಾಗೆ ಓಡುತ್ತಿರುವ ದೈತ್ಯರನ್ನು ಭೂತ ಸೇನೆಯು ಬೆಂಬತ್ತಿ ಸಾಗಿ, ಅವರನ್ನು ಬೆನ್ನಲ್ಲಿ ಇರಿದು ಗಾಯಗೊಳಿಸ ತೊಡಗಿದರು. ಅದೇ ಅವಕಾಶಕ್ಕಾಗಿ ಕಾಯುತ್ತಿದ್ದ ವೇದಗಳೆಂಬ ನಾಯಿಗಳು, ಆ ರಾಕ್ಷಸರನ್ನು ಸಿಕ್ಕ ಸಿಕ್ಕಲ್ಲಿ ಹರಿದು ಚಲ್ಲಾಪಿಲ್ಲಿಗೊಳಿಸುತ್ತ ಬೇಟೆಯಾಡ ತೊಡಗಿದವು.

ಮಣಿಚೂಲ ಗಿರಿಯ ಶಿಖರದಲ್ಲಿ ಉನ್ನತವಾದ ಸಹಸ್ರಾಕ್ಷವೆಂಬ ಮಹಾ ರಥವನ್ನೇರಿ ಕುಳಿತು ಕೊಂಡಿದ್ದಂಥಾ ಮಲ್ಲ ಚಕ್ರವರ್ತಿಯು, ದೈತ್ಯ ಸೇನೆಗೆ ಆಗುತ್ತಿರುವಂಥಾ ಆ ಹಿಂಸೆಯನ್ನು ನೋಡಿ. ಮರಮರನೇ ಮರುಗಿ ಹೋದನು, ಆತನ ಸಿಟ್ಟು ನೆತ್ತಿಗೇರಿತು. ಕ್ರೋಧಾಗ್ನಿಯಲ್ಲಿ ಬೆಂದ ಆ ಅಸುರನು ''ಅಯ್ಯೋ'' ಎಂದು ಬಾಯ್ದೆರೆದು, ಸಿಟ್ಟಿನಿಂದ ಕಟಕಟನೇ ಹಲ್ಲು ಕಡಿದನು. ಮತ್ತೂ ದೇವ ಸೇನೆಯ ಮೇಲೆ ಕುಪಿತನಾದ ಆತನ ಕೈಗಳು ತಮಗರಿವಿಲ್ಲದಂತೆಯೇ ಖಡ್ಗ ಧಾರೆಯ ಕಡೆಗೆ ನುಗ್ಗಿದವು. ಅವನು ಬಹುರೋಷದಿಂದ ಸಹಸ್ರ ಸೂರ್ಯರಂತೆ ಪ್ರಕಾಶಮಾನವಾಗಿದ್ದ ತನ್ನ ಭಯಾನಕ ಖಡ್ಗವನ್ನು ಒರೆಯಿಂದಾ ಹೊರಗೆ ಹಿರಿದನು.

ಅಷ್ಟರಲ್ಲಿಯೇ ದೈತ್ಯರು ದಿಕ್ಕಾಪಾಲಾಗಿ ದಾರಿ ಸಿಕ್ಕತ್ತ ಓಡಿದರು. ಅವರಲ್ಲಿ ಬಹಳಷ್ಟು ಜನ ಸೈನಿಕರು ಅಂಗಾಂಗಗಳನ್ನು ಕಳೆದುಕೊಂಡವರಾಗಿದ್ದರು. ದೇವತೆಗಳು ಸಮರದಲ್ಲುಂಟಾದ ಈ ಅಪೂರ್ವ ಯಶಸ್ಸಿನಿಂದ ಸಂಪ್ರೀತರಾಗಿ, ಮಾರ್ತಾಂಡ ಭೈರವನ ತಲೆಯ ಮೇಲೆ ಸ್ವರ್ಗದಿಂದ ಹೂವಿನ ಮಳೆಯನ್ನು ಸುರಿಸಿದರು, ಸಮಾಧಾನ ಪಟ್ಟುಕೊಂಡ ಸಪ್ತರ್ಷಿಗಳು ಮಾಲತೀ ಸಮೇತನಾದ ಮಾರ್ತಾಂಡಭೈರವನಿಗೆ ವೇದೋಕ್ತ ಮಂತ್ರಗಳನ್ನುಚ್ಚರಿಸಿ, ಸ್ತುತಿ ಮಾಡುತ್ತ, ಮಂಗಲಾರತಿಯನ್ನು ಬೆಳಗಿದರು.

ಮಡಿದ ದಿವಿಜರ ಸೇನೆಯೆಲ್ಲವು । ಮೃಡನ ದಯೆಯಿಂದೆದ್ದು ನಿಂತಿತು।
ಸಡಗರದಲಿದ್ದಂತೆ ಸಕಲಾಯುಧಗಳನು ಧರಿಸೀ ॥
ಪೊಡವಿಗಪ್ಪಿದ ದೈತ್ಯ ಸೇನೆಯು । ಜಡಿದ ಮಾಂಸದ ಮುದ್ದೆ ಕೊಳೆಯುತ ।
ಕೆಡುಕು ವಾಸನೆ ಬೀರತೊಡಗಿತು ನರಕದಂತಾಗೀ ॥೧೭॥

**ಭಾವಾರ್ಥ -** ಯುದ್ಧದಲ್ಲಿ ಮಡಿದಂಥಾ ದೇವ ಸೈನ್ಯವೆಲ್ಲವೂ, ಪರಮಾತ್ಮನ ಕೃಪಾ ಕಟಾಕ್ಷದಿಂದಾಗಿ ಸಜೀವರಾಗಿ, ಮತ್ತೆ ಮೊದಲಿನಂತೆ ಸಕಲಾಯುಧ ಧಾರಿಗಳಾಗಿ ಎದ್ದು ನಿಂತರು. ಆದರೆ ಯುದ್ಧದಲಿ ಸತ್ತ ದೈತ್ಯ ಸೈನಿಕರು ಮಾತ್ರ, ಬಿದ್ದವರು ಮೇಲಕ್ಕೇಳದೇ ಮಾಂಸದ ಮುದ್ದೆಯಂತೆ ಬಿದ್ದಲ್ಲಿಯೇ ಬಿದ್ದು ಕೊಳೆಯುತ್ತ ನರಕ ಸದೃಶವಾದ ದುರ್ಗಂಧವನ್ನು ಬೀರತೊಡಗಿರು.

ಬಿಡದೆ ಹರಿದವು ರಕ್ತಾದಾ ನದಿ। ಅಡಗು ನೆಣ ಮಜ್ಜೆಗಳು ಮಾಂಸದ ।
ಕಡಿದ ತಲೆ ತೋಳ್ ಕಾಲು ಕರಿಗಳ ಸೊಂಡಿಲಾದಿಗಳೂ ॥
ಮಡಿದ ಹಯ ರಥ ಚಕ್ರಬಾವುಟ।ವೆಡೆ ವಿಡದೆ ಸಾಗಿದವು ಮರುಳುಗ ।
ಳೊಡನೆ ಗೈದವು ಲಕ್ಷ ಮದುವೆಯ ಭವ್ಯ ಸಂಭ್ರಮದೀ ॥೧೮॥

ಶಬ್ದಾರ್ಥ - ನೆಣ = ಕೊಬ್ಬು; ಮಜ್ಜೆ = ಮಾಂಸದ ಎಳೆ; ಸಂಭ್ರಮದಿ. = ಸಂಭ್ರಮದಿಂದ.

**ಭಾವಾರ್ಥ -** ರಕ್ತದ ನದಿಗಳು ಎಡೆಬಿಡದೇ ಹರಿಯತೊಡಗಿದವು. ಅದರಲ್ಲಿ ಕೊಬ್ಬು ಮಾಂಸದ ಮುದ್ದೆಗಳೂ, ಕಡಿದ ತಲೆಗಳೂ, ಕಡಿದ ಕೈ - ಕಾಲುಗಳೂ, ಆನೆಗಳ ಸೊಂಡಿಲುಗಳೂ, ಸತ್ತ ಕುದುರೆಗಳೂ, ಮುರಿದ ರಥ, ಚಕ್ರಗಳೂ, ಪತಾಕೆಗಳೂ, ಆ ಪ್ರವಾಹದ ಗುಂಟ ಧಾರಾಕಾರವಾಗಿ ಸಾಗತೊಡಗಿದ್ದವು. ಆ ಪ್ರದೇಶಗಳಲ್ಲಿಯ ದೆವ್ವಗಳಿಗೆ ಸಂಭ್ರಮವೋ ಸಂಭ್ರಮ, ಅವೆಲ್ಲವೂ ಸೇರಿಕೊಂಡು ಲಕ್ಷ ಮದುವೆಗಳನ್ನು ಬಹು ಸಂಭ್ರಮದಿಂದ ಆಚರಿಸಿದವು.

**ಇತಿ ಸಾಹಿತ್ಯರತ್ನಾಕರ ಶ್ರೀ ನಿಂಗ್‌ಭಟ್. ಜೋಶಿ ವಿರಚಿತ, ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್, "ಮಲ್ಲಾಸುರ ಸೈನ್ಯ ವಧ" ನಾಮಕ ತ್ರಯೋದಶಾಧ್ಯಾಯಃ ॥**

**ಅಂತು ಅಧ್ಯಾಯ ೧೩ಕ್ಕಂ, ಪದ ೧೮ಕ್ಕಂ, ಒಟ್ಟುಪದ, ೧೯೧ಕ್ಕಂ, ಮಂಗಲ ಮಸ್ತು**

ಏಳುಕೋಟಿಗ! ಏಳುಕೋಟಿಗ!! ಏಳುಕೋಟಿಗೋ!!!... ಸಾಂಗಬಲೋ!



# ಅಧ್ಯಾಯ ೧೪ ಚತುರ್ದಶೋಧ್ಯಾಯಃ ॥
## ಖಡ್ಗದಂಷ್ಟ್ರವಧಾ

-: ಸೂಚನೆ :-

ತನ್ನ ಸೈನ್ಯದ ವಧೆಯ ಕಾಣುತ । ಖಿನ್ನಗೊಂಡನು ಕುಪಿತ ಮಲ್ಲನು ।
ಸನ್ನಿಹಿತನಾದೊಡನೆ ತಡೆದನು ಖಡ್ಗದಂಷ್ಟ್ರಾಖ್ಯಾ ॥

ಅರ್ಥ :- ದೈತ್ಯ ಚಕ್ರವರ್ತಿಯಾದ ಮಲ್ಲಾಸುರನು ತನ್ನ ಪಕ್ಷದ ಸೇನೆಯೆಲ್ಲವೂ ನಾಶವಾದದ್ದನ್ನು ಕಂಡು, ಚಿಂತೆಗೊಳಗಾದನು. ಮತ್ತೂ ಕೋಪದಿಂದ ಕುದಿದ್ದೆದ್ದು ತಾನೇ ಸ್ವತಃ ದೇವಸೇನೆಯ ಸಂಹಾರಕ್ಕೆ ಸಿದ್ಧನಾಗಿ ಹೊರಡಲಣಿಯಾದನು. ಆಗ ಖಡ್ಗ ದಂಷ್ಟ್ರನೆಂಬ ಹೆಸರಿನ ಮಲ್ಲ ಚಕ್ರವರ್ತಿಯ ಸೇನಾಪತಿಯು, ಧಾವಿಸಿ ಬಂದು, ಆತನು ಯುದ್ಧಕ್ಕೆ ಹೊರಟಿರುವದನ್ನು ತಡೆದು ನಿಲ್ಲಿಸಿ, ಹೀಗೆ ಪ್ರಶ್ನೆ ಮಾಡ್ತಾನೆ.

ಏಕೆ ಜೀಯಾ ಇಲ್ಲವೇ ನಾಂ । ಕಾಕು ಸುರರನು ಕೊಲ್ಲಲಾರೆನೆ।
ಆ ಕಪರ್ದಿಯ ಕೊಂದು ನಿನ್ನಂಘ್ರಿಯಲಿ ತಂದಿಡಲೇ ॥
ಕಾಕ ಪಕ್ಷಿಯ ಕೊಲ್ಲಲೋಸುಗ । ಭೀಕರದ ಬ್ರಹ್ಮಾಸ್ತ್ರ ವೇತಕೆ ।
ಸಾಕು ನಾನೇ ದಿವಿಜರಾಬಲ ಕೊಂದು ಮುಗಿಸಲ್ಕೆ ॥ ೧ ॥

ಶಬ್ದಾರ್ಥ- ಜೀಯಾ = ಒಡೆಯನೇ; ನಾಂ = ನಾನು; ಕಾಕುಸುರರು = ಕೆಟ್ಟ ದೇವತೆಗಳು; ಕಪರ್ದಿ = ಶಿವ;
ಕಾಕಪಕ್ಷಿ = ಕಾಗೆ; ದಿವಿಜರ ಬಲ = ದೇವತೆಗಳ ಸೇನೆ.

ಭಾವಾರ್ಥ - ಆ ಖಡ್ಗದಂಷ್ಟ್ರನೆಂಬ ಹೆಸರಿನ ಮಲ್ಲನ ಸೇನಾಪತಿಯು, ಮಲ್ಲಿ ಚಕ್ರವರ್ತಿಯನ್ನು ಕುರಿತು ಹೀಗೆ ಪ್ರಶ್ನೆ ಮಾಡ್ತಾನೆ! " ಒಡೆಯನೇ! ಪ್ರತಾಪ ಶಾಲಿಯಾದ ನಾನು ನಿನ್ನ ಬಲಗೈಯ್ಯಂತೆ ಇರುತ್ತಿರುವಾಗ್ಗೆ, ನೀನೇ ಯಾಕೆ ಯುದ್ಧಕ್ಕೆ ಹೊರಡಬೇಕು? ಯಾಕೆ? ನನ್ನ ಪರಾಕ್ರಮದಲ್ಲಿ ನಿನಗೆ ಅನು ಮಾನವಿದೆಯೇ? ಆ ಕೆಟ್ಟ ದೇವತೆಗಳ ಸೈನ್ಯ ಬಲವನ್ನು ನಿರ್ನಾಮ ಮಾಡುವಂಥ ಸಾಮರ್ಥ್ಯವು ನನ್ನಲ್ಲಿಲ್ಲವೇ? ಜೀಯಾऽ! ನೀನು ಇಷ್ಟಪಟ್ಟರೆ ಆ ಶಿವವನನ್ನು ಸಂಹರಿಸಿ, ನಿನ್ನ ಪದತಲಕ್ಕೆ ತಂದು ಕೆಡಹುವ ಸಾಮರ್ಥ್ಯ ನನ್ನಲ್ಲಿರುವಾಗ, ನೀನೇಕೆ ಸುಮ್ಮನೇ ತೊಂದರೆ ತಗೆದುಕೊಳ್ಳುವಿ? ... ಯಕಃಶ್ಚಿತವಾದ ಒಂದು ಕಾಗೆಯನ್ನು ಹೊಡದು ಕೆಡಹುವದಕ್ಕೆ, ಪ್ರಚಂಡವಾದ ಬ್ರಹ್ಮಾಸ್ತ್ರವನ್ನು ಉಪಯೋಗಿಸುವದು ಯಾವ ಕಾಲಕ್ಕೂ ಯೋಗ್ಯವಲ್ಲಾ!... ಆ ದೇವತೆಗಳ ಸೈನ್ಯ ಬಲವನ್ನೆಲ್ಲ ನಿರ್ನಾಮ ಮಾಡುವದಕ್ಕೆ, ಸಮರ್ಥನಾದ ನಾನೊಬ್ಬನೇ ಸಾಕು!...

**ಕಟ್ಟು ಸೇನಾಪತಿಯ ಪಟ್ಟವ । ಧಿಟ್ಟನೀ ಸೇವಕಗೆ ನಿನ್ನಯ ।**
**ಅಟ್ಟ ಹಾಸವ ತಾಳ ಬಹುದೇ ಪಾಪ ಸುರಸೇನೆ ॥**
**ಮೆಟ್ಟ ಹಗೆಗಳ ಹರಿ ವಿರಂಚಿಯ । ಕಟ್ಟ ತರುವೆನು ರುದ್ರ ಸಹಿತದಿ।**
**ಇಟ್ಟು ನೋಡಪ್ಪಣೆಯ ಭೃತ್ಯನಿಗೆಂದು ಬೆಸಗೊಂಡಾ ।೨॥**

**ಕೇಳಿ ವೀರೋಚಿತದ ನುಡಿಗಳ । ತಾಳಿ ಹರ್ಷವ ಖಡ್ಗ ದಂಷ್ಟ್ರಗೆ ।**
**ವೀಳ್ಯ ವಿಕ್ಕುತಲಿತ್ತ ಸೇನಾಪತಿಯ ಪಟ್ಟವನೂ ॥**
**ಮೇಳಗೊಂಡಿಹ ಸಕಲ ದಿವಿಜರ । ಸಾಲು ಸೇನೆಯ ನಾಶ ಗೈವುದು ।**
**ಲೀಲೆಯಿಂ ತ್ರೈಗುಣರ ಜೀವಿತದೆಳೆದು ತಾ ಎನುತಾ ।೩॥**

**ಲಕ್ಷ ರಥ ಮೂರ್ಲಕ್ಷ ಹಯಗಳು । ಲಕ್ಷದರ್ಧದ ಕರಿಯು ಮಾವುತ ।**
**ಲಕ್ಷ ದಶ ಕಾಲಾಳು ವಿಧ ವಿಧ ಶಸ್ತ್ರಧಾರಣೆಯಾ ॥**
**ಲಕ್ಷವೀಯದೆ ಕೊಟ್ಟು ಹರಸಲು । ಪಕ್ಷಿ ವಾಹನ ವೈರಿ ಉಬ್ಬುತ ।**
**ತಕ್ಷಣದಿ ಪೊಡಮಟ್ಟು ಹೊರಟನು ದೈತ್ಯರಾಜನಿಗೇ ।೪॥**

ಶಬ್ದಾರ್ಥ (೨,೩,೪,) ವಿರಂಚಿ = ಬ್ರಹ್ಮ; ರುದ್ರ = ಶಿವ; ಭೃತ್ಯ = ಸೇವಕ; ಬೆಸಗೊಂಡಾ = ವಿನಂತಿಸಿಕೊಂಡ; ವೀರೋಚಿತ = ವೀರರಿಗೆ ಯೋಗ್ಯವಾದ; ವೀಳ್ಯ = ತಾಂಬೂಲಾದಿಗಳ ಸಮರ್ಪಣೆಯಿಂದ ಮರ್ಯಾದೆ ಮಾಡುವುದು; ಮೇಳಗೊಂಡಿಹ = ಕೂಡಿದ; ತ್ರೈಗುಣರು = ಬ್ರಹ್ಮ, ವಿಷ್ಣು, ಮಹೇಶ್ವರರ; ಜೀವಿತದಿ = ಜೀವದಿಂದ ; ಮೂರ್ಲಕ್ಷ = ಮೂರು ಲಕ್ಷ; ಹಯ = ಕುದುರೆ; ಲಕ್ಷದ ರ್ಧದ = ೫೦ ಸಾವಿರ; ಕರಿ = ಆನೆ ; ಮಾವುತ = ಆನೆಯ ಸವಾರ; ಲಕ್ಷದಶ = ಹತ್ತು ಲಕ್ಷ ಪಕ್ಷಿವಾಹನ ; ವೈರಿ = ದೈತ್ಯ; ಉಬ್ಬುತ = ಹರ್ಷಪುಳಕಿತನಾಗಿ; ಪೊಡಮಡು = ನಮಸ್ಕರಿಸು.

**ಭಾವಾರ್ಥ- (೨,೩,೪)** "ರಾಕ್ಷಸೇಂದ್ರಾ!... ಈ ನಿನ್ನ ಸ್ವಾಮಿಭಕ್ತ ಸೇವಕನಿಗೆ ಸೇನಾಪತಿಯ ಪಟ್ಟವನ್ನು ಕಟ್ಟಿನೋಡು!.. ಅದನ್ನು ಬಿಟ್ಟು ಪ್ರಚಂಡನಾದ ನೀನೇ ಯುದ್ಧಕ್ಕೆ ಹೊರಟರೆ, ಪಾಪ, ದೇವಸೇನೆಯು ನಿನ್ನ ಅಬ್ಬರವನ್ನು ಹೇಗೆ ಸಹಿಸೀತು? ನನಗೆ ಸೇನಾಪತಿಯ ಪಟ್ಟಗಟ್ಟಿದರೆ, ದೇವತೆಗಳ ಸೈನ್ಯವನ್ನೆಲ್ಲ ಬಗ್ಗು ಬಡಿದು, ವಿಷ್ಣು, ಬ್ರಹ್ಮ, ರುದ್ರಾದಿ ಸಹಿತರಾಗಿ ತ್ರೈಮೂರ್ತಿಗಳನ್ನು ಬಂಧಿಸಿತರುತ್ತೇನೆ. ಒಂದು ಸಲ ಈ ಸೇವಕನಿಗೆ ಅಪ್ಪಣೆಕೊಟ್ಟು ಪರೀಕ್ಷೆ ಮಾಡು!..." ಎಂದು ಖಡ್ಗದಂಷ್ಟ್ರನೆಂಬ ಆ ವೀರ ಸೇನಾಪತಿಯು ನುಡಿದನು. ಖಡ್ಗದಂಷ್ಟ್ರನ ಆ ವೀರೋಚಿತವಾದ ಮಾತುಗಳನ್ನು ಕೇಳಿ, ಮಲ್ಲ ಚಕ್ರವರ್ತಿಗೆ ತುಂಬಾ ಸಂತೋಷವಾಯಿತು. ತಕ್ಷಣವೇ ಆತನು ಹರ್ಷಹೊಂದಿದವನಾಗಿ, ಖಡ್ಗದಂನಿಗೆ ವೀಳ್ಯವನ್ನಿತ್ತು ಸಕಲ ಮರ್ಯಾದೆಯೊಂದಿಗೆ

ಸೇನಾಪತಿಯ ಪಟ್ಟಗಟ್ಟಿ ವೀರಾಧಿವೀರನೇ!.. ನೀನು ಈಗಿಂದೀಗಲೇ ನಮ್ಮ ಬಹುಸಂಖ್ಯಾತ ದೈತ್ಯ ಸೇನೆಯೊಂದಿಗೆ ಹೋಗಿ, ದೇವತೆಗಳ ಸೈನ್ಯವನ್ನೆಲ್ಲ ನಿರ್ನಾಮ ಮಾಡು !.. ಮತ್ತೂ ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಜೀವಂತವಾಗಿ ನನ್ನ ಬಳಿಗೆ ಎಳೆದುಕೊಂಡು ಬಾ!.. ಎಂದು ಕಟ್ಟಪ್ಪಣೆಯನ್ನು ಮಾಡಿದನು. ಮತ್ತೂ ದೈತ್ಯ ಸೇನಾಪತಿಯಾದ ಆ ಖಡ್ಗ ದಂಷ್ಟ್ರನಿಗೆ ಒಂದು ಲಕ್ಷ ರಥಗಳನ್ನೂ, ಮೂರು ಲಕ್ಷ ಕುದುರೆಗಳನ್ನು ಐವತ್ತು ಸಾವಿರ ಆನೆ ಹಾಗೂ ಮಾವುತರನ್ನೂ, ನಾನಾ ಬಗೆಯ ಶಸ್ತ್ರಾಸ್ತ್ರಗಳನ್ನು ಧಾರಣೆ ಮಾಡಿದ, ಹತ್ತು ಲಕ್ಷ ಕಾಲ್ದಾಳುಗಳನ್ನು ಆತನ ವಶಕ್ಕೆ ಕೊಟ್ಟು ಆಶೀರ್ವಾದ ಮಾಡಿದನು. ಖಡ್ಗ ದಂಷ್ಟ್ರನಿಗೆ ಆನಂದವೋ ಆನಂದ! ದೈತ್ಯರಾಜನು ತನ್ನ ಮೇಲಿಟ್ಟಿರುವ ಅಪಾರ ಪ್ರೀತಿ ವಿಶ್ವಾಸಗಳಿಂದ ಆತನು ಉಬ್ಬಿ ಹೋದನು. ತಕ್ಷಣವೇ ಮಹಾರಾಜನಿಗೆ ಜೈ ಜೈಕಾರಮಾಡಿ ಆತನಿಗೆ ನಮಸ್ಕರಿಸಿ, ತನ್ನ ಸೇನಾಬಲದೊಂದಿಗೆ ಸಮರಾಂಗಣಕ್ಕೆ ಹೊರಟನು.

**ಉಲಿದವೈ ಕಾಳಿಗಳು ಕೋವಿಗ । ಘುಲಿದವೈ ಸಾಹಸ್ರ ಸಂಖೆಯ ।**
**ಲಿಳೆಯ ಹೊಯ್ದಾಡಿಸುವ ಭೀಕರ ಭೇರಿ ರಣವಾದ್ಯಾ ॥**
**ಹೊಳೆದು ಮೆರೆದವು ಛತ್ರ ಬಾವುಟ । ಅಲುಗಿದವು ನೂರಾರು ಚಾಮರ ।**
**ಪುಳಕ ಗೊಂಡಿತು ದೈತ್ಯ ಸೇನೆಯು ಸುರೆಯ ಮದದಿಂದಾ ।೫॥**

**ಭಳಿರೆ ಹಲಲಲ ಎಂದು ಕಿರಚುತ । ಇಳೆಯ ಮುತ್ತಿದ ದೈತ್ಯ ಸೇನೆಯ ।**
**ಮಿಳಿತ ದೃಷ್ಟಿಯಲೊಮ್ಮೆ ನೋಡುತ ಶಿವನು ನಸುನಗುತಾ ॥**
**ಖಲಕುಟಲರಬ್ಬರದ ಸೇನಾ। ಬಲವನಿಕ್ಕಲು ಸ್ಕಂದನೇ ಸರಿ ।**
**ಬಲನು ಎನುತಾಲೋಚಿಸುತ ಶಿವ ಸುತನಿಗಿಂತೆಂದಾ ।೬॥**

ಶಬ್ದಾರ್ಥ - (೫,೬) ಇಳೆಯ ಹೊಯ್ದಾಡಿಸುವ = ಭೂಮಿಯನ್ನು ನಡುಗಿಸುವ ; ಭೀಕರ = ಪ್ರಚಂಡ ; ಮರ = ಬೀಸಣಿಕೆ; ಖಲ = ದುಷ್ಟ; ಸ್ಕಂದ = ಕುಮಾರಸ್ವಾಮಿ; ಅಬ್ಬರದ ಸೇನಾಬಲವನಿಕ್ಕಲು = ಆರ್ಭಟಿಸುವ ಸೇನಾಬಲವನ್ನು ಸಂಹರಿಸುವದಕ್ಕೆ.

ಭಾವಾರ್ಥ- (೫,೬) ಕೂಡಲೇ ದೈತ್ಯ ಸೇನೆಯಲ್ಲಿ ಸಾವಿರಾರು ಸಂಖ್ಯೆಯ ಕಾಳಿ, ಕೋವಿ, ನಪೂರಿ ಮುಂತಾದ ವಾದ್ಯಗಳು ಮೊಳಗಿದವು. ಭೂಮಿಯನ್ನೇ ಅಲ್ಲಾಡಿಸಿ ಬಿಡುವಂಥ ರೌದ್ರಮಯವಾದ ರಣಭೇರಿಗಳು ಬಡಿಯಲ್ಪಟ್ಟವು. ಸಹಸ್ರಾರು ಸಂಖೆಯ ಛತ್ರಗಳು ಸೇನಾಪತಿಯಾದ ಖಡ್ಗದಂಷ್ಟ್ರನಿಗೆ ಹಿಡಿಯಲ್ಪಟ್ಟವು. ನೂರಾರು ಚಾಮರಗಳಿಂದ ಆತನಿಗೆ ಗಾಳಿ ಬೀಸಲಾಗುತಿತ್ತು. ದೈತ್ಯ ಸೇನೆಯೆಲ್ಲವೂ ಸುರಾಪಾನಮಾಡಿದ್ದರಿಂದ, ಅವರು ಉನ್ಮತ್ತರಾಗಿದ್ದರು. ಸಿಕ್ಕಾಪಟ್ಟೆಯಾಗಿ ಕಿರುಚಾಡುತ್ತಿದ್ದರು. ''ಭಲೆ!'' ಹಲಲಲ'' ಎಂಬ ಕೂಗು ದೈತ್ಯ ಸೇನೆಯಿಂದ ಕೇಳಿ ಬರತೊಡಗಿತು.

ಈ ಪ್ರಕಾರವಾಗಿ ಆರ್ಭಟಿಸುತ್ತ ಹೊರಟು ಬರುತ್ತಿರುವ ದೈತ್ಯ ಸೇನೆಯನ್ನು, ಶಿವನು ಒಂದು ಸಲ ನೋಡಿ, ನಸುನಕ್ಕನು. ಮತ್ತೂ ಇಂಥ ದೈತ್ಯರ ಸೇನೆಯ ಅಬ್ಬರವನ್ನು ಮುರಿಯುವದಕ್ಕೆ ಷಣ್ಮುಖನೇ ಸಮರ್ಥನೆಂಬುದನ್ನು ಮನದಲ್ಲಿಯೇ ನಿಶ್ಚಯಿಸಿಕೊಂಡು, ಆತನು ಕುಮಾರಸ್ವಾಮಿಗೆ ಈ ರೀತಿಯಾಗಿ ಅಪ್ಪಣೆಮಾಡ್ತಾ ಇದ್ದಾನೆ. ಅದೇನೆಂದರೆ.

**ಏಳು ಷಣ್ಮುಖ ಖಡ್ಗದಂಷ್ಟ್ರನ । ಧೂಳಿ ಪಟಮಾಡುವದು ಬಪ್ಪರದಿ ।**
**ತಾಳು ಧೈರ್ಯವ ಜಯವು ನಿನಗಿದೆ ಬೇಡ ಸಂದೇಹಾ ॥**
**ಖೂಳ ದೈತ್ಯನ ನಿಕ್ಕು ಶಕ್ತಿಯ। ಮೇಲು ಆಯುಧದಿಂದ ಮರಣವು ।**
**ವಾಲಿ ನಿಂತಿದೆ ಖಲಗೆ ಕರುಣೆಯು ಬೇಡ ಎಳ್ಳನಿತೂ ॥೭॥**

**ಎಂದು ಹೇಳಿದ ತಂದೆಯಾನುಡಿ । ನಿಂದು ಆಲಿಸಿ ಭಕ್ತಿ ಭಾವದಿ ।**
**ತಂದೆಯೇ ನಿನ್ನಣತಿ - ಎನ್ನುತ ಹೊರಟ ಪೊಡಮಟ್ಟೂ ॥**
**ಸಂಧಿಸಿದವಾವೇಗದಿಂದಲಿ । ಒಂದಕೊಂದನು ಹಣಿದು ಅವಯುವ ।**
**ಚಿಂದಿಗೊಳಿಸುತ ಕುಕುಬನಿಕ್ಕಿದರಯ್ಯ ಇಬ್ಬಣದೀ ॥೮॥**

ಶಬ್ದಾರ್ಥ - ಧೂಳಿಪಟ ಮಾಡುವದು = ನಾಶಮಾಡುವದು; ಬವರ = ಯುದ್ಧ; ಅಣತಿ = ಅಪ್ಪಣೆ; ಪೊಡಮಟ್ಟು = ನಮಸ್ಕರಿಸಿ.

ಭಾವಾರ್ಥ - (೭,೮) ಕಂದಾ ಷಣ್ಮುಖನೇ!. ಎದ್ದೇಳು!.. ಈ ದಿನದ ಯುದ್ಧದಲ್ಲಿ ನೀನು ಖಡ್ಗದಂಷ್ಟ್ರನನ್ನು ನಿರ್ನಾಮ ಮಾಡಬೇಕಾಗಿದೆ. ಜಯಲಕ್ಷ್ಮೀ ಸಂದೇಹವಿಲ್ಲದೆ ನಿನ್ನ ಕೊರಳಿಗೆ ಜಯಮಾಲೆ ಹಾಕುತ್ತಾಳೆ, ಇದರಲ್ಲಿ ನಿನಗೆ ಯಾವ ಸಂಶಯವೂ ಬೇಡಾ!.. ಆ ದುಷ್ಟ ದೈತ್ಯನಾದ ಖಡ್ಗ ದಂಷ್ಟ್ರನನ್ನು ನೀನು ಘನವಾದ ಶಕ್ತ್ಯಾಯುಧದಿಂದ ಸಂಹಾರ ಮಾಡು!.. ಅವನ ಹಣೇ ಬರಹದಲ್ಲಿ ಶಕ್ತ್ಯಾಯುಧದಿಂದಲೇ ಮರಣವೆಂದು ವಿಧಿಯು ಉಲ್ಲೇಖಿಸಿದ್ದಾನೆ. ಆದಕ್ಕಾಗಿ ನೀನು ಎಳ್ಳಿನಷ್ಟೂ ಕರುಣೆ ಇಡದೇ, ಆ ದುಷ್ಟನನ್ನು ಹೊಡೆದು ಸಂಹಾರ ಮಾಡು!'' ಎಂದು ಶಿವನು ಷಣ್ಮುಖನಿಗೆ ಆಜ್ಞೆ ಮಾಡಿದನು.

ಹೀಗೆ ಆಜ್ಞೆ ಮಾಡಿದ ತಂದೆಯ ನುಡಿಗಳನ್ನು ಷಣ್ಮುಖನು ಭಕ್ತಿಭಾವದಿಂದ ನಿಂತು ಆಲಿಸಿದನು. ಮತ್ತೂ ವಿಧೇಯತೆಯಿಂದ ತಲೆಬಾಗಿ ''ಅಪ್ಪಾ! ನಿನ್ನಾಜ್ಞೆಯಂತೆಯೇ ನಡೆದುಕೊಳ್ಳುತ್ತೇನೆ.'' ಎಂದು ನಮಸ್ಕಾರ ಮಾಡಿ ತಂದೆಯ ಆಶೀರ್ವಾದ ಪಡೆದು ಯುದ್ಧಕ್ಕಾಗಿ ಹೊರಟು ನಿಂತನು.

ಸ್ವಲ್ಪೇ ವೇಳೆಯಲ್ಲಿ ದೇವ - ದಾನವರ ಸೈನ್ಯಗಳು ಒಂದಕ್ಕೊಂದು ಎದುರಾದವು. ಇಬ್ಬಣಗಳಲ್ಲಿಯೂ ಇದ್ದ ವೀರಪುರುಷರು, ಆವೇಶದಿಂದ ಒಬ್ಬರನ್ನೊಬ್ಬರು ಹಣೆಯುತ್ತ, ವೀರಾವೇಶದಿಂದ ಯುದ್ಧ ಮಾಡ ತೊಡಗಿದರು, ಆದೆಷ್ಟೋ ಸೈನಿಕರ ಕೈಕಾಲುಗಳು ಯುದ್ಧದಲ್ಲಿ ಮುರಿದು ಹೋಗಿ ರಕ್ತಧಾರೆ ಹರಿಯತೊಡಗಿದವು ,ಬಣಗಳೆರಡೂ ಆವೇಶದಿಂದ ಹೋರಾಡುತ್ತ ಕೇಕೆ ಹಾಕುತ್ತಲಿದ್ದವು.

**ರಕುತ ದೋಕಳಿ ಉಕ್ಕಿ ಹರಿದುದು । ಸಕಲ ದೈತ್ಯರು ಸಾವನಪ್ಪುತ ।**
**ಅಕಟಕಟ ಎಂದೊರಲಿ ಸಾಯುವ ಪರಿಯ ತಾಕಂಡೂ ॥**
**ಚಕಚಕನೆ ತಾ ಮುಂದೆ ಬಂದನು । ಅಖಿಲ ಸೇನಾ ಬಲವ ದಾಂಟುತ ।**
**ವಿಕಟ ಬಂಧುವಿಗೆದುರು ನಿಲ್ಲುತ ದೈತ್ಯ ಬೆಸಗೊಂಡಾ ॥೯॥**

ಬಾಲನೇ ನೀನರಿಯೆ ಬವರವ । ಹೋಳಿಗೆಯ ಊಟಲ್ಲವಿದು ಮೇಣ್ ।
ತಾಳಲಾರೆಯೊ ಯನ್ನ ಅಬ್ಬರದಾಯುಧದ ದಾಳೀ ॥
ಲೀಲೆಯಿಂ ಚಿಣಿಘಣಿಯ ನಾಡುವ । ಬಾಲವಯದಲ್ಲೇಕೆ ಯುದ್ಧವು ।
ಶೂಲಿಯಂ ನೀ ಕರಿಸು ಆತನ ಹೋಳಿಯಾಡುವೆನೂ ॥ ೧೦ ॥

ಹಾಲುಗಲ್ಲದ ಹಸುಳ ನಿನ್ನನು । ಸೋಲಿಸುವದೆನಗಾವ ಲೆಕ್ಕವು ।
ತಾಳು ನೀ ಕೆಡಬೇಡ ಸುಮ್ಮನೆ ಶಿವನ ಕರೆಕಳಿಸೂ ॥
ಕಾಲನಂದದಿ ಕಾದು ಯುದ್ಧದ । ಶೈಲಿಯಂ ತೋರಲ್ಕೆ ಶಿವ ಹರಿ ।
ಸಾಲದಾಗಿಹರೆನಗೆ ಕಂದಾ ನಿನ್ನ ಗತಿ ಯೇನೂ ॥ ೧೧ ॥

ಗರುವದಾ ಮಾತಲ್ಲ ಕುವರಾ । ಶರಗಳೇಳವು ನಿನ್ನ ಕೊಲ್ಲಲು ।
ಉರಗ ಭೂಷಣ ಮೇಣ್ ಸುದರ್ಶನಧಾರಿಗಳ ನಟ್ಟೂ ॥
ಹರಿವೆನಿಬ್ಬರ ಶಿರವ ತಾಡಿಸಿ । ಕೊರೆದು ಒಯ್ಯುವೆ ಮಲ್ಲನಲ್ಲಿಗೆ ।
ದೊರೆಯು ಅಪ್ಪುವನಾಗ ಎನ್ನನು ಭಳಿರೆ ಭಲೆ ಎನುತಾ ॥ ೧೨ ॥

ಶಬ್ದಾರ್ಥ (೯ರಿಂದ೧೨) ರಕುತ = ರಕ್ತ ; ಅಕಟಕಟ = ಆಯ್ಯೋ : ಒರಲಿ = ಚೀರಿ ; ಚಕಚಕನೆ = ಅವಸರದಿಂದ : ಅಖಿಲ = ಎಲ್ಲ ; ದಾಂಟು = ದಾಟು ; ಏಕಟ ಬಂಧು = ಗಣಪತಿಯ ಸೋದರನಾದ ಷಣ್ಮುಖ ; ಬವರ = ಯುದ್ಧ; ಮೇಣ್ = ಮತ್ತೂ ; ಚಿಣಿ ಫಣಿ = ಹುಡುಗರು ಆಡುವ ಒಂದು ಆಟದ ಹೆಸರು; ಬಾಲವಯ = ಚಿಕ್ಕ ವಯಸ್ಸು; ಹೋಳಿಯಾಡು = ನಾಶ ಮಾಡು ; ಶರ = ಬಾಣ ; ಉರಗ ಭೂಷಣ = ಶಿವ ; ಸುದರ್ಶನಧಾರಿ = ವಿಷ್ಣು; ಅಟ್ಟು = ಕಳಿಸು; ತಾಡಿಸಿ = ಹೊಡೆದು; ಗರುವ = ಗರ್ವ ;

ಭಾವಾರ್ಥ - (೯ರಿಂದ೧೨) ರಕ್ತವು ಕಾರಂಜಿಯಂತೆ ಪುಟಿ ಪುಟಿದು ಹರಿಯ ತೊಡಗಿತು. ದೇವತೆಗಳ ಕೈ ಮೇಲಾಗಿ ದೈತ್ಯ ರೆಲ್ಲರೂ 'ಹಾಯ್ ಹಾಯ್' ಎಂದು ವರಲುತ್ತ ಬಿದ್ದು ಸಾಯತೊಡಗಿದರು. ಈ ಪರಿಸ್ಥಿತಿಯನ್ನು ಕಂಡ ವೀರ ಖಡ್ಗ ದಂಷ್ಟ್ರನು, ಎಲ್ಲಾ ಸೇನಾ ಬಲವನ್ನು ಹಿಂದೆ ಹಾಕುತ್ತ ತಾನೊಬ್ಬನೇ ಷಣ್ಮುಖನ ಎದುರಿಗೆ ಬಂದು ನಿಂತುಕೊಂಡು, ಷಣ್ಮುಖನ ಕುರಿತು. ಹೀಗೆ ಹೇಳ್ತಾನೆ " ಎಲೋ ಬಾಲಕಾ!.. ಯುದ್ಧ ಮಾಡುವದೆಂದರೆ, ಹೋಳಿಗೆಯ ಊಟ ಮಾಡಿದಂತೆಂದು ಭಾವಿಸಬೇಡಾ ! ಈ ಕಲೆಯಲ್ಲಿ ನೀನು ಪಳಗಿಲ್ಲ ಮೇಲಾಗಿ ನನ್ನ ಬಲಾಢ್ಯವಾದ ಆಯುಧದ ದಾಳಿಯನ್ನು ತಾಳಿಕೊಳ್ಳುವ ಸಾಮರ್ಥ್ಯವೂ ನಿನ್ನಲ್ಲಿಲ್ಲ .

ಯಾಕೆಂದರೆ, ನೀನೀಗ ಲೀಲೆಯಿಂದ ಚಿಣಿಫಣಿಯನ್ನಾಡುವ ಬಾಲ ವಯಸ್ಸಿನವನಾಗಿರುವಿ. ಇಂಥ ಚಿಕ್ಕ ವಯಸ್ಸಿನಲ್ಲಿ ನಿನಗೇಕೆ ಯುದ್ಧದ ಹವ್ಯಾಸಾ ? ಬೇಡ ಮಗೂ ! ನೀನು ನಿನ್ನಪ್ಪನಾದ ಆ ಶೂಲಧಾರಿಯನ್ನು ಕರೆಸು ! ಅಂದರೆ ಅವನೊಂದಿಗೆ ಯುದ್ಧದಲ್ಲಿ ಹೋರಾಡಿ ಅವನನ್ನು ಧ್ವಂಸ ಮಾಡಿ ಬಿಡುತ್ತೇನೆ. ಹಾಲುಗಲ್ಲದ ಹಸುಳನಾದ ನಿನ್ನನ್ನು ಕೊಲ್ಲುವದು. ನನಗೆ ಯಾವ ಲೆಕ್ಕಕ್ಕೂ ಬಾರದ ಮಾತಾಗಿದೆ. ಅದಕ್ಕಾಗಿ ನನ್ನೊಂದಿಗೆ ಯುದ್ಧ ಹೂಡಿ ನೀನು ಕೆಡಬೇಡ ! ಕಾಲ ರುದ್ರನಂತೆ ಪ್ರಚಂಡವಾಗಿ ಯುದ್ಧ ಮಾಡುವ ನನ್ನ ಪರಾಕ್ರಮಕ್ಕೆ, ಶ್ರೀ ಹರಿಯೂ, ಶೂಲಿಯಂಥವರೇ ಸಾಲದಾಗಿದ್ದಾರೆ. ಅಂದಾಗ, ಪಾಪ, ಹಸುಳನಾದ ನಿನ್ನ ಗತಿಯೇನು ? ಕುಮಾರಾ! ಇದು ಗರ್ವದಿಂದ ಹೇಳುವ ಮಾತೆಂದು ನೀನು ಎಂದೆಂದಿಗೂ ಭಾವಿಸಬೇಡಾ ! ಹಸುಳನಾದ ನಿನ್ನನ್ನು ಕೊಲ್ಲುವದಕ್ಕೆ, ಆದೇಕೋ ನನ್ನ ಆಯುಧಗಳು ಏಳದಾಗಿವೆ. ಅದಕ್ಕಾಗಿ ನಿನಗೀಗ ಜೀವವನ್ನುಳಿಸಿಕೊಂಡು ಹೋಗುವದಕ್ಕಾಗಿ ಅವಕಾಶವಿತ್ತಿದ್ದೇನೆ. ನೀನು ಬೇಗ ಹೋಗಿ ಆ ನಿಮ್ಮಪ್ಪ ಉರಗ ಭೂಷಣನನ್ನೂ, ಚಕ್ರಧಾರಿಯಾದ ಶ್ರೀ ಹರಿಯನ್ನೂ ಯುದ್ಧಕ್ಕೆ

ಕಳಿಸಿಕೊಡು! ಅಂದರೆ ನಾನು ಪರಾಕ್ರಮದಿಂದ ಆ ಇಬ್ಬರೊಡನೆಯೂ ಹೋರಾಡಿ, ಅವರನ್ನು ಸೋಲಿಸಿ, ಅವರಿಬ್ಬರ ಶಿರಸ್ಸುಗಳನ್ನೂ ಕತ್ತರಿಸಿಕೊಂಡು, ನಮ್ಮ ಚಕ್ರಾಧಿಪತಿಯಾದ ಮಲ್ಲನ ಬಳಿಗೆ ತೆಗೆದುಕೊಂಡು ಹೋಗುತ್ತೇನೆ. ಆಗ ಆ ವೀರಾಧಿವೀರನು ನನ್ನ ಶೌರ್ಯಕ್ಕೆ ಮೆಚ್ಚಿ ನನ್ನನ್ನು ಅಪ್ಪಿಕೊಂಡು, "ಭಲೆ, ಶಹಬಾಶ್" ಎಂದು ಬಿರುದುಗಳನ್ನು ಕೊಡುತ್ತಾನೆ.

**ತರಳ ನಿನ್ನನು ಕೊಂದೆನಾದಡೆ । ಕರುಣೆಯಿಲ್ಲದ ಕಟುಕ ನಿವನೆಂ।**
**ದರಿತು ಗೇಲಿಯ ಗೈವುದೈ ಜಗ ಬೇಡ ಅಪವಾದಾ ॥**
**ಸರಿಯ ಹುದ್ದರಿಯೊಡನೆ ಹೋರಾ । ಡಿರಿದು ಕೊಲುವದೆ ಶಾಸ್ತ್ರ ಸಮ್ಮತ ।**
**ಅರಿತು ನೀಡುವೆ ಜೀವದಾನವ ತರಳ ಪೋಗೆಂದಾ ೧೩।**

ಶಬ್ದಾರ್ಥ- ತರಳ = ಬಾಲಕ; ಕೊಂದೆನಾದಡೆ = ಕೊಂದದ್ದಾದರೆ; ಅರಿತು = ತಿಳಿದು; ಗೇಲಿ = ಹಾಸ್ಯ; ಜಗ = ಜಗತ್ತು; ಅಪವಾದ = ಕೆಟ್ಟಮಾತು; ಹುದ್ದರಿ = ಎದ್ನುರಾಳಿ; ಇರಿದು = ಕತ್ತರಿಸಿ; ಶಾಸ್ತ್ರ ಸಮ್ಮತ = ನೀತಿಯುಕ್ತವಾದ; ಪೋಗೆಂದಾ = ಹೋಗು ಅಂದನು.

ಭಾವಾರ್ಥ - "ಹಾಗೆ ಮಾಡುವದನ್ನು ಬಿಟ್ಟು, ಬಾಲಕನಾದ ನಿನ್ನನ್ನು ಕೊಂದು ಹಾಕಿದರೆ, "ಇವನು ಕರುಣೆಯಿಲ್ಲದ ಕಟುಕ" ಎಂದು ಜಗತ್ತಿನ ಜನರು ನನಗೆ ಹಾಸ್ಯ ಮಾಡಿ ನಕ್ಕು ಬಿಟ್ಟಾರು. ಯಾವಾಗಲೂ ನಮಗೆ ಸರಿಸಮವಾದಎದುರಾಳಿಗಳೊಂದಿಗೆ ಹೋರಾಡಿ ಯುದ್ಧದಲ್ಲಿ ಕಡಿದು ಕೊಲ್ಲಬೇಕೇ ಹೊರತು, ನಿನ್ನಂಥ ಅಲ್ಪ ವಯದ ಬಾಲಕನೊಂದಿಗಲ್ಲ, ಇದು ಶಾಸ್ತ್ರಸಮ್ಮತವಾಗಲಾರದೆಂದರಿತು ಕೊಂಡೇ ನಾನೀಗ ನಿನಗೆ ಜೀವದಾನ ನೀಡುತ್ತಿದ್ದೇನೆ. ಆದ ಕಾರಣ ಬಾಲಕನೇ! ಬೇಗ ಹೋಗಿ ನಿಮ್ಮಪ್ಪನಾದ ಶಿವನನ್ನೂ, ಆತನ ಸ್ನೇಹಿತನಾದ ಚಕ್ರಾಧಿಪತಿಯ ಶ್ರೀ ಹರಿಯನ್ನೂ, ಕಳಿಸಿಕೊಂಡು" ಎಂದು ಚಕ್ರಾಧಿಪತಿಯ ಸೇನಾನಾಯಕನಾದ ಖಡ್ಗದುಂಷ್ಟನು ಗರ್ವದಿಂದ ಅಪ್ಪಣೆ ಮಡ್ತಾ ಇದ್ದಾನೆ.

ಚೂರಿಯಿಂದಿರಿದಂಥ ದೈತ್ಯನ । ಘೋರ ಸಬುದವ ನಿಲಿಸಿ ದರ್ಪದಿ ।
ಆರು ಮೊಗದವನುಲಿದ ಕಣ್ಣಲಿ ಕಿಡಿಯ ಕಾರುತ್ತಾ ॥
ಆರು ಹಿರಿಯರು ಆರುಕಿರಿಯರು । ಸಾರಿ ಪೇಳಲಿ ಸಥ್ಯ ಬವರವು ।
ಕಾರಿ ಕೊಳ್ಳಲು ಬೇಡ ಗರುವದ ನೀಚ ವಾಕ್ಯಗಳಾ ॥ ೧೪॥

ಮೇರು ಹರಿ ಹರರನ್ನು ನಿಂದಿಸಿ । ತೀರಿ ಹೋಗಿದೆ ನಿನ್ನ ಆಯುಷ ।
ಚಾರು ಚಿತ್ರದ ಡೊಣ್ಣೆಯೇತಕೆ ಶುನಕ ಕೊಲ್ಲಲ್ಕೇ ॥
ವೀರನೆಂದುಬ್ಬುಬ್ಬಿ ಮೆರೆದಿಹ । ತಾರಕನ ಕೊಂದವಗೆ ಬಾಲ್ಯವೆ ।
ಧೀರ ಸಿಂಗದ ಮರಿಯು ಕೊಬ್ಬಿದ ಕರಿಗೆ ಬೆದರುವದೇ ॥ ೧೫ ॥

ತೋರು ಪೌರುಷ ವೀರಗಣದಲಿ । ಧೀರರೊಪ್ಪುವ ತೆರದಿ ಸೆಣಸುತ ।
ಸಾರಿ ನಿಲ್ಲಲಿ ಸಕಲ ಸೈನ್ಯವು ದೂರದೂರದಲೀ ॥
ವೀರನಾದಡೆ ಗೆಲ್ಲು ಯುದ್ಧದಿ । ಭಾರಿ ಮಾತುಗಳೆಲ್ಲ ವ್ಯರ್ಥವು ।
ತೋರಿಸೆಲೆ ರಾಕ್ಷಸನೆ ನಿನ್ನಯ ಹಿರಿಯ ಗಂಡೆದೆಯಾ ॥೧೬॥

ಶಬ್ದಾರ್ಥ - (೧೪ರಿಂದ೧೬) ಸಬುದ = ಶಬ್ದ; ನಿಲಿಸಿ = ತಡೆದು ; ದರ್ಪದಿ = ಗರ್ವದಿಂದ ಆರುಮೊಗದವ = ಷಣ್ಮುಖ: ಉಲಿದ = ಹೇಳಿದ; ಮೇರು = ಶ್ರೇಷ್ಠವಾದ ; ಆಯುಷ = ಆಯುಷ್ಯ ; ಡೊಣ್ಣೆ = ಕೋಲು (ಬಡಿಗೆ) ಚಾರು ಚಿತ್ರದ ಡೊಣ್ಣೆ = ಬಣ್ಣದಿಂದ ಅಲಂಕರಿಸಿದ ಬಡಿಗೆ; ಶುನಕ = ನಾಯಿ; ತಾರಕ = ಷಣ್ಮುಖನಿಂದ ಕೊಲ್ಲಲ್ಪಟ್ಟ ಒಬ್ಬ ದೈತ್ಯ; ಬಾಲ್ಯ = ಬಾಲಾವಸ್ಥೆ; ಸಿಂಗ = ಸಿಂಹ; ಸೆಣಸು = ಯುದ್ಧ ಮಾಡು (ಕಾದಾಡು ).

ಭಾವಾರ್ಥ- ಖಡ್ಗದಂಷ್ಟ್ರನ ಚೂರಿಯಿಂದ ಇರಿಯುವಂಥ ಘೋರ ಶಬ್ದಗಳನ್ನು ಷಣ್ಮುಖನು ಮಧ್ಯದಲ್ಲಿಯೇ ಆರ್ಭಟಿಸಿ ತಡೆದು. ಕಣ್ಣಿನಿಂದ ಕಿಡಿ ಕಾರುತ್ತ "ಎಲವೋ ದೈತ್ಯನೇ! ಯಾರು ಹಿರಿಯರು ? ಯಾರು ಕಿರಿಯರು? ಎಂಬುದನ್ನು ಈಗ ನಡೆಯುವ ಯುದ್ಧವು, ತಾನಾಗಿಯೇ ಸಾರಿ ಹೇಳುತ್ತದೆ. ಗರ್ವಯುಕ್ತವಾದ ನೀಚ ವಚನಗಳನ್ನುಚ್ಚರಿಸಬೇಡಾ ! ಸರ್ವಶ್ರೇಷ್ಠರಾದ ಹರಿಹರರನ್ನು ನಿಂದಿಸಿದ ನಿನ್ನ ಆಯುಷ್ಯವು, ಈಗ ಮುಗಿದೇ ಹೋಗಿದೆ. ಅಂದ ಬಳಿಕ ನಿನ್ನಂಥ ಹೀನ ನಾಯಿಯನ್ನು ಕೊಲ್ಲುವದಕ್ಕೆ, ಬಣ್ಣ ಬಳಿದ ಚಿತ್ತಾರದ ಬಡಿಗೆ ಏತಕ್ಕೆ ಬೇಕು ?.

ಪ್ರಚಂಡ ರಾಕ್ಷಸನೆಂದು ಹುರುಪಿನಿಂದ ಉಬ್ಬುಬ್ಬಿ ಬಂದ ತಾರಕಾಸುರನಂಥ ಮಹಾ ದೈತ್ಯರನನ್ನು ಕೊಂದವನು ನಾನು! ಅಂದಮೇಲೆ ನನಗೇತರ ಬಾಲ್ಯಾವಸ್ಥೆ? ಜನ್ಮತ : ಶೂರ ಪ್ರಾಣಿಯಾದ ಸಿಂಹದ ಮರಿಯು, ಎಂದಾದರೂ ಮದ್ದಾನೆಗೆ ಅಂಜ ಬಹುದೇ? ನೀನು ನಿನ್ನ ಪೌರುಷ್ಯಕ್ಕನುಗುಣವಾಗಿ ರಣಾಂಗಣದಲ್ಲಿ ಧೀರತನದಿಂದ ಹೋರಾಡು! ನಮ್ಮ ನಿಮ್ಮ ಸೈನ್ಯಗಳ ಪ್ರವೇಶವೇ ಇದರಲ್ಲಿ ಬೇಡಾ! ಅವು ದೂರದಲ್ಲಿ ನಿಂತುಕೊಂಡು, ನಮ್ಮ ಶಕ್ತಿ ಸಾಮರ್ಥ್ಯಗಳನ್ನು ನೋಡುತ್ತಲಿರಲಿ! ವ್ಯರ್ಥವಾದ ಮಾತುಗಳಿಂದ ಯಾವ ಪ್ರಯೋಜನವೂ ಇಲ್ಲ, ಎಲವೋ ರಾಕ್ಷಸನೇ ! ನೀನು ಶೂರನಾದರೆ ನನ್ನೊಂದಿಗೆ ಯುದ್ಧದಲ್ಲಿ ಕಾದಾಡಿ ಗೆದ್ದು, ನಿನ್ನ ಗಂಡೆದೆಯ ಗುಂಡಿಗೆಯನ್ನು ನನಗೂ ಸ್ವಲ್ಪ ತೋರಿಸು !

**ಷಡುವದನ ನುಡಿಗೇಳಿ ಪಲ್ಗಳ । ಕಡ ಕಡನೆ ಕಡಿಯುತ್ತ ರಕ್ಕಸ ।**
**ಕಿಡಿಗಳಂ ಕಾರುತ್ತ ಕಣ್ಣಲಿ ಧನುವನೆತ್ತಿದನೂ ॥**
**ಜಡಿದ ನೈ ನೂರಾರು ಶರಗಳ । ಕಿಡಿಯ ಕಾರುವ ಕೆಂಡದುಂಡೆಯ ।**
**ಸುಡುವ ಪ್ರಲಯಾಗ್ನಿಯನು ಹೋಲುವ ಮಂತ್ರದಸ್ತ್ರಗಳಾ ॥೧೭॥**

ತಡವ ಮಾಡದೆ ಸ್ಕಂದ ತಾಡಿಸಿ । ಕಡಿದನಾ ರಾಕ್ಷಸನ ಶರಗಳ ।
ತುಡುಕಿ ಕಿವಿವರೆಗೆಳೆದು ಬಿಸುಟನು ಸಾಸಿರಂಬುಗಳಾ ॥
ಸಡಗರದಿ ಖಡುಗವನು ತಿರುಗಿಸಿ । ಕಡಿದನಾ ಶರಗಳನು ರಕ್ಕಸ ।
ಒಡನೆ ಗುರಿಯಿಟ್ಟೊಡೆದ ದಶ ಬಾಣಗಳ ಮುಕುಟಕ್ಕೆ ॥೧೮॥

ಸಿಡಿದವೈ ಮಣಿ ಮುಕುಟ ಭೇದಿಸಿ । ಒಡೆದು ಪುಡಿಪುಡಿಯಾಗಿ ಧರಣಿಗೆ ।
ಷಡುವದನ ಕಡು ರೋಷದಿಂದಲಿ ದೈತ್ಯಗಿಂತೆಂದಾ ॥
ತಡೆದುಕೋ ಈ ಶಕ್ತಿ ಆಯುಧ । ಬಿಡದು ನಿನ್ನನು ಪ್ರಾಣ ವಳಿಸದೆ।
ಮೃಡನ ನೆನೆ ಮೂಢಾತ್ಮನೆನ್ನುತ ಬಿಸುಟ ಶಕ್ತ್ಯಾಸ್ತ್ರ ॥೧೯॥

ಶಬ್ದಾರ್ಥ:- ಷಡುವದನ = ಷಣ್ಮುಖ; ಪಲ್ಗಳ = ಹಲ್ಲುಗಳನ್ನು; ಸ್ಕಂದ = ಷಣ್ಮುಖ; ತಾಡಿಸಿ = ಅಪ್ಪಳಿಸಿ; ಬಿಸುಟನು = ಬಿಟ್ಟನು; ಸಾಸಿರ = ಸಾವಿರ; ಅಂಬು = ಬಾಣ ಖಡುಗ = ಖಡ್ಗ; ಭೇದಿಸಿ = ತುಂಡಾಗಿಸಿ; ಪ್ರಾಣವಳಿಸದೆ = ಕೊಲ್ಲದೆ.

ಭಾವಾರ್ಥ - ರಾಕ್ಷಸನು ಷಣ್ಮುಖನ ವೀರಾವೇಶದ ಮಾತುಗಳನ್ನು ಕೇಳಿ, ಕಡಕಡನೇ ಹಲ್ಲು ಕಡಿದನು. ಮತ್ತೂ ಕಣ್ಣುಗಳಲ್ಲಿ ಕಿಡಿಯನ್ನು ಕಾರುತ್ತ ತನ್ನ ಬಲವಾದ ಧನುಸ್ಸನ್ನು ಮೇಲಕ್ಕೆತ್ತಿಕೊಂಡು, ತಪ್ತ ಜ್ವಾಲೆಯಂತೆ ಕೆಂಡವನ್ನು ಗುಳುವ ನೂರಾರು ಮಂತ್ರಾಸ್ತ್ರಗಳನ್ನು ಷಣ್ಮುಖನ ಮೇಲೆ ಪ್ರಯೋಗ ಮಾಡಿದನು. ಆದರೆ ಷಣ್ಮುಖನು ತಡಮಾಡದೇ, ಎದುರು ಬಾಣಗಳನ್ನು ಬಿಟ್ಟು, ಆ ರಾಕ್ಷಸನ ಅಸ್ತ್ರಗಳನ್ನೆಲ್ಲ ಮಧ್ಯಂತರದಲ್ಲಿಯೇ ಕತ್ತರಿಸಿ ಹಾಕಿದನು. ಮತ್ತೂ ತನ್ನ ಧನಸ್ಸಿನ ಸೂತ್ರವನ್ನು ಕಿವಿಯ ವರೆಗೂ ಬರುವಂತೆ ಜಗ್ಗಿ, ಆ ರಾಕ್ಷಸನ ಮೇಲೆ ಸತತವಾಗಿ ಒಂದು ಸಾವಿರ ಬಾಣಗಳನ್ನು ಪ್ರಯೋಗ ಮಾಡಿದನು.

ಆದರೆ ಬಲಾಢ್ಯನಾದ ಖಡ್ಗದಂಷ್ಟ್ರನು ತನ್ನ ಖಡ್ಗವನ್ನು ಚಾತುರ್ಯದಿಂದತಿರುಗಿಸುತ್ತ, ಷಣ್ಮುಖನ ಆ ಸಾವಿರ ಬಾಣಗಳನ್ನೂ ಕತ್ತರಿಸಿ ಹಾಕಿದನು. ನಂತರ ಸಿಟ್ಟನಿಂದ ಹಲ್ಲು ಕಡಿಯುತ್ತ, ಹತ್ತು ಬಾಣಗಳನ್ನು ಏಕ ಕಾಲದಲ್ಲಿ ಧನುಸ್ಸಿಗೆ ಹೂಡಿಹೊಡೆದನು. ಕುಮಾರ ಸ್ವಾಮಿಯ ರತ್ನ ಖಚಿತ ಕಿರೀಟವು ಪುಡಿ ಪುಡಿಯಾಗಿ ನೆಲಕ್ಕೆ ಬಿದ್ದಿತು. ಮುತ್ತು ರತ್ನಗಳೆಲ್ಲ ಸೂರೆಯಾಗಿ ಹೋದವು. ಆಗ ಷಣ್ಮುಖನಿಗೆ ಉಗ್ರ ಕೋಪವುಂಟಾಗಿ, ಆತನು ರೋಷದಿಂದ ಕುದಿಯುತ್ತ, ಆ ಖಡ್ಗದಂಷ್ಟ್ರ ನನ್ನು ಕುರಿತು, ''ಎಲೋ ರಾಕ್ಷಸಾಧಮನೇ! ಈ ನನ್ನ ಬಲವಾದ ಶಕ್ತ್ಯಾಯುಧದ ಪ್ರಹಾರವನ್ನು ನೀನು ತಾಳಿಕೋ !... ಇದು ಎಂದಿದ್ದರೂ ನಿನ್ನ ಪ್ರಾಣ ತೆಗೆದುಕೊಳ್ಳದೇ ಬಿಡಲಾರದು, ಎಲೋ ಮೂಢಾತ್ಮಾ! .... ಕೊನೆಗಾಲದಲ್ಲಿ - ಯಾದರೂ ನೀನು ಸದ್ಬುದ್ಧಿ ಹೊಂದಿದವನಾಗಿ ಶಿವನ ನಾಮಸ್ಮರಣೆ ಮಾಡು!..'' ಎಂದು ನುಡಿಯುತ್ತ ಆ ದೈತ್ಯನ ಮೇಲೆ ಶಕ್ತ್ಯಾಯುಧವನ್ನು ಪ್ರಹಾರ ಮಾಡಿದನು.

ನೂರು ಗಂಟೆಯ ನಾದದೊಂದಿಗೆ । ತೂರಿ ಬರುತಿಹ ದಿವ್ಯ ಅಸ್ತ್ರವ ।<br>
ಹಾರಿ ಕಡಿದರು ಬಿಡದೆ ಬೆಂಬಳಿಸಿತ್ತು ಖಲಮಣಿಯಾ ॥<br>
ಹೊಡೆಯಿತ್ತೆ ಎದೆಯೊಳಗೆ ನಾಂಟುತ । ಉಡುಗಿ ಹಿಂಬದಿಯೊಳಗೆ ಹಾಯಲು ।<br>
ಗುಡುಗಿ ನೆತ್ತರು ಕಾರಿ ಮಡಿದನು ಖಡ್ಗ ದಂಷ್ಟ್ರಖಳಾ ॥ ೨೦ ॥

ಕಂಡು ಸೇನಾಧಿಪನ ಸಾವನು । ದಂಡು ದುಗುಡವ ಗೊಂಡು ಭಯದಲಿ।<br>
ಹಿಂಡು ಗೊಳ್ಳುತ ಲೋಡಿತ್ತೆ ತಾ ಜೀವದಾಸೆಯಲಿ ॥<br>
ಪುಂಡ ತನ ದೊಳಗಟ್ಟಿ ದಿವಿಜರು ತುಂಡು ತುಂಡಾಗಿಸಲು ದೇಹವ ।<br>
ಹಿಂಡು ರಕ್ತದ ನದಿಗಳುಟ್ಟಿದವಾ ಪ್ರದೇಶದಲಿ ॥ ೨೧॥

ಶಬ್ದಾರ್ಥ :- (೨೦,೨೧) ಬೆಂಬಳಸಿ = ಬೆನ್ನತ್ತಿ; ಖಲಮಣಿ = ಅತೀ ಕೆಟ್ಟವ (ರಾಕ್ಷಸ); ನಾಂಟು = ನಾಟು; ಉಡುಗಿ = ಪಾರಾಗಿ; ಗುಡುಗಿ = ಆರ್ಭಟಿಸಿ; ಸೇನೆಯಧಿಪತಿ = ಸೇನಾಪತಿ; ಮ್ಲಾನಗೊಳ್ಳು = ವ್ಯಾಕುಲಗೊಳ್ಳು; ಚಲ್ಲರಿದು = ದಿಕ್ಕಾಪಾಲಾಗಿ; ತೆರ = ರೀತಿ.

ಭಾವಾರ್ಥ - (೨೦,೨೧) ಬಲವಾದ ಶಕ್ತ್ಯಾಸ್ತ್ರಕ್ಕೆ ಕಟ್ಟಿದ ನೂರುಗಂಟೆಗಳ ನಾದದೊಂದಿಗೆ ಆ ಭಯಂಕರ ಅಸ್ತ್ರವು, ರಾಕ್ಷಸನನ್ನು ಗುರಿ ಮಾಡಿಕೊಂಡು ಹೊರಟಿತು. ರಾಕ್ಷಸನು ತನ್ನ ಖಡ್ಗದಿಂದ ಅದನ್ನು ಹಾರಿ ಕಡಿಯಲೆತ್ನಿಸಿದರೂ ಅದು ಸಾಧ್ಯವಾಗಲಿಲ್ಲ. ಕೊನೆಗೂ ಆ ಮಹಾ ಅಸ್ತ್ರವು ಖಡ್ಗದಂಷ್ಟ್ರನ ಎದೆಗೆ ನಟ್ಟು ಬೆನ್ನಲ್ಲಿ ಹಾಯ್ದು ಹೊರಬಿದ್ದಿತು. ದೈತ್ಯನು ಆ ನೋವಿನಿಂದ ಘನ ಘೋರವಾಗಿ ಕಿರುಚಿಕೊಂಡು, ರಕ್ತಕಾರಿ ನೆಲಕ್ಕೆ ಬಿದ್ದನು. ಸ್ವಲ್ಪೇ ವೇಳೆಯಲ್ಲಿ ಆತನ ಪ್ರಾಣಪಕ್ಷಿ ಹಾರಿ ಹೋಯಿತು.

ತಮ್ಮ ಸೇನಾಪತಿಯು ಸತ್ತದ್ದನ್ನು ನೋಡಿದ ಕೂಡಲೇ ದೈತ್ಯಸೇನೆಯು ಕಳವಳಗೊಂಡಿತು. ದೈತ್ಯ ಸೈನಿಕರೆಲ್ಲ ಪ್ರಾಣ ಉಳಿದರೆ ಸಾಕೆಂಬ ಭೀತಿಯಿಂದ ದಿಕ್ಕಾಪಾಲಾಗಿ ಓಡತೊಡಗಿದರು. ಆದರೆ ದೇವ ಸೇನೆಯು ಅವರನ್ನೆಲ್ಲ ಬೆಂಬತ್ತಿ ತಮ್ಮ ಬಲವಾದ ಖಡ್ಗಗಳಿಂದ ಕುರಿ - ಕೋಣಗಳನ್ನು ಕಟುಕರು ಕಡಿಯುವ ಹಾಗೆ, ತುಂಡರಿಸಿ ಚೆಲ್ಲತೊಡಗಿದರು, ಇದರಿಂದಾಗಿ ರಣ ಭೂಮಿಯೆಲ್ಲವೂ ರಕ್ತಮಯವಾಗಿ, ರಕ್ತದ ನದಿಗಳು ಹುಟ್ಟಿ ಹರಿಯತೊಡಗಿದವು.

ಇತಿ, ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್. ಜೋಶಿ ವಿರಚಿತ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್,
ಖಡ್ಗದಂಷ್ಟ್ರವಧೋ ನಾಮಕ, ಚತುರ್ದಶೋಧ್ಯಾಯಃ ॥
ಅಂತು ಅಧ್ಯಾಯ ೧೪ ಕ್ಕಂ, ಪದ ೨೧ಕ್ಕಂ, ಒಟ್ಟು ಪದ - ೨೧೨ ಕ್ಕಂ, ಮಂಗಲಮಸ್ತು

ಏಳು ಕೋಟಿಗ ! ಏಳುಕೋಟಿಗ !! ಏಳು ಕೋಟಿಗೋ !!! ಸಾಂಗಬಲೋ !!....



ಅಧ್ಯಾಯ ೧೫ ಪಂಚದಶೋಧ್ಯಾಯಃ ||

## ಉಲ್ಕಾಮುಖ ಸಂಹಾರ

-: ಸೂಚನೆ :-

**ಖಡುಗ ದಂಷ್ಟ್ರನ ವಧೆಯ ಕಾಣುತ । ಮಿಡುಕಿದನು ಪಲ್ಗಡಿದು ಮಲ್ಲನು ।**
**ಒಡನೆ ಅಟ್ಟಿದ ವೀರ ಉಲ್ಕಾಮುಖನ ಗೌರವಿಸೀ ||**

ಸೂಚನೆಯ ಅರ್ಥ :- ದೇವ ದಾನವರ ಯುದ್ಧದಲ್ಲಿ ತನ್ನ ಸೇನಾಪತಿಯಾದಂಥಾ ಖಡ್ಗ ದಂಷ್ಟ್ರನು ಹತನಾದ ಸಂಗತಿಯನ್ನು ತಿಳಿದು, ದೈತ್ಯ ಚಕ್ರವರ್ತಿಯಾದ ಮಲ್ಲಾಸುರನು, ತುಂಬಾ ವ್ಯಥೆಗೊಂಡನು. ಮತ್ತೂ ಭಯಂಕರ ರೋಷದಿಂದ ದೇವತೆಗಳ ಮೇಲೆ ಹಲ್ಲು ಕಡಿಯುತ್ತ, ತನ್ನ ಸೈನ್ಯದಲ್ಲಿ ಪ್ರಚಂಡನಾದ ಉಲ್ಕಾಮುಖನೆಂಬ ದೈತ್ಯನಿಗೆ, ಸೇನಾಪತಿಯ ಪಟ್ಟಗಟ್ಟಿ, ಅವನನ್ನು ಅಮೌಲ್ಯ ಕಾಣಿಕೆಗಳಿಂದ ಗೌರವಿಸಿ, ''ಯುದ್ಧಕ್ಕಾಗಿ ಕಳಿಸಿಕೊಟ್ಟನೆಂಬ ವಿಷಯವು, ಮುಂದಿನ ಕಥಾನಕದಲ್ಲಿ ಬರುತ್ತಿದೆ''. ಎಂಬುದನ್ನು ಸೂಚಿಸಿ, ಕವಿಯು ತನ್ನ ಕಥಾ ಭಾಗವನ್ನು ಮುಂದುವರಿಸ್ತಾ ಇದ್ದಾನೆ.

**ಚಾರು ಮುಕುಟವ ಮೋರಿಸುತ ಆ। ಧೀರ ಸೇನಾಪತಿಗೆ ಗೌರವ ।**
**ತೋರಿ ಕೋಟ್ಯಾವಧಿಯ ಸೇನೆಯ ನಿತ್ತ ಮಲ್ಲ ಪ್ರಭೂ ||**
**ಮೇರೆ ಮೀರಿದ ಶೂರ ಕಾಲ್ದಳ। ಚಾರು ರಥಗಳು ಕರಿ ಹಯಂಗಳ ।**
**ಭಾರಿ ಶೌರ್ಯಾಯುಧಗಳಿತ್ತನು ಚಕ್ರಿ ಮುದದಿಂದಾ ||೧||**

ಶಬ್ದಾರ್ಥ :- ಮೋರಿಸು = ತಲೆಗೆ ಹಾಕು ; ಕಾಲ್ದಳ = ಕಾಲಾಳುಗಳು; ಚಾರು = ಸುಂದರವಾದ; ಚಕ್ರಿ = ಚಕ್ರವರ್ತಿ (ಸಾಮ್ರಾಟ); ಹಯಂಗಳ = ಕುದುರೆಗಳನ್ನು.

ಭಾವಾರ್ಥ:- ಆ ರಾಕ್ಷಸ ವೀರನಾದ ಉಲ್ಕಾಮುಖನಿಗೆ, ಮಲ್ಲ ಚಕ್ರವರ್ತಿಯು ತಾನೇ ಸ್ವತಃ ತನ್ನ ಕೈಯ್ಯಿಂದ ಸೇನಾಪತಿಯ ಪಟ್ಟಗಟ್ಟಿ, ಸುಂದರವಾದ ಕಿರೀಟವನ್ನು ಆತನ ತಲೆಗೆ ತೊಡಿಸ್ತಾ ಇದ್ದಾನೆ. ಮತ್ತೂ ಅಪಾರವಾದ ಧನ, ಫಲ ತಾಂಬೂಲಾದಿಗಳಿಂದ ಆತನಿಗೆ ಸತ್ಕಾರ ಮಾಡಿ, ಕೋಟ್ಯಾವಧಿಯ ಅಪಾರವಾದ ಸೇನಾ ಬಲವನ್ನು ಆತನ ವಶಕ್ಕೆ ಕೊಡ್ತಾ ಇದ್ದಾನೆ. ಬಹು ಸಂಖ್ಯಾತ ಕಾಲ್ದಳ ಭಯಂಕರವಾದ ಆಯುಧಗಳೂ, ಸುಂದರವಾಗಿದ್ದ ಸಾಕಷ್ಟು ರಥಗಳೂ, ಅಸಂಖ್ಯಾತ ಆನೆ, ಕುದುರೆ, ಶೂರ ಕಾಲಾಳುಗಳು ಚಕ್ರವರ್ತಿಯಾದ ಮಲ್ಲಾಸುರನಿಂದ ದೈತ್ಯ ಸೇನಾನಿಯಾದ ಉಲ್ಕಾಮುಖನಿಗೆ ಗೌರವ ಪೂರ್ವಕವಾಗಿ, ನೀಡಲ್ಪಡುತ್ತವೆ...... ಸೇನಾನಾಯಕನಿಗೆ ಆನಂದವೋ ಆನಂದ! ತನ್ನ ದೊರೆಯಾದ ಮಲ್ಲ ದೈತ್ಯನು, ತನ್ನ ಮೇಲೆ ಇಟ್ಟಿರುವಂಥ ಅಪಾರವಾದ ಪ್ರೀತಿ, ವಿಶ್ವಾಸಗಳಿಗೆ ಆತನು ಉಬ್ಬಿಹೋಗ್ತಾನೆ. ತ್ರೈಲೋಕದಲ್ಲಿ ತನಗೆ ಸರಿಸಮರಾರೂ ಇಲ್ಲವೆಂಬ ಗರ್ವವು, ಅವನ ಮಸ್ತಕಕ್ಕೆ ಏರ್‍ತಾ ಇದೆ. ಅವನು ಆ ಸೊಕ್ಕಿನಿಂದ, ಪ್ರತಿಮಾತು ಮಾತಿಗೂ ದೇವತೆಗಳಿಗೆ ಹಿಯಾಳಿಸ್ತುತ್ತಾ ಅವರ ಬಲವನ್ನು ತುಚ್ಛೀಕರಿಸುತ್ತಾ. ಮಲ್ಲ ಚಕ್ರವರ್ತಿಗೆ ನಮಸ್ಕಾರ ಮಾಡಿ, ಆತನ ಅನುಜ್ಞೆಯನ್ನು ಪಡೆದುಕೊಂಡು, ಸೇನೆ ಸಹಿತವಾಗಿ ಯುದ್ಧಕ್ಕೆ ಹೊರಡತಾ ಇದ್ದಾನೆ.

ಧೀರ ಉಲ್ಕಾ ಮುಖನ ಸುತ್ತಲು। ಚಾರು ಚಲುವೆಯ ರೊಪ್ಪುತಿರ್ದರು।
ನೂರು ಚಾಮರ ಬೀಸುತಿರ್ದರು ರತ್ನಮಣಿ ಖಚಿತಾ ॥
ಘೋರ ಭೀಕರ ಸ್ವರವ ಗೈಯ್ಯುವ ।ಭೇರಿ ವಾದ್ಯಗಳೆಲ್ಲ ಮೊಳಗಲು ।
ವೀರ ಗರ್ಜನೆ ಗೈದು ಏರಿದ ಚಾರು ರಥವನ್ನೂ ।೨॥

ಮೂರು ಲಕ್ಷಕು ಮಿಕ್ಕ ಸಿಂಧವ । ಹಾರಿ ಮೆರೆದವು ಬಾನ ಕಣದಲಿ ।
ವೀರ ಘೋಷಣೆ ಉಕ್ಕಿ ಕಿವಿಗಡಚಿಕ್ಕಿದವು ಕ್ಷಣದೀ ॥
ಧೀರನಿಗೆ ಜೈ ವೀರನಿಗೆ ಜೈ । ಶೂರ ಉಲ್ಕಾಮುಖಗೆ ಜೈ ಜೈ ।
ಮಾರ ಹರ ಸೇನೆಯನು ಧ್ವಂಸಿಪ ಖ್ಯಾತ ವೀರಗೆಜೈ ।೩॥

ಘೋರ ಭೀಕರ ಧ್ವನಿಯ ಗೈಯ್ಯುತ । ಸಾರಿ ತನ್ನೆಡೆ ತೂರಿ ಬರುತಿಹ ।
ವೀರ ದೈತ್ಯಾವಳಿಯ ನೋಡುತ ಶಿವನು ನಸುನಗುತ ॥
ವೀರ ಸುಮುಖಿಗೆ ಹಾರ ದೊರೆಯಿತು । ತೋರಿಸಲಿ ಭುಜ ಬಲದ ಶೌರ್ಯವ ।
ಮೇರು ರಕ್ಕಸ ನುರುಳಲೆಂದಾಲೋಚಿಸುತ ಮನದೀ ॥೪॥

ಹಿರಿಯ ಕುವರನ ಕರೆದು ಗಣಪನೆ । ಧರಿಸು ಇಂದಿನ ಸೇನೆ ಪಟ್ಟವ ।
ತರಿದು ಹಾಕುವದಖಿಳ ದೈತ್ಯರ ಸೇನೆ ಸಹಿತಾಗೀ ॥
ಇರಿದು ಅಂಕುಶದಿಂದ ಉಲ್ಕಾ । ಸುರನ ಕೊಲುವದು ಕರುಣೆಯಿಲ್ಲದೆ ।
ಸರಿಸಿಜೋದ್ಭವ ಬರೆದಿರುವ ಯಮ ನೀನೆ ಅವನಿಂಗೇ ॥೫॥

ಎಂದು ಪೇಳಿದ ತಂದೆಯಾನುಡಿ । ನಂದದಿಂದಾಲಿಸುತ ಗಣಪತಿ।
ಇಂದು ದೊರಕಿತು ಬೇಂಟೆ ತನಗೆಂತೆಂಬ ಹರ್ಷದಲೀ ॥
ಸಂದುಗೈಗಳಿಗಿಕ್ಕಿ ಷಡ್ಡನು। ಚಂದದಿಂದಂಕುಶವ ಹಾರಿಸಿ ।
ತಂದೆ ನೀ ಹರಸೆಂದು ಮಸ್ತಕವಿರಿಸಿದನು ಪದದೀ ॥೬॥

ಶಬ್ದಾರ್ಥ :- ಒಪ್ಪುತಿರ್ದರು = ಶೋಭಿಸುತ್ತಿದ್ದರು; ಚಾಮರ = ಬೀಸಣಿಕೆ; ರತ್ನ ಮಣಿ ಖಚಿತ = ರತ್ನಗಳನ್ನು ಕೆಚ್ಚಿದಂತಹ; ಮೊಳಗು = ಬಾರಿಸಲ್ಪಡು; ಚಾರು = ಸುಂದರವಾದ; ಸಿಂಧ = ಪತಾಕೆ; ಬಾನ ಕಣದಲಿ = ಆಕಾಶದಲ್ಲಿ; ಉಕ್ಕಿ= ಹೆಚ್ಚಾಗಿ; ಗಡಚಿಕ್ಕು = ಮರಗಟ್ಟು; ಮಾರಹರ = ಶಿವ; ಧ್ವಂಸಿಪ = ನಾಶಮಾಡುವಂಥ; ಖ್ಯಾತ = ಪ್ರಖ್ಯಾತನಾದ; ದೈತ್ಯಾವಳಿ = ದೈತ್ಯರ ಗುಂಪು; ಸುಮುಖ = ಗಣಪತಿ; ಭುಜಬಲ = ಪರಾಕ್ರಮ; ಉರುಳಲಿ = ನಾಶವಾಗಲಿ; ಸೇನೆಪಟ್ಟವ = ಸೇನಾಪತಿ ಪಟ್ಟವನ್ನು; ತರಿದು = ಕತ್ತರಿಸಿ; ಉಲ್ಕಾಸುರ = ಉಲ್ಕಾಮುಖನೆಂಬ ದೈತ್ಯ; ಸರಸಿಜೋದ್ಭವ = ಬ್ರಹ್ಮ; ಯಮ = ಕೊಲ್ಲುವವ ನಂದದಿಂದ = ಆನಂದದಿಂದ; ಬೇಂಟೆ = ಬೇಟೆ; ಸಂದುಗೈ = ಮೊಳಕೈ; ಪಡ್ಡು = ಚಪ್ಪಾಳೆ (ಕುಸ್ತಿಯಾಡುವಾಗ ಪಟುಗಳು ತೋರುವ ಒಂದು ಸಂಜ್ಞೆ; ಮಸ್ತಕ = ತಲೆ; ಪದದಿ = ಪಾದಗಳಲ್ಲಿ.

ಭಾವಾರ್ಥ - ಧೀರನಾದ ಉಲ್ಕಾಮುಖನ ಸುತ್ತಲೂ ನೂರಾರು ಜನ ಸುಂದರಿಯರು ಮುಕುರಿಕೊಂಡು, ಉಲ್ಕಾಮುಖನಿಗೆ ರತ್ನಖಚಿತವಾದ ಹಿಡಿಕೆಗಳಿಂದೊಡಗೂಡಿದ ಬೀಸಣಿಕೆಗಳಿಂದ ಚಾಮರ ಬೀಸುತ್ತಿದ್ದರು. ಭಯಂಕರ ಶಬ್ದವನ್ನುಂಟು ಮಾಡುವ ಭೇರಿ, ರಣ ವಾದ್ಯಗಳು ಮೊಳಗಿದೊಡನೆಯೇ ಶೂರನಾದ ಉಲ್ಕಾಮುಖನು ವೀರಗರ್ಜನೆಯನ್ನು ಮಾಡಿ, ತನ್ನ ಸುಂದರವಾದ ರಥವನ್ನೇರಿ ಕುಳಿತನು. ಮೂರು ಲಕ್ಷಕ್ಕೂ ಹೆಚ್ಚಿನ ಸಂಖ್ಯೆಯ ಎತ್ತರವಾದ ಪತಾಕೆಗಳು ಆಕಾಶದಲ್ಲಿ ಹಾರಾಡತೊಡಗಿದವು. ಯೋಧರು ಗೈವ ವೀರಘೋಷಣೆಯಿಂದ ಕಿವಿಗಳು ಗಡಚಿಕ್ಕುವಂತಾದವು.''ಧೀರನಿಗೆ ಜೈ! ವೀರನಿಗೆ ಜೈ!! ಶೂರ ಉಲ್ಕಾ ಮುಖನಿಗೆ ಜೈ !!! ಶಿವನನ್ನು ಸೋಲಿಸಲು ಹೊರಟಿರುವ ಮಹಾ ಪರಾಕ್ರಮಶಾಲಿಗೆ ಜೈ ! '' ಎಂದು ಕೂಗುತ್ತಿರುವಂಥ ಭಯಂಕರ ಶಬ್ದವು , ತನ್ನೆಡೆಗೆ ತೂರಿತೂರಿ ಬರುತ್ತಿರುವದನ್ನು ಕೇಳಿ, ಮಾರ್ತಾಂಡ ಭೈರವನಾದ ಶಿವನು ನಗ್ತಾನೆ, ಮತ್ತೂ ತನ್ನ ಮನಸ್ಸಿನಲ್ಲಿಯೇ ಈ ರೀತಿಯಾಗಿ ಆಲೋಚನೆ ಮಾಡ್ತಾನೇ, '' ನಮ್ಮ ಹಿರಿಯ ಮಗನಾದಂಥಾ ಗಣಪತಿಗೆ, ಬಹುದಿವಸಗಳಿಂದಲೂ, ತನ್ನ ತೋಳ್ಬಲದ ಪರಾಕ್ರಮವನ್ನು ತೋರಿಸೋದಕ್ಕೆ

ಅವಕಾಶ ದೊರೆತಿರಲಿಲ್ಲ ಈ ದಿವಸ ಮಾತ್ರ, ಆತನ ಪರಾಕ್ರಮ ತೋರಿಸೋದಕ್ಕೆ, ಸರಿಯಾದ ಬೇಟೆ ಸಿಕ್ಕಂತಾಯಿತು. ಆತನ ಕೈಯ್ಯಿಂದಲೇ ಈ ಉಲ್ಕಾಮುಖನೆಂಬ ಮಹಾ ದೈತ್ಯನ ವಧೆಯಾಗಲೀ'' ಎಂದು ಆಲೋಚಿಸಿ, ತನ್ನ ಜೇಷ್ಠ ಪುತ್ರನಾದ ಗಣಪತಿಯನ್ನು ಕರೆದು, ''ಮಗೂ ಗಣಪತೀ!... ಇಂದಿನ ಸೇನಾಪತಿಯ ಪಟ್ಟ ನಿನ್ನದಾಗಲೀ!!.. ನೀನು ಪರಾಕ್ರಮದಿಂದ ಹೋರಾಡಿ ದೈತ್ಯ ಸೇನೆಯನ್ನೆಲ್ಲ ಸಂಹಾರ ಮಾಡು!... ದೈತ್ಯ ಸೇನಾಪತಿಯಾಗಿ ಬಂದಂಥಾ ಉಲ್ಕಾ ಮುಖನನ್ನು ಕರುಣೆಯಿಲ್ಲದೇ ನಿನ್ನ ಅಂಕುರ, ಕುಠಾರಗಳಿಂದ ಕತ್ತರಿಸಿ ಹಾಕು ! ''ನಿನ್ನ ಕೈಯ್ಯಿಂದಲೇ ಉಲ್ಕಾಮುಖನೆಂಬ ಆ ದೈತ್ಯನಿಗೆ ಮರಣವೆಂದು ''ಬ್ರಹ್ಮನು ಆತನ ಹಣೆಯಲ್ಲಿ ಬರೆದು ಕಳಿಸಿದ್ದಾನೆ.'' ಎಂದು ಆಜ್ಞೆ ಮಾಡಿದನು.

ಹೀಗೆ ಹೇಳಿದಂಥ ತಂದೆಯ ಮಾತನ್ನು ಕೇಳಿ ಗಣಪತಿಗೆ ತುಂಬಾ ಹರ್ಷವಾಗ್ತಾ ಇದೆ. ನಾನು ಬಹುದಿವಸಗಳಿಂದ ನನ್ನ ಪರಾಕ್ರಮ ತೋರಿಸೋದಕ್ಕೆ ಬೇಟೆಯೊಂದನ್ನು ಬಯಸ್ತಾ ಇದ್ದೆ; "ಇಂದು ಪರಶಿವನ ಅನುಗ್ರಹದಿಂದ "ಅದು ಪೂರ್ಣವಾಂದಂತಾಯ್ತು" ಅಂತಾ ಕೇಕೆಹಾಕಿ, ತನ್ನ ತೋಳುಗಳಿಗೆ ಪಡ್ಡು ಹೊಡೀತಾನೆ!... ಹಾಗೂ ಆನಂದದಿಂದ ಅಂಕುಶವನ್ನು ತೂರಿ ತೂರಿ ತನಗಾದ ಸಂತಸವನ್ನು ವ್ಯಕ್ತಮಾಡ್ತಾನೆ, ಮತ್ತೂ ತಂದೆ ತಾಯಿಗಳ ಪಾದ ಕಮಲಗಳಿಗೆ ನಮಸ್ಕರಿಸಿ, " ಶುಭ ವಾಗಲೆಂದು ಆಶೀರ್ವದಿಸಿರೀ" ಅಂತಾ ಬೇಡಿಕೊಳ್ತಾ ಇದ್ದಾನೆ.... ಆಗ ಶಿವನು ಏನು ಹೇಳ್ತಾನೇ ಅಂದ್ರೆ....

**ಕಂದ ನೀ ಮಂಗಳದ ಮೂರ್ತಿಯು । ಎಂದು ಹರಸಿಹೆ ನಾನದೆಂದೋ ।**
**ಬಂದ ವಿಘ್ನಗಳೆಲ್ಲ ಕಳೆವವು ನಿನ್ನ ಕೃಪೆಯಿಂದಾ ॥**
**ಎಂದ ಮೇಲನುಮಾನವೇತಕೆ । ಕೊಂದು ಬಾ ಆ ಖೂಳ ದೈತ್ಯನ ।**
**ಎಂದು ಗೌರೀಸಹಿತ ಆಶೀರ್ವದಿಸಿದನು ಶಿವನೂ ॥೭॥**

ಶಬ್ದಾರ್ಥ :- ವಿಘ್ನ = ತೊಂದರೆ; ಖೂಳ = ಕೆಟ್ಟ; ಗೌರೀಸಹಿತ = ಪಾರ್ವತಿ ಸಮೇತ.

ಭಾವಾರ್ಥ :- ಮಗೂ ಗಣೇಶಾ !... ನೀನು ಎಂದೆಂದಿಗೂ ಮಂಗಲಮೂರ್ತಿಯಾಗಿಯೇ ಮೆರೆಯತಕ್ಕದ್ದೆಂದು, ನಾನು ಈ ಹಿಂದೆಯೇ ನಿನಗೊಮ್ಮೆ ಆಶೀರ್ವದಿಸಿ ಬಿಟ್ಟಿದ್ದೇನೆ. ಆ ನನ್ನ ಹರಕೆಯಂತೆ, ಸರ್ವ ವಿಘ್ನಗಳಿಗೂ ನೀನೇ ಅಧಿಪತಿಯಾಗಿರುವಿ, ಅಂದ ಮೇಲೆ ನೀನು ಅನುಮಾನ ಪಡುತ್ತಿರುವದಾದರೂ ಏತಕ್ಕೆ? ಧೈರ್ಯದಿಂದ ರಣ ರಂಗಕ್ಕೆ ನುಗ್ಗಿ, ಆ ಕೆಟ್ಟ ರಾಕ್ಷಸನಾದ ಉಲ್ಕಾಮುಖನನ್ನು ಸಂಹರಿಸಿ ಬಾ!" ಹೀಗೆಂದು ನುಡಿದು ತಂದೆ ತಾಯಿಗಳಿಬ್ಬರೂ ಗಣಪತಿಗೆ ಹೃತ್ಪೂರ್ವಕವಾಗಿ ಆಶೀರ್ವಾದ ಮಾಡ್ತಾರೆ, ಆಗ ಗಣಪತಿಗೆ ತುಂಬಾ ಸಂತೋಷವಾಗ್ತಾ ಇದೆ.

ಕರಿಯ ಸಮನೆತ್ತರದ ಇಲಿಗಳ । ತರಿಸಿ ಹೂಡಿಸಿ ರಥಕೆ ಪಲ್ಲಣ ।
ಏರಿಸಿ ಏರಿದ ಚಾಪಧನು ಪಾಶಾಂಕುಶವ ಧರಿಸೀ ॥
ಸುರರು ಹೂಮಳೆ ಗರೆದು ಉಘೆ ಎಂ । ದೊರೆದು ಒಕ್ಕೊರಲಿಂದ ಆಯುಧ ।
ಧರಿಸಿ ಬೆಂಬಳಿಸಿದರು ಸುಮುಖನ ಸೇನೆ ಸಹಿತಾಗೀ ॥೮॥

ಗುಡುಗಿ ಉಲಿದವು ಭೇರಿ ನಪ್ಪುರಿ । ನಡುಗಿದವು ದಿಗ್ಗಜಗಳೆಲ್ಲವು ।
ಸಡಗರದ ಆ ಸೇನೆ ತುಳಿತಕೆ ಭುವಿಯು ಪುಡಿಯಾಗೀ ॥
ಅಡಿರಿತ್ತೈ ಕೆಂಧೂಳಿ ದಿಗ್ತಟ । ವಡಗಿದವು ಮಸುಕಾಗಿ ಎಲ್ಲೆಡೆ ।
ಗುಡುಗಿನಂತಹ ಕುಕುಬು ಜಯಜಯಕಾರಗಳು ಮೊರೆತೂ ॥೯॥

ಶಬ್ದಾರ್ಥ :- ಪಲ್ಲಣ = ಥಡಿ (ಜೂಲ) ಒಕ್ಕೊರಲಿಂದ = ಏಕಕಂಠದಿಂದ; ಬೆಂಬಳಿಸು = ಬೆನ್ನಹಿಂದೆ ಸಾಗು; ಸುಮುಖ = ಗಣಪತಿ; ನಪ್ಪುರಿ = ಒಂದು ರಣವಾದ್ಯ; ದಿಗ್ಗಜಗಳು = ದಿಕ್ಕುಗಳನ್ನು ಹೊತ್ತು ನಿಂತಿರುವ ಎಂಟು ಆನೆಗಳು; ಭುವಿ = ಭೂಮಿ; ದಿಗ್ತಟ = ದಿಗಂತ; ಅಡಗು = ಮರೆಯಾಗು; ಕುಕುಬು = ಕೇಕೆ; ಮೊರೆತು = ಹೊರಹೊಮ್ಮಿ.

ಭಾವಾರ್ಥ :- ಕೂಡಲೇ ಗಣಪತಿಯು, ಆನೆಯ ಎತ್ತರಕ್ಕೆ ಸಮಾನವಾಗಿರುವಂಥ ದೊಡ್ಡ ದೊಡ್ಡ ಇಲಿಗಳನ್ನು ತರಿಸಿ ತನ್ನ ರಥಕ್ಕೆ ಹೂಡಿಸಿದನು. ಆ ಇಲಿಗಳ ಬೆನ್ನ ಮೇಲೆ ಬಹು ಬೆಲೆಯುಳ್ಳ ಥಡಿಗಳನ್ನು (ಜೂಲಗಳನ್ನು) ಹಾಕಿಸಿದನು. ಮತ್ತೂ ತಾನು ಧನಸ್ಸು, ಬಾಣ, ಪಾಶ, ಅಂಕುಶ, ಕೊಡಲಿ ಮುಂತಾದ ಸಕಲ ಆಯುಧಗಳನ್ನು ಧರಿಸಿ, ರಥ ವೇರಿದನು. ದೇವತೆಗಳು ಆಕಾಶದಿಂದ ಗಣ ಪತಿಯ ಮೇಲೆ ಪುಷ್ಪವೃಷ್ಟಿ ಮಾಡುತ್ತ ''ಗಣನಾಥನಿಗೆ ಜಯವಾಗಲಿ'' ಎಂದು ಜೈ ಜೈಕಾರ ಮಾಡುತ್ತ ಅಸಂಖ್ಯಾತವಾದ ತಮ್ಮ ಸೇನಾಬಲದೊಂದಿಗೆ ಆ ರುದ್ರಸುತ ಗಣಪತಿಯನ್ನು ಹಿಂಬಾಲಿಸಿ ಹೊರಟರು.

ಭೇರಿ, ನಪೂರಿ, ಕಹಳೆ, ಮುಂತಾದ ರಣವಾದ್ಯಗಳು ಮೊಳಗತೊಡಗಿದವು. ಆ ಗರ್ಜನೆಯಿಂದ ತಲ್ಲಣಗೊಂಡ ಅಷ್ಟ ದಿಗ್ಗಜಗಳು ಗದಗದನೇ ನಡುಗತೊಡಗಿದವು, ವೈಭವದಿಂದ ಈ ಪ್ರಕಾರವಾಗಿ ಹೊರಟ ಆ ಅಸಂಖ್ಯಾತ ಸೇನೆಯ ಕಾಲ್ತುಳಿತಕ್ಕೆ ಸಿಕ್ಕು, ಭೂಮಿಯೆಲ್ಲವೂ ಪುಡಿಪುಡಿಯಾಗಿ, ಸಕಲ ದಿಕ್ಕುಗಳಲ್ಲಿಯೂ ಪಸರಿಸಿ ಕೆಂಧೂಳದಂತೆ ಭೂಮಿಯನ್ನೆಲ್ಲ ವ್ಯಾಪಿಸಿಬಿಟ್ಟಿತು. ಆ ಧೂಳದಿಂದಾಗಿ ಎಲ್ಲ ಕಡೆಯಲ್ಲಿಯೂ ಮಸುಕುಗೊಂಡತಾಯ್ತು. ಎಲ್ಲಿ ಕೇಳಿದರೂ ಕೇಕೆ, ಜಯಜಯಕಾರಗಳ ಧ್ವನಿಯೇ ಹೊರತೂ, ಇನ್ನೇನೂ ಕೇಳದಂತಾಯಿತು.

ರಿದ್ಧಿ ಸಿದ್ಧಿಗಳೀರ್ವರೂ ಸಮ । ರಿದ್ದು ಚಾಮರ ಬೀಸುತಿರ್ದರು ।
ಸಿದ್ಧಿನಾಥನ ರಥದೊಳಿಬ್ಬದಿಯೊಳಗೆ ನಿಂತಿರ್ದೂ ॥
ಮುದ್ದು ಗಣಪನ ಕಾಣುತಲಿ ತಾ। ಬಿದ್ದು ನಗತೊಡಗಿದನು ರಕ್ಕಸ ।
ಬುದ್ಧಿ ಇಲ್ಲವೆ ಶಿವಗೆ ಈ ಸುಕುಮಾರ ಬೇಡಹನೇ ॥ ೧೦॥

ಇದ್ದ ಭುಜಬಲದಿಂದ ಬುಭುಜರ । ಗೆದ್ದು ಸಗ್ಗಕೆ ಲಗ್ಗೆಯಿಕ್ಕುತ ।
ಲೊದ್ದು ಇಂದ್ರಾದಿಗಳ ನಳಿಸಿದ ಶುದ್ಧ ಶೂರನೊಳೂ ॥
ಬದ್ಧವೈರತ್ವವನು ತಾಳುತ । ಬುದ್ಧಿ ಇಲ್ಲದೆ ಬಾಲವಟು ಸಮ ।
ನಿದ್ದ ಅಣುಗನ ಬಿಡುವದೇ ಎಂದ್ಹರಗೆ ಹಳಿ ನುಡಿದಾ ॥೧೧॥

ಶಬ್ದಾರ್ಥ :- ರಿದ್ಧಿ ಸಿದ್ಧಿಯರು = ಗಣಪತಿಗೆ ವಶವಾಗಿದ್ದ ಪರಿಚಾರಿಕೆಯರು; ಸಿದ್ಧಿನಾಥ = ಗಣಪತಿ; ಇಬ್ಬದಿ = ಎರಡೂ ಕಡೆಗಳಲ್ಲಿ; ಚಾಮರ = ಬೀಸಣಿಕೆ; ರಕ್ಕಸ = ರಾಕ್ಷಸ; ಸುಕುಮಾರ = ಚಿಕ್ಕಬಾಲಕ; ಬೇಡಹನೇ = ಬೇಡವಾಗಿರುವನೇ; ಬುಭುಜ = ಅರಸು; ಸಗ್ಗ = ಸ್ವರ್ಗ; ಲಗ್ಗೆಯಿಕ್ಕು = ದಾಳಿಮಾಡು; ಅಳಿಸಿದ = ದುಃಖಿಪಡಸಿದ; ಬಾಲವಟು = ಬಾಲ ಬ್ರಹ್ಮಚಾರಿಯಾಗಿರುವ; (ಚಿಕ್ಕವಯಸ್ಸಿನವ) ಹಳಿನುಡಿದ = ಕೀಳುಮಾತಾಡಿದ; ಅಣುಗ = ಮಗ; ತಾಳುತ = ಹೊಂದುತ್ತ.

ಭಾವಾರ್ಥ :- ರಿದ್ಧಿ, ಮತ್ತೂ ಸಿದ್ಧಿಯರೆಂಬ ಇಬ್ಬರೂ ಗಣಪತಿಯ ವಶವರ್ತಿಯಾಗಿದ್ದ ಸುಂದರ ಪರಿಚಾರಿಕೆಯರು, ಗಣಪತಿಯ ರಥದಲ್ಲಿ ಸಮಾನ ರೂಪಗಳನ್ನು ಹೊಂದಿದವರಾಗಿದ್ದು, ಆತನ ಎಡಬಲಗಳಲ್ಲಿ ನಿಂತುಕೊಂಡು, ಚಾಮರವನ್ನು ಬೀಸುತ್ತಿದ್ದರು, ಇಂಥ ಸುಂದರ ಸುಕುಮಾರನಾದ ಸಿದ್ಧಿವಿನಾಯಕನು ತನ್ನೆಡೆಗೆ ಸಾಗಿ ಬರುತ್ತಿರುವದನ್ನು ನೋಡಿ, ರಾಕ್ಷಸ ಸೈನ್ಯದೊಡೆಯನಾದ ಆ ಉಲ್ಕಾಮುಖನು, ಬಿದ್ದು ಬಿದ್ದು ನಗಲಿಕ್ಕೆ ಪ್ರಾರಂಭಿಸ್ತಾನೆ!... ''ಈ ಭೋಲಾ ಶಂಕರನಿಗೆ ಸ್ವಲ್ಪವಾದರೂ ಬುದ್ಧಿಯಿದೆಯೇ? ಭೂತಳದಲ್ಲಿರುವ ಸಕಲ ರಾಜರುಗಳನ್ನು ಗೆದ್ದುದಲ್ಲದೇ ಸ್ವರ್ಗಕ್ಕೆ ಲಗ್ಗೆಯಿಟ್ಟು, ಇಂದ್ರಾದಿ ಅಷ್ಟದಿಕ್ಪಾಲಕರನ್ನೆಲ್ಲ ಸೋಲಿಸಿ ಅವರನ್ನು ಗೋಳಾಡಿಸಿ, ಸಾಕಷ್ಟು ಕಪ್ಪು ಕಾಣಿಕೆಗಳನ್ನು ಪಡೆಯುತ್ತಿರುವಂಥ ಮಹಾ ಪರಾಕ್ರಮಿಯಾದ ನನ್ನ ದೊರೆ ಮಲ್ಲ ಚಕ್ರವರ್ತಿಯ ಶೂರಸೇನಾನಾಯಕ ನೆದುರಿಗೆ, ಇಂಥ ಅಲ್ಪವಯದ ಸುಕುಮಾರನನ್ನು ಯುದ್ಧಕ್ಕಾಗಿ ಕಳಿಸಿರುವ ನೆಂದ ಮೇಲೆ, ಈ ಬಾಲ ಗಣಪತಿಯು ಅವರಿಗೆ ಬೇಡವಾಗಿದ್ದಾನೇನೋ ಎನಿಸುತ್ತದೆ. ಪರಾಕ್ರಮ ಶಾಲಿಯಾದ ಮಲ್ಲ ಚಕ್ರವರ್ತಿಯೊಂದಿಗೆ ವಿನಾಕಾರಣವಾಗಿ ವೈರತ್ವ ಕಟ್ಟಿಕೊಂಡು, ಪಾಪ, ಚಿಕ್ಕ ಮಗುವಾಗಿದ್ದ ಗಣಪತಿಯನ್ನು ಯುದ್ಧಕ್ಕೆ ಬಿಡಬಹುದೇ?'' ಎಂದುಕೊಳ್ಳುತ್ತ, ಆ ಸದಾಶಿವನಿಗೆ ತುಚ್ಛೀಕರಿಸಿ ಮಾತಾಡ್ತಾನೆ. ಮತ್ತೂ ಗಣಪತಿಯನ್ನು ಕುರಿತು ಹೀಗೆ ಪ್ರಶ್ನೆ ಮಾಡ್ತಾನೆ.

ಏಕೆ ಬಾಲಕ ಹಿರಿಯರಿಲ್ಲವೆ। ನಾಕ ವೀರರದೆಲ್ಲ ಮಡಿದರೆ ।
ಏಕೆ ಬೇಕಾಗಿತ್ತು ಬವರವು ಶಿವಗೆ ಶ್ರೀಹರಿಗೆ ॥
ನೂಕಿ ಅಟ್ಟಿದರೇನು ನಿನ್ನನು। ಮೇಕೆ ಮರಿಯಂದದಲಿ ಪಶುಬಲಿ।
ಗೇಕೆ ಅರ್ಪಿತವಪ್ಪಿ ಪೋಗೆಲೋ ಬೇಡ ಕೆಡಬೇಡಾ ॥೧೨॥

ತಾಯ ತೊಡೆಯನ್ನೇರಿ ಮೋದಕ। ಮೇಯುವದ ಬಿಟ್ಟೇಕೆ ಬವರಕೆ ।
ಸಾಯುವದಕಿಚ್ಛೈಸಿ ಬಂದೆಯೋ ಪೋಗು ಹಿಂತಿರುಗೀ॥
ಆಯವಿಲ್ಲವು ಯನ್ನ ಅಸ್ತ್ರಕೆ। ಮಾಯೆ ಕರುಣೆಗಳಿಲ್ಲ ತಿಲ ಸಮ।
ಸಾಯುವದ ನಾ ನೋಡಲಾರೆನು ತಿರುಗಿ ಪೋಗೆಂದಾ ॥ ೧೩॥

ಕಳಿಸು ಹರಿ ಹರರನ್ನು ಯುದ್ಧಕೆ । ಕಲಿಗಳಂದದಿ ಕಾದಿ ಗೆಲ್ಲಲಿ ।
ಉಳಿದ ಬಿಡಿಕಾಳುಗಳ ನೊರೆಸುವದಾವಲೆಕ್ಕನಗೇ ॥
ಬಲವ ಹೊಂದದ ಬಾಲಕನು ನೀ। ಛಲದಿ ನಿನ್ನನು ಕೊಂದೆನಾದಡೆ।
ಹಳಿಯುವರು ಬಲವಂತ ರಕ್ಕಸರೆಲ್ಲರೂ ಸೇರೀ ।೧೪॥

ಎಂದು ಅಣಕವನಾಡೆ ದನುಜನು । ಕಂದು ಗೊರಳಜ ಪೇಳ್ದ ಶೌರ್ಯದಿ ।
ಮಂದಗಜಗಳ ಹಿಂಡಿಗೊಂದೇ ಸಿಂಗಮರಿ ಸಾಕೂ ॥
ತಂದೆ ಶಿವನಿಗೆ ಬಾಲ ನಾ ನಿಜ । ವೆಂದು ನಿನ್ನಲಿ ಒಪ್ಪಿಕೊಳ್ಳುವೆ ।
ಇಂದು ನಾನೇ ನಿನಗೆ ಮೃತ್ಯುವು\ಎಂದು ತಿಳಿಯೆಂದಾ ॥ ೧೫॥

ಶಬ್ದಾರ್ಥ: ನಾಕ = ಸ್ವರ್ಗ; ಮಡಿದರೆ = ಸತ್ತರೆ; ಬವರ = ಯುದ್ಧ; ಮೇಕೆ = ಆಡು; ಪಶುಬಲಿ= ಯಜ್ಞಕ್ಕೆ ಆಹುತಿಕೊಡುವದಕ್ಕಾಗಿ ಇಟ್ಟ ಪಶು ; ಅರ್ಪಿತವಪ್ಪಿ = ಆಹುತಿಯಾಗುವಿ; ಮೋದಕ = ಹೂರಣದಿಂದ ಮಾಡಿದ ಒಂದು ಬಗೆಯ ಕರಿದ ಖಾದ್ಯ (ಗಣಪತಿಯ ಪ್ರೀತಿಯ ತಿನಿಸು); ಸಾಯುವದಕಿಚ್ಛೈಸಿ = ಸಾಯುವದಕ್ಕೆ ಆಸೆಪಟ್ಟು; ತಿಲಸಮ = ಎಳ್ಳಿನಷ್ಟೂ; ಮಾಯಿ = ಕನಿಕರ ;ಕಲಿ = ವೀರ; ಕೊಂದೆನಾದಡೆ = ಕೊಂದದ್ದಾರೆ; ಹಳಿಯುವರು = ಹೀಯಾಳಿಸುವರು; ಕಂದುಗೊರಳಜ = ಶಿವನ ಮಗನಾದ ಗಣಪತಿ; ಮಂದಗಜಗಳ ಹಿಂಡು = ಮದ್ದಾನೆಗಳ ಗುಂಪು; ಸಿಂಗ = ಸಿಂಹ; ಮೃತ್ಯುವು = ಯಮ ಸ್ವರೂಪಿ.

ಭಾವಾರ್ಥ:- "ಎಲೋ ಬಾಲಕಾ! ನೀನೇಕೆ ಬಂದಿ? ಯಾಕೆ? ನಿಮ್ಮಲ್ಲಿ ಹಿರಿಯರಾರೂ ಇಲ್ಲವೇ?... ಅಥವಾ ಸ್ವರ್ಗದೊಳಗಿನ ಶೂರ ಪುರುಷರೆಲ್ಲರೂ ಸಾವನ್ನಪ್ಪಿದರೇ? ಅಯ್ಯೋ ಪಾಪ, ಶಿವನಿಗಾಗಲೀ ಶ್ರೀ ಹರಿಗಾಗಲೀ ಈ ಯುದ್ಧದ ಹವ್ಯಾಸ ಯಾತಕ್ಕಾಗಿ ಬೇಕಾಗಿತ್ತು? ಯಜ್ಞಕ್ಕೆ ಬಲಿಕೊಡುವ ಮೇಕೆಯ ಮರಿಯಂತೆ, ಚಿಕ್ಕ ವಯಸ್ಸಿನವನಾದ ನಿನ್ನನ್ನು, ಅವರೆಲ್ಲರೂ ಸೇರಿ ಒತ್ತಾಯದಿಂದ ಈ ಯುದ್ಧಕ್ಕೆ ದೂಡಿ ಕಳಿಸಿರಬೇಕಲ್ಲವೇ ? ಪಾಪ ಪಾಪ!... ಬೇಡ ಮಗೂ ! ಈ ಯುದ್ಧವನ್ನು ಹೂಡಿ ನೀನು ವ್ಯರ್ಥವಾಗಿ ಬಲಿಪಶುವಿನಂತೆ ಸತ್ತು ಹೋಗುವದು ಬೇಡಾ! ನಿನ್ನ ತಾಯಿಯಾದ

ಪಾರ್ವತೀದೇವಿಯ ತೊಡೆಯ ಮೇಲೆ ಕುಳಿತುಕೊಂಡು ಮೋದಕ ಗಾರಿಗೆ ಮುಂತಾದ ಸವಿಸವಿಯಾದ ಖಾದ್ಯ ಪದಾರ್ಥಗಳನ್ನು ತಿನ್ನುತ್ತ ಕೂಡ್ರುವದನ್ನು ಬಿಟ್ಟು, ಸಾಯುವದಕ್ಕೆ ಇಚ್ಛೆಪಟ್ಟು ಅದೇಕೆ ಈ ಯುದ್ಧಕ್ಕೆ ಹೊರಟು ಬಂದಿ? ನನ್ನ ಬಲಾಢ್ಯವಾದ ಅಸ್ತ್ರಗಳಿಗೆ ಕರುಣೆ ಕಕ್ಕುಲಾತಿಗಳು ಎಳ್ಳಷ್ಟೂ ಇರುವದಿಲ್ಲ. ಅವು ಬಲು ಕ್ರೂರವಾಗಿವೆ.

ಹೀಗಿರುವಾಗ ನೀನು ವ್ಯರ್ಥವಾಗಿ ಸತ್ತು ಹೋಗುವದನ್ನು ನಾನು ನೋಡಲಾರೆ!... ಆದ ಕಾರಣ ನೀನೀಗ ತಿರುಗಿ ಹೋಗಿ ಬಿಡು!... ನಿನ್ನ ತಂದೆಯಾದ ಶಿವನನ್ನಾಗಲೀ, ಅಥವಾ ಶ್ರೀಹರಿಯನ್ನಾಗಲೀ, ಇಂದಿನ ಯುದ್ಧಕ್ಕೆ ಕಳಿಸಿಕೊಡು!... ಅವರಿಬ್ಬರೂ ನನ್ನೊಂದಿಗೆ ಶೌರ್ಯದಿಂದ ಕಾದಾಡಿ, ತಮ್ಮ ಪರಾಕ್ರಮವಿದ್ದರೆ ಜಯ ಸಾಧಿಸಿಕೊಳ್ಳಲಿ!. ಯಕಃಶ್ಚಿತನಾದ ನಿನ್ನಂಥ ಉಳಿದ ಬಿಡಿಕಾಳುಗಳನ್ನು ವರಿಸಿ ಹಾಕುವದೆಂದರೆ, ನನಗೆ ಯಾವ ಲೆಕ್ಕಕ್ಕೂ ನಿಲುಕದ ಮಾತು!... ಯಾಕೆಂದರೆ ನೀನಿನ್ನೂ ಚಿಕ್ಕ ವಯಸ್ಸಿನ ಬಾಲಕನಾಗಿರುವಿ. ನಾನೀಗ ಹಟಕ್ಕೆ ಬಿದ್ದು ಸಮರದಲ್ಲಿ ನಿನ್ನನ್ನು ಕೊಂದದ್ದಾದರೆ, ಪರಾಕ್ರಮಿಗಳಾದ ರಾಕ್ಷಸರೆಲ್ಲರೂ ಸೇರಿ, ನನಗೆ ಹೀಯಾಳಿಸಿ ಬಿಡುತ್ತಾರೆ. ಅದಕ್ಕಾಗಿ ನೀನೀಗ ಯುದ್ಧಮಾಡದೇ ತಿರುಗಿ ಹೋಗಿ ಬಿಡು!'' ಎಂದು ಆ ಉನ್ಮತ್ತರಾಕ್ಷಸನು ಅಣಕವನ್ನಾಡಿದ ಹಾಗೆ ಮಾತಾಡಿದಾಗ, ಗಣಪತಿಗೆ ತುಂಬಾ ಕೋಪ ಬರ್‍ತಾ ಇದೆ. ಆತನು ಕ್ರೋಧ ತಪ್ತನಾಗಿ, ಆ ರಾಕ್ಷಸನಾದ ಉಲ್ಕಾಮುಖನಿಗೆ ಏನು ಹೇಳ್ತಾನೇ ಅಂದ್ರೆ, ಎಲೋ! ಅಧಮಾಧಮನಾದ ಉಲ್ಕಾಮುಖನೇ! ಜನ್ಮತಃ ವೀರ ರಕ್ತದಿಂದ ಉದ್ಭವಿಸಿದವನಿಗೆ, ವಯೋಮಾನದ ಅಳತೆಗೋಲು ಸಾಲದು!... ಕೊಬ್ಬಿದ ಮದ್ದಾನೆಗಳು ಹಿಂಡಿಗೆ ಹಿಂಡಾಗಿ ಬಂದರೂ ಸಹಿತ, ಒಂದೇ ಒಂದು ಸಿಂಹದ ಮರಿಯು ಅವುಗಳನ್ನೆಲ್ಲ ಬಗ್ಗು ಬಡಿಯುವಂತೆ, ನನ್ನ ಸ್ವರೂಪವಿದೆ!... ನಾನು ಪರಶಿವನ ಬಗೆಯಲ್ಲಿ ಮಾತ್ರ ಬಾಲಕನಾಗಿರಬಹುದು! ಈ ನಿನ್ನ ವಾದವನ್ನು ನಾನು ನಿಜವೆಂದು ಒಪ್ಪಿಕೊಳ್ಳುತ್ತೇನೆ. ಆದರೆ ನಿನ್ನ ವಿಷಯದಲ್ಲಿ ಮಾತ್ರ ನಾನೇ ನಿನಗೆ ಮೃತ್ಯು ಸ್ವರೂಪನೆಂದು ಭಾವಿಸಿಕೋ!....ಇದು ಸತ್ಯ, ಸತ್ಯ, ಸತ್ಯ,'' ಎಂದು ವೀರಾವೇಶದಿಂದ ಹೇಳ್ತಾನೆ ಗಣಪತಿ !...

**ತಿಂದು ತೇಗುವೆ ನಿನ್ನ ಸೈನ್ಯವ । ನೊಂದು ಬಿಡದೇ ಉಗ್ರ ರೂಪದಿ ।**
**ಸಂದ ಮೋದಕವೆಂದು ಭಾವಿಪೆ ನಿನ್ನನವರೆಲ್ಲಾ ॥**
**ತಂದೆ ಶಿವನಾಣತಿಯ ಮಿಕ್ಕದೆ। ಕೊಂದು ನಿಮ್ಮೆಲ್ಲರನು ಗಾರಗಿ।**
**ಯಂದದಲಿ ಮುಕ್ಕುವೆನು ನೀ ತಿಳಿಯೆಂದು ಬೆಸಗೊಂಡಾ ॥೧೬॥**

ಶಬ್ದಾರ್ಥ :- ಸಂದ = ಅರ್ಪಿತವಾದ ; ಭಾವಿಪೆ = ಭಾವಿಸುವೆ; ಗಾರಗಿ = ಒಂದು ತಿನಿಸು; ಮುಕ್ಕು = ತಿನ್ನು. .

ಬಾವಾರ್ಥ :- 'ಎಲ್ಲೋ ರಾಕ್ಷಸಾ!... ನಾನು ಉಗ್ರರೂಪ ಧರಿಸಿ ನಿನ್ನನ್ನೂ, ನಿನ್ನ ಸಕಲ ಸೈನ್ಯವನ್ನೂ ಒಂದೂ ಬಿಡದಂತೆ ತಿಂದು ತೇಗಬಲ್ಲೆ!... ನಿಮ್ಮನ್ನೆಲ್ಲ ಗಾರಗಿಗಳೆಂದು ಭಾವಿಸಿ ಗಬಗಬನೇ ಮುಕ್ಕಿ ಬಿಟ್ಟೇನು ಜೋಕೆ'' ಎಂದು ಆ ರಾಕ್ಷಸನಾದ ಉಲ್ಕಾಮುಖನಿಗೆ ಎಚ್ಚರಿಕೆ ನೀಡ್ತಾ ಇದ್ದಾನೆ ಮಹತೋ ಮಹಿಮನಾದ ಆ ಗಣಪತಿ !...

ಗಣಪನಾ ನುಡಿಗೇಳಿ ರಕ್ಕಸ । ಕೆಣಕಿ ಕೆಂಗಿಡಿ ಕಾರಿ ಧಪಧಪ ।
ಹಣೆದನ್ನೈ ಪದದಿಂದ ಭೂಮಿಯ ಬಿರುಕು ಬಿಡುವಂತೇ ॥
ಕಣೆಗಳಂ ಜೋಡಿಸುತ ಧನುವನು । ಮಣಿಸಿ ಮಂತ್ರಾಸ್ತ್ರಗಳನೆಸೆಯಲು ।
ಗಣಪ ರಥದಿಂದುರುಳಿ ಬಿದ್ದನು ಅಕ್ಷಗಳು ಮುರಿದೂ ॥೧೭॥

ಖಲರು ಖಲಖಲ ನಕ್ಕು ಬಿಟ್ಟರು । ಬಲವಗೆಡುತಲಿ ಸಕಳ ದಿವಿಜರು ।
ಎಲವೊ ಏನಾಯ್ತೆಂದು ಚಿಂತಿಸಿ ಮ್ಲಾನಗೊಂಡಿರಲೂ ॥
ಬಲದೊಳೆದ್ದನು ಸುಮುಖ ಭೂನಭ ।
ಗಳಿಗೆ ಏಕಾಗಿಸುವ ರೂಪವ । ತಳೆದು ಇಕ್ಕರಿಸಿದ ಕುಠಾರದಿ ಉಲ್ಕೆ ಮೊಗದವನಾ ॥೧೮॥

ಒಡೆದು ತಲೆ ಹೋಳಾಗಿ ಚಿಲುಮೆಯು । ಸಿಡಿಯಿತ್ತೈ ಸರ್ವತ್ರ ನೆತ್ತರು ।
ಉಡುಗಿ ಭೂಮಿಗೆ ಕುಸಿದ ಉಲ್ಕಾಮುಖನು ಶವವಾಗೀ ॥
ಮೃಡ ಸುತನ ತ್ರೈವಿಕ್ರಮಾಕೃತಿ । ಒಡನೆ ನೋಡುತೆ ಬೆಚ್ಚಿ ಅಸುರರು।
ಉಡಿದ ಧೈರ್ಯದಲೋಡ ತೊಡಗಿದರಯ್ಯ ದಿಸೆ ದಿಸೆಗೇ ।೧೯॥

ಜಡಿದರ್ರೈ ಹಿಡಿಹಿಡಿದು ಕಾಲ್ಗಳ । ಕಡಿದು ತಿಪ್ಪೆಯನೊಟ್ಟಿ ದಿವಿಜರ ।
ಪಡೆಯು ತಾ ನಲಿದಿತ್ತು ಜಯಜಯವೆನುತ ವಿಕಟನಿಗೆ ॥
ಕಡಿದ ರುಂಡಗಳೊಡೆದ ಬುರುಡೆಯ। ಉಡಿದ ಕೈ ಕಾಲ್ ಮಡಿದ ಹಯ ಕರಿ ।
ಒಡನೆ ಓಡುತ ಹೊರಟವ್ವೈ ನೂರಾನು ನದಿಯಾಗೀ।೨೦॥

ಶಬ್ದಾರ್ಥ :- ಕನಲಿ = ರೊಚ್ಚಿಗೆದ್ದು (ನೋವಾಗಿ) ಕೆಂಗಿಡಿ = ಬೆಂಕಿಯಕಿಡಿ; ಹಣೆ = ಅಪ್ಪಳಿಸು; ಪದದಿಂದ = ಕಾಲುಗಳಿಂದ; ಕಣೆ = ಬಾಣ; ಧನು = ಬಿಲ್ಲು; ಮಂತ್ರಾಸ್ತ್ರ = ಮಂತ್ರಪೂರಿತವಾದ ಬಾಣ; ಅಕ್ಷಗಳು = ಅಚ್ಚುಗಳು; ಖಲ = ದುಷ್ಟ ಬಲವಗೆಡುತಲಿ = ಭೀತಿಹೊಂದಿ ; ದಿವಿಜರು = ದೇವತಗಳು; ಮ್ಲಾನಗೊಳ್ಳು = ಚಿಂತಿತರಾಗು; ಸುಮುಖ = ಗಣಪತಿ; ಭೂ ನಭಗಳಿಗೆ = ಭೂಮ್ಯಾಕಾಶಗಳಿಗೆ ; ತಳೆದು = ತಾಳಿ ; ಇಕ್ಕರಿಸಿದ = ಬಲವಾಗಿಪೆಟ್ಟು ಕೊಟ್ಟ; ಕುಠಾರ = ಕೊಡಲಿ; ಉಲ್ಕೆಮೊಗದವ = ಉಲ್ಕಾಮುಖ; ಚಿಲುಮೆ = ಕಾರಂಜಿ; ಸರ್ವತ್ರ = ಎಲ್ಲೆಡೆಯಲ್ಲಿಯೂ; ಉಡುಗಿ = ಸೋತು; ಶವವಾಗಿ = ಜೀವಕಳೆದುಕೊಂಡು; ಮೃಡಸುತ = ಗಣಪತಿ; ತ್ರೈವಿಕ್ರಮಾಕೃತಿ = ವಿರಾಟ ಸ್ವರೂಪ; ಪಡೆ = ಸೈನ್ಯ; ನಲಿ = ಸಂತೋಷಪಡು; ವಿಕಟ = ಗಣಪತಿ; ಬುರುಡೆ = ತಲೆಡೌಗಿ; ಉಡಿದ = ಕತ್ತರಿಸಿದ; ಮಡಿದ = ಸತ್ತ; ಹಯ = ಕುದುರೆ; ಕರಿ = ಆನೆ; ಒಡನೆ = ಕೂಡಲೆ.

ಭಾವಾರ್ಥ :- ಗಣಪತಿಯ ಅಂಥ ವಿರೋಚಿತ ಶಬ್ದಗಳನ್ನು ಕೇಳಿ, ರಾಕ್ಷಸ ಸೇನಾಪತಿಯಾದ ಉಲ್ಕಾಮುಖನಿಗೆ ಭಯಂಕರವಾದ ಸಿಟ್ಟು ಪ್ರಾಪ್ತವಾಯಿತು. ಆತನು ಕಣ್ಣಿನಿಂದ ಕಿಡಿಗಳನ್ನು ಕಾರುತ್ತ ಭೂಮಿಯು ಬಿರಿಯುವಂತೆ ನೆಲಕ್ಕೆ ಕಾಲುಗಳನ್ನಪ್ಪಳಿಸಿದನು. ಆತನು ತನ್ನ ಘೋರವಾದ ಧನುಸ್ಸನ್ನೆತ್ತಿಕೊಂಡು, ಅಮೋಘವಾದ ಶಕ್ತಿಯಿಂದ ಧನುಸ್ಸಿಗೆ ಮಂತ್ರಾಸ್ತ್ರಗಳನ್ನು ಹೂಡಿ, ಬಲಪೂರ್ಣವಾಗಿ ಎಳೆದು ಮಂತ್ರಾಸ್ತ್ರಗಳನ್ನು ಹೊಡೆದಾಕ್ಷಣವೇ ಗಣಪತಿಯು

ಕುಳಿತಿದ್ದಂಥಾ ರಥದ ಅಚ್ಚುಗಳು ಮುರಿದು ನುಚ್ಚು ನೂರಾದವು. ರಥದಲ್ಲಿ ಕುಳಿತಿದ್ದ ಗಣಪತಿಯು ಜೋಲಿ ತಪ್ಪಿ ನೆಲಕ್ಕೆ ಬಿದ್ದು ಬಿಡ್ತಾನೆ. ಆಗ ನೆರದ ರಾಕ್ಷಸ, ಸಮೂಹವೆಲ್ಲವೂ ''ಖೊಳ್ಳ'' ಅಂತಾ ನಕ್ಕುಬಿಡ್ತಾರೆ. ದೇವತೆಗಳೆಲ್ಲ ಗಾಬರಿ ಆಗ್ತಾರೆ'' ಇದೇನಿದು? ''ಶಿವ ಸುತನಾದ ಗಣಪತಿಗೆ ಈ ರೀತಿ ಅವಮಾನ ವಾಗುವದುಂಟೇ?''. ಎಂದು ಅವರೆಲ್ಲರೂ ಚಿಂತಾತುರರಾಗಿ ಯೋಚಿಸುತ್ತಿರುವಷ್ಟರಲ್ಲಿಯೇ ಗಣಪತಿಯು ಅಮೋಘ ಶಕ್ತಿಯನ್ನು ಹೊಂದಿದವನಾಗಿ ಉಗ್ರರೂಪನಾಗಿ, ಭೂಮಿಗೂ ಆಕಾಶಕ್ಕೂ ಏಕಾಕಾರವಾಗಿರುವಂಥ ವಿರಾಟ್ ಸ್ವರೂಪವನ್ನು ಧರಿಸಿ, ಆ ರಾಕ್ಷಸನಾದ ಉಲ್ಕಾಮುಖನು ಕುಳಿತಿದ್ದ ರಥಕ್ಕೆ ತನ್ನ ಬಲಾಢ್ಯವಾದ ಕೊಡಲಿಯಿಂದ ಇಕ್ಕರಿಸಿಬಿಡ್ತಾ ಇದ್ದಾನೆ. ಆಗ ಉಲ್ಕಾ ಮುಖನ ರಥವೆಲ್ಲಾ ನುಚ್ಚುನೂರಾಗಿ ಹೋಗ್ತಾ ಇದೆ. ಉಲ್ಕಾಮುಖನ ತಲೆ ಒಡೆದು ಹೋಳುಹೋಳುಗಳಾಗಿ, ಎಲ್ಲ ನಿಟ್ಟನಲ್ಲಿಯೂ ಕಾರಂಜಿಯಂತೆ ರಕ್ತದ ಓಕುಳಿ ಸಿಡೀತಾ ಇದೆ. ಸ್ವಲ್ಪೇ ಸಮಯದಲ್ಲಿ ರಕ್ತ ಸ್ರಾವದಿಂದ ಬಲಕಳೆದುಕೊಂಡ ಉಲ್ಕಾಮುಖನು, ಕುಸಿದು ನೆಲಕ್ಕೆ ಬೀಳ್ತಾನೆ. ಹಾಗೂ ಅವನ ಪ್ರಾಣ ಪಕ್ಷಿ ಹಾರಿ ಹೋಗ್ತಾ ಇದೆ.

ಗಣಪತಿಯ ಆ ವಿರಾಟ್ ಸ್ವರೂಪವನ್ನು ಕಂಡು ಬೆಚ್ಚಿದಂಥಾ ರಾಕ್ಷಸ ಸೇನಾನಿಗಳು, ದಾರಿ ಸಿಕ್ಕ ಕಡೆಗೆ ಓಡಿ ಹೋಗುವ ಪ್ರಯತ್ನ ಮಾಡ್ತಾರೆ. ಆದರೆ ದೇವ ಸೈನಿಕರು ಅವರನ್ನು ಸುಮ್ಮನೇ ಬಿಡೋದಿಲ್ಲಾ ಅವರನ್ನು ಆಯುಧ ಸಮೇತರಾಗಿ ಬೆಂಬತ್ತಿ ಹೋಗಿ, ಅವರ ಕೈ-ಕಾಲು,ರುಂಡ, ಮುಂಡಗಳನ್ನೆಲ್ಲಾ ಕಡಿಕಡಿದು, ತಿಪ್ಪೆಯಂತೆ ರಾಶಿರಾಶಿಯಾಗಿ ಮಾಡಿ ಹಾಕಿ ಬಿಡ್ತಾರೆ, ದೇವ ಸೈನಿಕರು ಉನ್ಮಾದದಿಂದ ಗಣಪತಿಗೆ ಜೈ ಜೈಕಾರ ಮಾಡ್ತಾಇದ್ದಾರೆ.

ಆ ರಣಭೂಮಿಯಲ್ಲಿ ಕಡಿದು ಬಿದ್ದ ರುಂಡಗಳೂ, ಒಡೆದ ತಲೆ ಬುರುಡೆಗಳೂ, ಮುರಿದು ಬಿದ್ದ ಕೈ-ಕಾಲುಗಳೂ, ಸತ್ತು ಬಿದ್ದಂಥ ಆನೆ, ಕುದುರೆ, ರಥಾದಿಗಳು, ರಕ್ತದ ನದಿಗಳಲ್ಲಿ ತೇಲುತ್ತ ನೂರಾರು ಪ್ರವಾಹಗಳಾಗಿ ತುಂಗಾ ನದಿಯತ್ತ ಸಾಗುತ್ತಿವೆ.

**ವಿಶ್ವತೋ ಮುಖ ವಿಶ್ವ ಬಾಹುವು । ವಿಶ್ವನಯನ ವಿಲಕ್ಷಣಾಕೃತಿ ।**
**ವಿಶ್ವವೇ ತಾನಾಗಿ ನಿಂದ ವಿರಾಟ ರೂಪವನೂ ॥**
**ಅಶ್ವಗಜರಥ ವೇರ್ದ ಸುಮನಸ। ವಿಶ್ವ ವ್ಯಾಪಿಸಿ ನಿಂದ ಕಾಲ್ದಳ ।**
**ವಿಶ್ವರೂಪೀ ಗಣಪತಿಂಗೆರಗಿದರು ಭಕುತಿಯಲೀ ॥ ೨೧॥**

ಶಬ್ದಾರ್ಥ :- ವಿನಾಯಕ = ಗಣಪತಿ; ರಕ್ಷಕ = ರಕ್ಷಣೆ ಮಾಡುವವ; ಇಬ್ಬದಿ = ೨ಕಡೆ; ಎರಗಿ = ಹೊಂದಿಕೊಂಡು ;
ಮರಳುಗಳು = ದೆವ್ವಗಳು; ಸಂಭ್ರಮದಿ = ಸಂಭ್ರಮದಿಂದ.

ಭಾವಾರ್ಥ :- ದೇವತೆಗಳು ಗಣಪತಿಗೆ ಜಯಜಯಕಾರ ಮಾಡುತ್ತ ಆಕಾಶದಿಂದ ಹೂವಿನ ಮಳೆ ಗರೆದರು. ಶ್ರೇಷ್ಠನಾದ ವಿನಾಯಕನೇ ನಮ್ಮ ರಕ್ಷಕನೆಂದು ಘೋಷಿಸಿದರು, ರಕ್ತಗಳಿಂದ ತುಂಬಿ ಹರಿಯುತ್ತಿರುವ ನದಿಗಳ ಇಬ್ಬದಿಯಲ್ಲಿ ಲಕ್ಷೋಪಲಕ್ಷ ಸಂಖ್ಯೆಯ ದೆವ್ವಗಳು ಸಂಭ್ರಮದಿಂದ ಹಬ್ಬವನ್ನಾಚರಿಸಿದವು.

**ಸುರರು ಜಯಜಯಕಾರ ಗೈಯ್ಯುತ । ಭರದಿ ಸುರಿದರು ಹೂವಿನಾ ಮಳೆ।**
**ವರ ವಿನಾಯಕ ನಮ್ಮ ರಕ್ಷಕನೆನುತ ಕೊಂಡಾಡೀ ॥**
**ಹರಿವ ರಕ್ತದ ನದಿಯ ಇಬ್ಬದಿ।ಗೊರಗಿ ಲಕ್ಷಾವಧಿಯ ಸಂಖ್ಯೆಯ।**
**ಮರಳುಗಳು ಮಾಡಿದವು ಹಬ್ಬವ ಭವ್ಯ ಸಂಭ್ರಮದೀ ॥೨೨॥**

ಶಬ್ದಾರ್ಥ :- ಬಾಹು = ತೋಳುಗಳು; ನಯನ = ಕಣ್ಣು ; ವಿರಾಟ = ಭವ್ಯ ; ಸುಮನಸ = ದೇವತೆ

ಭಾವಾರ್ಥ :- ಅಸಂಖ್ಯಾತವಾದ ಮುಖಗಳಿಂದಲೂ, ಅಸಂಖ್ಯಾತ ಭುಜಗಳಿಂದಲೂ, ಅಸಂಖ್ಯಾತ ನೇತ್ರ, ಮೊದಲಾದ ಇಂದ್ರಿಯಗಳಿಂದಲೂ, ಶೋಭಿಸುತ್ತ ವಿಲಕ್ಷಣಾಕೃತಿ ತಳೆದು ನಿಂತ ಗಣಪತಿಯ ವಿಶ್ವರೂಪವನ್ನು ನೋಡಿ, ಗಜ, ಕುದುರೆ, ರಥಗಳನ್ನೇರಿದ್ದ ದೇವತೆಗಳು, ವಿಶ್ವವನ್ನೇವ್ಯಾಪಿಸಿ ನಿಂತ ದೇವ ಸೈನಿಕರೂ, ಆ ವಿಶ್ವರೂಪೀ ಗಣಪತಿಗೆ ಬಹು ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಸಲ್ಲಿಸಿ ಕೃತಾರ್ಥರಾಗ್ತಾರೆ.

**ಇತಿ ಸಾಹಿತ್ಯರತ್ನಾಕರ ಶ್ರೀ ನಿಂಗಭಟ್. ಎಸ್. ಜೋಶಿ ವಿರಚಿತ, ವ್ಯಾಖ್ಯಾನಸಾವಾರ್ತಾಂಡ**
**ಭೈರವ ಪುರಾಣದೊಳ್ ಉಲ್ಕಾಮುಖ ವಧೋ ನಾಮಕ ಪಂಚ ದಶೋಧ್ಯಾಯ ॥**
**ಅಂತೂ ಅಧ್ಯಾಯ ೧೫ ಕ್ಕಂ, ಪದ ೨೨ಕ್ಕಂ, ಒಟ್ಟು ಪದ ೨೩೪ ಕ್ಕಂ ಮಂಗಲ ಮಸ್ತು !.....**

ಏಳುಕೋಟಿಗ! ಏಳುಕೋಟಿಗ!! ಏಳುಕೋಟಿಗೋ !!!... ಸಾಂಗಬಲೋ!

******

# ಅಧ್ಯಾಯ ೧೬ ಶೋಡಶೋಧ್ಯಾಯಃ ॥
## ಖಡ್ಗಲೋಮ ಸಂಹಾರ

ಸೂಚನೆ:-

**ಕಂಡು ಉಲ್ಕಾಮುಖನ ಮರಣವ । ಕೆಂಡವಾದನು ಅಸಿಯಲೋಮ ಪ್ರ ।**
**ಚಂಡತನದಿಂ ಕಾದಿ ನಂದೀಶನಿಗೆ ಬಲಿಯಾದಾ॥**

ಸೂಚನೆಯ ಅರ್ಥ :- "ಪ್ರಚಂಡ ದೈತ್ಯ ಸೇನಾಪತಿಯಾದ ಉಲ್ಕಾಮುಖನು ಗಣಪತಿಯಿಂದ ಮರಣಹೊಂದಿದ ವಿಷಯ ತಿಳಿದು, ಆಸಿಲೋಮನೆಂಬ ಇನ್ನೊಬ್ಬ ಸೇನಾಪತಿಯು ಕೆರಳಿ ಕೆಂಡದಂತಾದನು. ಮತ್ತೂ ಪ್ರಚಂಡ ಪರಾಕ್ರಮದಿಂದ ರಣಭೂಮಿಗೆ ನುಗ್ಗಿ ಹೋರಾಡ ಡೊಡಗಿದನು. ಆದರೆ ಶಿವನ ಅನುಗ್ರಹವನ್ನು ಪಡೆದ ಜಯನಂದಿಯೊಂದಿಗೆ ಹೋರಾಟ ಮಾಡುವ ಸಮಯದಲ್ಲಿ, ಆತನು ನಂದೀಶನ ಪ್ರಚಂಡ ಆಯುಧಕ್ಕೆ ಬಲಿ ಯಾದನು". ಎಂಬುದನ್ನು ಸೂಚಿಸುತ್ತ, ಕವಿಯು ಮುಂದಿನ ಕಥಾ ಭಾಗವನ್ನು ಈ ರೀತಿಯಾಗಿ ವರ್ಣಿಸಿ ಹೇಳ್ತಾ ಇದ್ದಾನೆ. ಅದೇನೆಂದರೆ.

**ನಿಂತು ನೋಡಿದನಾಗ ರಣದಲಿ । ಕಂತುಕದ ವೋಲ್ ಶಿರವು ಪುಟಿದುದ।**
**ತಂತುರಿಪ ಬಿಸಿ ರಕುತದೋಕುಳಿ ಶಿರದ ಭಾಗದಿಲಿ ॥**
**ಬಂತು ಮನದಲಿ ತೀವ್ರ ಕೋಪವ । ಸಂತ ದೋಕುಳಿಯಂತೆ ಪುಟಿದುದು ।**
**ಅಂತವಿಲ್ಲದ ಶೌರ್ಯ ಕದನಕೆ ಕ್ರೂರ ಭಾವದಲಿ ॥೧॥**

ಶಬ್ದಾರ್ಥ :- ರಣದಲಿ = ರಣಭೂಮಿಯಲ್ಲಿ; ಕಂತುಕ = ಚೆಂಡು; ತುಂತುರಿಸ = ಸಿಡಿದ; ವಸಂತದೋಕುಳಿ = ವಸಂತಋತು ಕಾಲದಲ್ಲಿ ಓಕುಳಿಯಾಡಿದಂತೆ;

ಭಾವಾರ್ಥ :- ವಿರಾಟ್ ಸ್ವರೂಪಿಯಾದ ಗಣಪತಿಯ ಕೊಡಲಿಯ ಪೆಟ್ಟಿನಿಂದ ಉಲ್ಕಾಮುಖನ ರುಂಡವು ಮುಂಡದಿಂದ ಕಡೆಗಾಗಿ, ಚೆಂಡಿನಂತೆ ಹಾರಿ ಹೋದದ್ದನ್ನೂ, ಉಲ್ಕಾಮುಖನ ಮುಂಡದಿಂದ ಚಿಲುಮೆಯಂತೆ ಬಿಸಿರಕ್ತವು ವಸಂತ ಕಾಲದಲ್ಲಾಡುವ ಓಕುಳಿಯಂತೆ ಸಿಡಿದದ್ದನ್ನೂ, ಪ್ರತ್ಯಕ್ಷವಾಗಿ ಕಂಡಂಥ ಅಸಿಲೋಮನೆಂಬ ಮಲ್ಲ ಚಕ್ರವರ್ತಿಯ ಇನ್ನೊಬ್ಬ ವೀರ ಸೇನಾಪತಿಯು, ಪ್ರತ್ಯಕ್ಷ ನೋಡ್ತಾ ಇದ್ದಾನೆ. ಸ್ವಭಾವತಃ ಕ್ರೂರನಾದ ಅವನಲ್ಲಿ "ಯುದ್ಧ ಮಾಡಿ ಗಣಪತಿಯನ್ನು ಗೆಲ್ಲಲೇ ಬೇಕುನ" ಎಂಬಂಥಾ ಛಲವು ಒಡಮೂಡಿ ನಿಲ್ತಾ ಇದೆ. ಆಗ ಆತ ಏನು ಮಾಡಿದಾ ಅಂದ್ರೆ.......

ಹುರಿಯಗೊಳಿಸುತ ಮೀಸೆ ಕ್ರೋಧದಿ। ಇರಿವ ಕಣ್ಣೋಟದಲಿ ಸಂಜ್ಞಿಸೆ ।
ಭರದಿ ಓಡೋಡುತ್ತ ಬೆಂಬಳಿಸಿದವು ಚತುರಬಲಾ ॥
ಹೊರಟವಾತನ ಸುತ್ತ ಮುತ್ತಲು । ಕರಿಯು ತುರಗಾದಿಗಳ ಸಂಖೆಯ।
ವರ ರಥಂಗಳು ಛತ್ರ ಚಾಮರ ವಾದ್ಯ ಮೇಳಗಳೂ ॥ ೨॥

ನೂರು ರವಿಗಳ ಕಾಂತಿಯಿಂದಲಿ । ಕಾರ ಮಿಂಚಿನ ರಾಶಿಯಂದದಿ ।
ತೋರಿ ಹೊಳೆಯುತಲಿತ್ತು ಖಡ್ಗದ ಧಾರೆ ಕರದೊಳಗೆ ॥
ಮಾರಿ ಗೌತಣವಾಯ್ತು ಮರಳಿದು । ಶೂರ ರಕ್ಕಸರಾಳು ಕವಿದುದು ।
ವೀರ ಸೇನಾಪತಿಯ ಮನಸಿಗೆ ಹರುಷ ಸೂಚಿಸುತೇ ॥೩॥

ಶಬ್ದಾರ್ಥ :- ಇರಿವ = ಕೊರೆಯುವಂಥ ; ಸಂಜ್ಞಿಸೆ = ಸನ್ನೆಮಾಡಲು ; ಬೆಂಬಳಿಸು = ಹಿಂಬಾಲಿಸು; ಚತುರಬಲ = ಚತುರಂಗಬಲ; ಅಸಂಖೆಯ = ಲೆಕ್ಕವಿಲ್ಲದ; ವರ = ಶ್ರೇಷ್ಠ; ಕಾಂತಿ = ಪ್ರಕಾಶ; ಕಾರ ಮಿಂಚು = ಕೋಲ್ಮಿಂಚು; ರಕ್ಕಸರಾಳು = ರಾಕ್ಷಸಸೇನೆ; ಧಾರೆ = ಅಲಗು; ಮಾರಿಗೌತಣವಾಯ್ತು = ರಣಹೋಮಕ್ಕೆ ನಾಂದಿಯಾಯ್ತು.

ಭಾವಾರ್ಥ :- ಖಡ್ಗಲೋಮ (ಅಸಿಲೋಮ) ನೆಂಬ ಆ ದೈತ್ಯ ಸೇನಾಪತಿಯು ಸಿಟ್ಟಿನಿಂದ ಮೀಸೆ ಹುರಿಗೊಳಿಸಿದನು. ಕೊರೆಯುವ ಕಣ್ಣೋಟದಿಂದ ಅವನು ಸಂಜ್ಞೆ ಮಾಡಿದೊಡನೆಯೇ, ಆತನ ವಶದಲ್ಲಿದ್ದ ಚತುರಂಗ ಬಲವೆಲ್ಲವೂ ಭರದಿಂದ ಆತನನ್ನು ಹಿಂಬಾಲಿಸಿ ಬಂದವು. ಅಸಂಖ್ಯಾತ ಆನೆಗಳು, ಕುದುರೆಗಳು, ತೇಜಸ್ವಿಯಾದ ರಥಗಳೂ, ಛತ್ರ,,ಚಾಮರ, ವಾದ್ಯ ಮೇಳಗಳನ್ನು ಹೊಂದಿದ ಅಸಂಖ್ಯಾತ ಕಾಲಾಳುಗಳು, ಆತನನ್ನು ಸುತ್ತುವರಿದು ಸಮರಾಂಗಣ ದತ್ತ ಹೆಜ್ಜೆ ಹಾಕತೊಡಗಿದವು. ಆ ದೈತ್ಯ ಸೇನಾಪತಿಯ ಹಸ್ತದೊಳಗಿದ್ದ ಖಡ್ಗವು, ನೂರು ಸೂರ್ಯರ ಪ್ರಕಾಶವನ್ನು ಕುಗ್ಗಿಸುವಂಥಾದ್ದಾಗಿಯೂ, ಕೋಲ್ಮಿಂಚಿನಂತೆ ಕಾಂತಿಮಯವಾಗಿಯೂ ಇತ್ತು. ಶೂರ ಸೇನಾನಿ ಉಲ್ಕಾಮುಖನ ಮರಣ ದಿಂದುಟಾದ ಭೀತಿಯನ್ನು, ಅಸಿಲೋಮನೆಂಬ ರಾಕ್ಷಸನು ಸೇನಾಪತಿಯಾಗಿ ನಿವಾರಣೆ ಮಾಡಿದನು. ದೈತ್ಯ ಸೈನಿಕರಲ್ಲಿ ಹೊಸ ಹುರುಪು ಬಂದಂತಾಯ್ತು. ಅವರೆಲ್ಲರೂ ಕಿಕ್ಕಿರಿದು ಕೂಡಿಕೊಂಡು ಮತ್ತೊಮ್ಮೆ ಮಾರಿಗೌತಣ ಕೊಡಲು, ರಣಾಂಗಣದತ್ತ ಕರಾಳ ಛಾಯೆಯಂತೆ ಮುತ್ತತೊಡಗಿದರು. ಸೈನಿಕರ ಈ ಹುರುಪನ್ನು ಕಂಡು, ಖಡ್ಗಲೋಮನಿಗೆ ಆನಂದವೋ ಆನಂದ!.. ಆತನು ತನ್ನ ಚತುರಂಗಬಲವನ್ನೆಲ್ಲ ಪ್ರೋತ್ಸಾಹ ದಾಯಕ ವಾಣಿಯಿಂದ ಹುರಿಗೊಳಿಸುತ್ತ ರಣಾಂಗಣಕ್ಕೆ ಬಂದು ನಿಲ್ತಾ ಇದ್ದಾನೆ.

**ಬರುವ ರಕ್ಕಸ ದಳವ ಕಾಣುತೆ । ಪರಶಿವನು ತಾ ನಗುತೆ ನಂದಿಯ ।**
**ಕರೆದು ಕಳುಹಿಸು ಕಾಲನರಮನೆಗಖಿಳ ದಾನವರ ॥**
**ಹರಿದುದಾಯುಷವಿವರ ತೀವ್ರದಿ। ಕರುಣೆದೋರದೆ ದೈತ್ಯರಸುಗಳ ।**
**ತರಿದು ಬಾ ಹೋಗೆಂದು ಶಂಕರನಾಗ ನೇಮಿಸಿದಾ ।೫॥**

**ಶೂಲಿ ತನ್ನಯ ಶಕ್ತಿ ನೀಡುತೆ । ಪಾಲಿಸುವ ಸಾರೂಪ್ಯ ಪದವಿಯ ।**
**ಮೇಳವಿಸಿ ಜಯನಂದಿಯನು ಹರಸಿದನು ಕಾಳಗಕೆ ॥**
**ಏಳು ಕೋಟಿ ದಿವಿಜಗಣಗಳ । ಕಾಲರಂದದ ಭೂತ ಗಣಗಳ ।**
**ಕಾಳಗಕೆ ಬಲವಾಗಿ ಕಳುಹಿದ ಶಿವನು ನಂದಿಂಗೆ ।೬॥**

ಏಳಿ ಹರಹರ ಎನುತ ಗರ್ಜಿಸಿ। ಸಾಲು ಸಾಲಲಿ ರಥಗಳೋಡಿಸಿ ।
ವೇಳೆ ಗಳೆಯದೆ ಬಂದರಾಗಳೆ ದೈತ್ಯ ಸಮ್ಮುಖಕೆ ॥
ಕಾಲ ಹರ ವರ ರೂಪ ಕಾಣುತೆ । ಕಾಲಪಾಶಕೆ ಬಿದ್ದ ರಕ್ಕಸ ।
ಗೇಲಿ ಗೈದನು ಶಿವನೆ ನೀನೇ ಬಂದೆಯಾ ಎಂದೂ ॥೬॥

ಎಲವೋ ಮೂಢನೆ ಕೇಳು ಶಿವಪದ । ನಳಿನ ಸೇವಕ ನಂದಿ ನಾನಿಹೆ ।
ಕೊಲುವ ದೋಸುಗ ಬಂದ ನಿಜಯಮರಾಯ ನಾನಹುದೂ॥
ಶುಲಭವಾಗ್ವುದು ಶಿವನ ಭಕುತಗೆ । ಗೆಲುವು ಕಲಹವ ಬಿಟ್ಟು ಶಂಕರ।
ಶುಲಭ ನಾಮವ ಜಪಿಸಿ ದುರಹಂಕಾರ ಕಳೆಯೆಂದಾ ॥೭॥

ಜೀವವೆಂಬುದು ಮಾಯೆ ಚೇತನ । ಜೀವನಾತನೆ ನಿಜದಿ ಶಂಕರ ।
ಹೇವ ಬೇಡಲೊ ಮೂರ್ಖ ಶರಣಾಗೆಲವೊ ಶಿವಪದಕೆ ॥
ಕಾವ ಕರುಣೆಯ ತೋರ್ಪ ಸುರಸಂ। ಭಾವನೆಯ ಕೈಗೊಂಬ ಶಂಭುವ ।
ಪಾವನಾತ್ಮಕ ಶಿವನ ನಾಮವ ಭಜಿಸು ನೀನೆಂದಾ ॥೮॥

ಶಬ್ದಾರ್ಥ :- ಕಾಲನರಮನೆ = ಯಮಪಟ್ಟಣ; ಅಖಿಲದಾನವರ = ಎಲ್ಲ ರಕ್ಕಸರನ್ನೂ; ಅಸು = ಪ್ರಾಣ; ಸಾರೂಪ್ಯಪದವಿ = ಶಿವನೇ ತಾನಾಗುವಂಥ ಪದವಿ; ಮೇಳವಿಸಿ = ಹೊಂದಿಸಿ; ಕಾಲ ಹರ = ಶಿವ; ಕಾಲಪಾಶ = ಯಮನ ಬಲೆ; ಗೇಲಿ ಗೈ = ಅಪಹಾಸ್ಯ ಮಾಡು; ನಳಿನ = ಕಮಲ; ಚೇತನ = ಚೈತನ್ಯ; ಹೇವ = ಬಲಪರೀಕ್ಷೆ; ಕಾವ = ಕಾಯುವ; ಸುರಸಂಭಾವನೆಯ ಕೈಕೊಂಬ = ದೇವತೆಗಳಿಂದ ಪೂಜ್ಯನಾದ; ಶಂಭು = ಶಿವ; ಪಾವನಾತ್ಮಕ = ಸುಭಕರವಾದ; ಭಜಿಸು = ಆರಾಧಿಸು.

**ಭಾವಾರ್ಥ :-** ಆಸಿಲೋಮ (ಖಡ್ಗಲೋಮ) ನು ಈ ಪ್ರಕಾರವಾಗಿ ಅರ್ಭಟಿಸುತ್ತ ರಣಾಂಗಣಕ್ಕೆ ಬರುತ್ತಿರುವದನ್ನು ಗಮನಿಸಿದ ಶಿವನು ಕುಲುಕುಲು ನಗ್ತಾನೆ!... ಮತ್ತೂ ತನ್ನ ಗಣಗಳಲ್ಲಿ ಶ್ರೇಷ್ಠನಾದಂಥಾ ನಂದೀಶ್ವರನನ್ನು ಕರೆದು, ಈ ರೀತಿಯಾಗಿ ಅಪ್ಪಣೆ ಮಾಡ್ತಾನೆ ''ಎಲೋ ನಂದಿಶಾ!.... ಈಗ ನಮ್ಮ ಮೇಲೆ ದಂಡೆತ್ತಿ ಬರುತ್ತಿರುವಂಥ ಎಲ್ಲಾ ರಾಕ್ಷಸರ ಆಯುಷ್ಯವು ಮುಗಿದು ಹೋಗಿದೆ. ಆದ ಕಾರಣ ಖಡ್ಗಲೋಮ ಸಹಿತವಾಗಿ ಸಕಲ ದೈತ್ಯರನ್ನೂ ಯಮಪುರಿಗೆ ಕಳಿಸುವ ಆಲೋಚನೆ ಮಾಡು!... ಕುರುಣೆ ಕಕ್ಕುಲಾತಿಗಳಿಲ್ಲದೇ ಈ ಎಲ್ಲ ದೈತ್ಯಾಧಮರ ಶಿರಗಳನ್ನು ತರಿದು, ಅವರನ್ನು ಸಂಹರಿಸಿಬಾ!'' ಹೀಗೆಂದು ಅಪ್ಪಣೆ ಮಾಡಿ. ಪರಮಾತ್ಮನು ತನ್ನ ದಿವ್ಯವಾದ ಶಕ್ತಿ, ಹಾಗೂ ಸಾರೂಪ್ಯತೆಯ ಪದವಿಗಳನ್ನು ನೀಡಿ ಆಶೀರ್ವಾದ ಮಾಡ್ತಾ ಇದ್ದಾನೆ. ಆಗ ಜಯ ನಂದಿಯು ''ತಥಾಸ್ತು'' ಎಂದು ಭಕ್ತಿಯಿಂದ ನಮಸ್ಕಾರ ಮಾಡುತ್ತಿದ್ದಂತೆಯೇ ಶಿವನಲ್ಲಿಯ ಶಕ್ತಿ ಸಾರೂಪ್ಯತೆಗಳು, ಭಕ್ತನಾದ ನಂದಿಯಲ್ಲಿ ಪ್ರಕಟವಾಗ್ತಾ ಇವೆ. ಪಂಚ ಮುಖ, ದಶಬಾಹು, ತ್ರಿ ನೇತ್ರ, ಗಳಿಂದಲೂ, ಭಸ್ಮ, ರುದ್ರಾಕ್ಷಿ ಗಜ ಚರ್ಮಾಂಬರಗಳಿಂದಲೂ, ಅರ್ಧ ಚಂದ್ರಾಕೃತಿಯ ಕಿರೀಟದಿಂದಲೂ, ಪರಿಶೋಭಿಸುತ್ತಿರುವಂಥಾ ನಂದಿಯು ತಾನೇ ಶಿವನಾಗಿ ಕಂಗೊಳಿಸ್ತಾ ಇದ್ದಾನೆ. ಮತ್ತೂ ತನ್ನ ಸ್ವಾಮಿಯ ಅಪ್ಪಣೆಯನ್ನು ಪಾಲಿಸುವದಕ್ಕಾಗಿ ರಣ ಭೂಮಿಯತ್ತ ವೀರಾವೇಶದಿಂದ ಹೊರಡ್ತಾ ಇದ್ದಾನೆ. ವಾದ್ಯಮೇಳ. ಜಯ ಜಯ ಕಾರಗಳೊಂದಿಗೆ ಗಂಭೀರವಾಗಿ ಸಾಗಿರುವ ಜಯ ನಂದಿಗೆ ಬೆಂಬಲನಾಗುವದಕ್ಕಾಗಿ, ಶಿವನು ಸಕಲ ದೇವಗಣಗಳನ್ನೂ, ಕಾಲ ರುದ್ರರಂತಿರುವ ಏಳು ಕೋಟಿ ಭೂತಗಣಗಳನ್ನೂ, ಕಳಿಸಿ ಕೊಡ್ತಾ ಇದ್ದಾನೆ. ''ಹರ ಹರ ಮಹಾದೇವ'' ಎಂದು ವೀರಘೋಷಣೆ ಗೈಯ್ಯುತ್ತ ರಣಭೂಮಿಯತ್ತಾ ಸಾಗಿ ಬರುತ್ತಿರುವ ಅಪಾರವಾದ ದಂಡನ್ನು ಕಂಡು, ಸ್ವಭಾವತಃ ಶೂರನಾದ ಕುಂತಲೋಮನ ಭುಜಗಳು ಸ್ಪುರಣಗೊಳ್ತಾ ಇವೆ. ಶಿವನ ಸಾರೂಪ್ಯತೆಯನ್ನೇ ಪಡೆದ ನಂದಿಯು ಬೆಳ್ಳಿಯ ರಥದಲ್ಲಿ ಬರುತ್ತಿರುವದನ್ನು ಕಂಡಾಕ್ಷಣಕ್ಕೇ '' ಶಿವನೇ ನನ್ನೊಂದಿಗೆ ಯುದ್ಧ ಮಾಡಲು ರಣಭೂಮಿಗೆ ಬಂದಾ'' ಎಂದು ಭ್ರಮಿಸಿಕೊಳ್ತಾನೆ. ಮತ್ತೂ ''ಕಾಲನ ಬಲೆಯಲ್ಲಿಯೇ ಬಿದ್ದೆನೇನೋ'' ಎಂಬಂತೆ ಗಾಬರಿಗೊಂಡಿದ್ದರೂ, ಅದನ್ನು ತೋರಗೊಡದೇ, ಶಿವಸ್ವರೂಪಿಯಾದ ನಂದಿಯನ್ನು ಕುರಿತು, ''ಪರಮತ್ಮಾ! ಯುದ್ಧದಲ್ಲಿ ನನ್ನನ್ನು ಸೋಲಿಸುವದಕ್ಕಾಗಿ ಕೊನೆಗೂ ನೀನೇ ರಣ ಭೂಮಿಯ ವರೆಗೂ ನಡೆದು ಬರಬೇಕಾಯಿತಲ್ಲವೇ? ಶಹಬ್ಬಾಶ್!'' ಎಂದು ಗಹಗಹಿಸಿ ನಗುತ್ತ ತನ್ನ ಬೆನ್ನನ್ನು ತಾನೇ ಚಪ್ಪರಿಸಿಕೊಂಡು, ಅಪಹಾಸ್ಯ ಮಾಡ್ತಾನೆ, ಆಗ ಜಯನಂದಿ ಹೇಳ್ತಾನೇ! ಎಲೋ ಮೂಢಾ! ನೀನು ತಪ್ಪು ತಿಳಿದು ಕೊಂಡಿದ್ದಿ!... ನಾನು ಶಿವನಲ್ಲ; ಶಿವಸ್ವರೂಪವನ್ನು ಹೊಂದಿದ ಆತನ ಪಾದಕಮಲಗಳ ಸೇವಕನಾದ ನಂದೀಶ್ವರನಾಗಿದ್ದೇನೆ. ಆ ಪರಶಿವನ ಆನುಜ್ಞೆಯ ಮೇರೆಗೆ ನಿನ್ನನ್ನು ಕೊಲ್ಲುವದಕ್ಕಾಗಿ ಬಂದ ಪ್ರತ್ಯಕ್ಷ ಯಮರಾಜನೇ ನಾನೆಂದು ಭಾವಿಸಿಕೋ!... ಶಿವಭಕ್ತರಿಗೇ ಸಮರದಲ್ಲಿ ಜಯವೆಂಬುದು ಶತಸಿದ್ಧವಾದ ಮಾತಾಗಿದೆ. ಆದ ಕಾರಣ ಶಿವನೊಂದಿಗೆ ಕಲಹ ಮಾಡುವದನ್ನು ಪರಿತ್ಯಜಿಸಿ, ಆತನ ಪಾದ ಕಮಲಗಳಿಗೆ ಶರಣಾಗತನಾಗು!...ಯಾಕೆಂದರೆ ಈ ಜೀವವೆಂಬುದು ಮಾಯಾ ಸ್ವರೂಪದಿಂದುಂಟಾದ ಭ್ರಮೆಯಾಗಿದೆ. ಇದಕ್ಕೆ ನಿಜವಾಗಿ ಚೈತನ್ಯವಿತ್ತು ಉದ್ಧರಿಸಬೇಕಾದವನು (ಸ್ವರೂಪಜ್ಞಾನ ಮಾಡಿಕೊಡುವವನು)

ಆ ಪರಮಾತ್ಮನಾದ ಶಂಕರನೇ ಆಗಿದ್ದಾನೆ. ಆದ ಕಾರಣ ಎಲೋ ಮೂಢಾ! ಶಿವನೊಂದಿಗೆ ಯಾವ ಕಾಲಕ್ಕೂ ಬಲಪರೀಕ್ಷೆಗೆ ಅವಕಾಶ ಕೊಡಬೇಡಾ! ಆತನ ಪಾದಕಮಲಗಳಿಗೆ ಶರಣು ಹೋದದ್ದಾದರೆ, ನೀನೆಂಥ ತಪ್ಪು ಮಾಡಿದ್ದರೂ ಸಹಿತ, ಉದಾರ ಹೃದಯದ ಆ ನನ್ನ ಸ್ವಾಮಿ ನಿನ್ನನ್ನು ಕ್ಷಮಿಸಿ ಉದ್ಧಾರ ಮಾಡ್ತಾನೆ. ಸುರಪೂಜಿತನಾದ ಆ ಪರಮಾತ್ಮ, ಮಹಾದಯಾ ಸಾಗರನಾಗಿದ್ದಾನೆ. ಅದಕ್ಕಾಗಿ ಪರಮ ಪವಿತ್ರವಾದ ಶಿವನಾಮವನ್ನು ಆರಾಧಿಸಿ ಉದ್ಧಾರನಾಗೂ'' ಅಂತಾ ಜಯನಂದಿಯು ಆ ರಾಕ್ಷಸ ಸೇನಾಪತಿಯಾದ ಕುಂತಲೋಮನಿಗೆ ಉಪದೇಶ ಮಾಡ್ತಾನೆ.

ಪೇಳದಿರು ಮುಂದೊಂದು ಸಬುದವ । ತಾಳಲಾರೆನು ವೈರಿಸ್ತುತಿಯನು ।
ಖೂಳನೇ ಈ ಜಗಕೆ ಮಲ್ಲನೆ ಪ್ರಭುವರಾಗಿಹನು ॥
ಗಾಳಿ, ಬೆಳಕುಗಳೀವ ರವಿ ಶಶಿ । ವೇಳೆ ವೇಳೆಗೆ ಸುರಿವ ವರುಣನು ।
ಕಾಲ ನೈರುತ ಅಗ್ನಿ ಭೂಮ್ಯಾಕಾಶ ಮೊದಲಾಗೀ ॥ ೮॥

ಆಳಿನಂದದ್ಧಿ ಸೇವೆ ಸಲಿಸುತ। ಊಳಿಗವ ಗೈಯ್ಯುವರು ಅವನಲಿ।
ಮೇಲು ಚಕ್ರಾಧಿಪನ ಮರೆತನ್ಯರನು ಪೊಗಳುವದೇ ॥
ಗಾಳಿ ಗುದ್ದುವ ಮಾತ ನಿಲ್ಲಿಸು। ಹೇಳು ಮಲ್ಲನೆ ಮೇಲು ಎನ್ನುತ।
ತಾಳಿ ಹರುಷನ ನೀವನಾದೊರೆ ಸಕಳ ಸೌಭಾಗ್ಯ ।೯॥

ಕೂಳು ನೀರುಗಳಿರದೆ ಪಸಿವಲಿ । ಕಾಲ ಕೂಟವ ಮೆಂದು ಮನೆ ಮನೆ ।
ಸಾಲು ಭಿಕ್ಷೆಯ ಬೇಡ್ವ ಹರ ತಾನೇನು ಕೊಡಬಲ್ಲಾ॥
ಮೇಲು ವಸ್ತ್ರಗಳಿರದೆ ಗಜಜಿನ ವಾಲಿ ಸುತ್ತುತೆ ಪ್ರೇತ ಭಸ್ಮವ ।
ಲೀಲೆಯಿಂ ಬಳಿದವನ ಹುಚ್ಚನ ಬೇಡುವವ ರುಂಟೇ ।೧೦॥

ಎತ್ತ ಬೇಕತ್ತತ್ತ ಹರನನು । ಹೊತ್ತು ತಿರುಗುವ ಎತ್ತು ನೀನಿಹೆ ।
ಕತ್ತಿ ವಿದ್ಯೆಯ ಆಳ ತಿಳಿಯದು ಹೋಗು ಹಿಂದಿರುಗೀ ॥
ಕೃತ್ತಿವಾಸನ ಕಳಿಸು ಕದನಕೆ । ಹೊತ್ತು ಒಯ್ಯುವೆನವನ ಬಂಧಿಸಿ ।
ಸತ್ತ ಹುಲ್ಲನು ತಿಂದು ಸೆಣಸುವ ಪಶುವಿನೊಡನೇನೂ ॥೧೧॥

ಎಂದು ಹೀನಾ ಮಾನ ನುಡಿಯಲು । ಬಂದಿತ್ಯೆ ನಂದಿಂಗೆ ಕೋಪವು ।
ಸಂದ ಸರಿಬಲರೊಡನೆ ಸೌಮ್ಯದ ಮಾತು ಕಲಿಯೆಂದಾ॥
ಹಂದಿ ಜನ್ಮವ ಪಡೆವನಾತನು। ಮುಂದಿನಾ ಜನುಮದಲಿ ಸುಜನರ ।
ನಿಂದೆ ಗೈದವನೆಂದು ಸಾರಿದ ನೀತಿ ತಿಳಿಯಂದಾ ॥೧೨॥

ಓತ ಪ್ರೋತದಿ ಗೈದ ಬೋಧನೆ। ಸೋತು ಹೋಯಿತು ಖಲನ ಎದುರಲಿ।
ಆತು ನೀರೆರೆದಂತೆ ಘೋರ್ಪಾಷಾಣ ಮೂರ್ತಿಂಗೆ ॥
ಮಾತು ಬೇಡಿನ್ನೆಲವೊ ದೈತ್ಯನೆ । ಜೋತು ಬಿದ್ದಿಹ ಹೆದೆಯನೇರಿಸು ।
ಆತು ಬಂದಿದೆ ಮರಣ ನಿನಗದ ಬಿಡಿಸುವವರಾರು॥೧೩॥

ಮಣಿಸಿ ಧನು ಬೆವರಿಂದ ಸೂತ್ರವ । ತಣಿಸಿ ಕೋಲ್ಗಳ ಬೆಸಿಸಿ ಸಾಸಿರ ।
ಕಣೆಗಳಂ ಬಿಸುಟಿದನು ಕೋಲ್ಮಿಂಚೊಡೆದ ತೆರನಂತೆ ॥
ಕುಣಿಯಿತಾ ರಭಸಕ್ಕೆ ಧರಣಿಯು । ಧಣಣ ಎಂದುದು ಬಾನಿನಂಗಣ।
ಮಣಿದು ಜರಿದವು ಭುವಿಗೆ ತಾರೆಗಳೊಡೆದು ಪುಡಿಯಾಗಿ ॥೧೪॥

ಶಬ್ದಾರ್ಥ :- ಶಬುದ = ಶಬ್ದ; ಪ್ರಭುವರ = ಚಕ್ರವರ್ತಿ, (ಸಾಮ್ರಾಟ) ವರುಣ = ಮಳೆರಾಯ; ಊಳಿಗ = ಜೀತ; ಪಸಿವಲಿ = ಹಸಿವೆಯಿಂದ; ಮೆಂದು = ತಿಂದು; ಬೇಡ್ಪ = ಬೇಡುವ; ಗಜಜಿನ = ಆನೆಯ ತೊಗಲು; ವಾಲಿಸುತ್ತುತ = ಸುತ್ತಿಕೊಂಡು; ಪ್ರೇತ ಭಸ್ಮ = ಚಿತಾಭಸ್ಮ; ಕೃತ್ತಿವಾಸ = ಶಿವ; ಸೆಣಸುವ = ಹೋರಾಡುವ; ಪಶು = ನಾಲ್ಕು ಕಾಲಿನಪ್ರಾಣಿ; ಸರಿಬಲ = ಸಮರ್ಥಬಲಶಾಲಿ; ಸುಜನರ = ಸಾತ್ವಿಕರ; ನಿಂದಗೈ = ನಿಂದೆಯಾಡು; ಓತಪ್ರೋತದಿ = ಸತತವಾಗಿ; ಘೋರ್ರಾಪಾಣ ಮೂರ್ತಿಂಗೆ = ಭೋರ್ಗಲ್ಲಿಗೆ; ಹೆದೆ = ಧನುಸ್ಸು; ಆತು ಬಂದಿದೆ = ಒದಗಿ ಬಂದಿದೆ; ತಣಿಸಿ = ತೋಯಿಸಿ; ಬೆಸಿಸಿ = ಹೂಡಿ; ಸಾಸಿರ ಕರಣೆಗಳಂ = ಸಾವಿರ ಬಾಣಗಳನ್ನು; ಕೋಲ್ಮಿಂಚು = ಬಳ್ಳಿಮಿಂಚು; ಬಾನಿನಂಗಣ = ಆಕಾಶ ಪ್ರದೇಶ; ಭುವಿ = ಭೂಮಿ; ತಾರೆ = ನಕ್ಷತ್ರ.

ಭಾವಾರ್ಥ :- ಆದರೆ ರಾಕ್ಷಸನಾದ ಕುಂತಲೋಮನಿಗೆ ನಂದೀಶನ ಹಿತೋಪದೇಶ ಸರಿ ಬೀಳುವದಿಲ್ಲ. ಅದಕ್ಕೆ ಪ್ರತಿಯಾಗಿ ಶಿವನ ಬಗ್ಗೆ ಅವನಲ್ಲಿ ಇನ್ನೂ ಹೆಚ್ಚು ಹೆಚ್ಚಾಗಿ ರೋಷ ಉಕ್ಕತಾ ಇದೆ. ಅದಕ್ಕಾಗಿ ಅವನು ನಂದೀಶನಿಗೆ ಕೆರಳಿ ಹೇಳ್ತಾನೇ! ''ಪೇಳದಿರು ಉಂದೊಂದು ಸಬುದವ, ತಾಳಲಾರೆನು ವೈರಿಸ್ತುತಿಯನು!'' ಅಂದ್ರೆ.... ಎಲೋ ನಂದೀಶಾ! ಇನ್ನು ಮುಂದೆ ಶಿವನ ಬಗ್ಗೆ ಒಂದು ಚಕಾರ ಶಬ್ದ ಕೂಡಾ ಎತ್ತ ಕೂಡದು!... ಶಿವನಂಥಾ ವೈರಿಯನ್ನು ಸ್ತುತಿಸುವದನ್ನು ನಾನು ಕಿವಿಯಿಂದ ಕೇಳಲಾರೆ!.... ಎಲೋ ಪಶುವೇ! ಈ ಜಗತ್ತಿಗೆ ಮಲ್ಲ ಚಕ್ರವರ್ತಿಯೇ ಮಹಾ ಪ್ರಭುವಾಗಿದ್ದಾನೆ. ವಾಯುದೇವ, ಬಿಸಿಲು ಬೆಳದಿಂಗಳನ್ನಿವ ಸೂರ್ಯ ಚಂದ್ರರು, ಕಾಲಕಾಲದಲ್ಲಿ ಸುರಿದು-ಭೂಮಿಯನ್ನು ಸಂತೃಪ್ತಿಗೊಳಿಸುವ ಮಳೆರಾಯ, ಯಮ, ನೈರುತ್ಯ, ಅಗ್ನಿ, ಭೂಮಿ, ಆಕಾಶ ಮೊದಲ್ಗೊಂಡು ದಶದಿಕ್ಪಾಲಕರು, ಆ ನಮ್ಮ ಮಲ್ಲ ಚಕ್ರವರ್ತಿಯಲ್ಲಿ ಆಳಿನೋಪಾದಿಯಲ್ಲಿ ದುಡಿಯುತ್ತ ಜೀತಮಾಡುತ್ತಿದ್ದಾರೆ. ಪರಿಸ್ಥಿತಿ

ಹೀಗಿರುವಾಗ, ಸರ್ವಶ್ರೇಷ್ಠನಾದ ಮಲ್ಲ ಪ್ರಭುವನ್ನು ಬಿಟ್ಟು, ಅನ್ಯರನ್ನು ಆರಾಧಿಸೋದಕ್ಕೆ, ನನಗೇನು ತಲೆಕೆಟ್ಟಿದೆಯೇ ? ಆ ನಿನ್ನ ಪ್ರಭುವಾದ ಶಿವನಿಗೆ ಹೊತ್ತೊತ್ತಿಗೆ ಕೂಳು ನೀರುಗಳು ಸಿಗದೇ ಇದ್ದದ್ದರಿಂದ, ಆತನು ಹಸಿವೆಯಿಂದ ಕಾಲಕೂಟ ವಿಷಯವನ್ನೇ ಬಕ್ಕರಿಸಿದವನು. ಆದರೂ ಅವನ ದಾಹ ಕಡಿಮೆಯಾಗದ್ದರಿಂದ, ಬ್ರಹ್ಮ ಕಪಾಲವನ್ನೇ ಭಿಕ್ಷಾ ಪಾತ್ರೆಯನ್ನಾಗಿ ಮಾಡಿಕೊಂಡು, ಮನೆಮನೆಗಳಿಗೆ ಬಿಕ್ಷೆಗೆ ಹೊಗ್ತಾ ಇದ್ದಾನೆ, ಇಂಥಾದರಿದ್ರ ಶಿವನು ತನೆಗೇ ಇಲ್ಲದಾಗ, ಭಕ್ತರಿಗೆ ಇನ್ನೇನು ಕೈಯ್ಯೆತ್ತಿ ಕೊಡಬಲ್ಲಾ? ಉಡುವದಕ್ಕೆ ವಸ್ತ್ರಾದಿಗಳ ಅಲಂಕಾರವಿಲ್ಲದೇ ಆನೆಯ ಚರ್ಮವನ್ನು ನಡುವಿಗೆ ಸುತ್ತಿಕೊಂಡು, ಮೇಲು ವಸ್ತ್ರಗಳಿರದೇ ಮೈತುಂಬಾ ಹುಚ್ಚನೋಪಾದಿಯಲ್ಲಿ ಹೆಣಸುಟ್ಟ ಬೂದಿಯನ್ನು ಬಳಿದು ಕೊಂಡು, ಸ್ಮಶಾನವಾಸಿಯಾಗಿ ತಿರುಗುತ್ತಿರುವ ಹುಚ್ಚ ಶಂಕರನನ್ನು ಬೇಡವವರಾದರೂ ಯಾರು? ಅಂಥಾ ಅರೆಹುಚ್ಚನಾದ ಶಿವನನ್ನು, ಎತ್ತ ಬೇಕತ್ತ ಹೊತ್ತುಕೊಂಡೊಯ್ಯುವ ಮುದಿ ಎತ್ತು ನೀನು! ಕ್ಷಾತ್ರವಿದ್ಯೆಯ ಆಳವನ್ನು ಅರಿಯದವನಾಗಿರುವಿ, ನೀನೀಗ ಹಿಂದಿರುಗಿ ಹೋಗು! ಆ ಕೃತ್ತಿವಾಸನಾದ ಶಿವನನ್ನೇ ಯುದ್ಧಕ್ಕೆ ಕಳಿಸು!... ನಾನು ಅವನನ್ನು ಸಮರದಲ್ಲಿ ಸೋಲಿಸಿ, ನನ್ನ ದೊರೆಯಾದ ಮಲ್ಲ ಪ್ರಭುವಿನಲ್ಲಿಗೆ ಅವನನ್ನು ಹೊತ್ತುಕೊಂಡು ಹೋಗುತ್ತೇನೆ, ಸತ್ತ ಹುಲ್ಲನ್ನು ತಿಂದು, ಹೋರಾಡುವೆನೆಂದು ಬರುವ ನಿನ್ನಂಥ ಪಶುವಿನ ಗೊಡವೆ ನನಗೇನು?'' ಎಂದು, ನಂದಿಯನ್ನೂ, ಶಿವನನ್ನೂ, ಅಪಹಾಸ್ಯಮಾಡಿ ನಕ್ಕನು.

ಶಿವನಿಂದೆಯನ್ನು ಕೇಳಿ, ನಂದಿಗೆ ವಿಪರೀತ ಕೋಪವುಂಟಾಯಿತು. ಆದರೂ ಸಮಾಧಾನ ತಂದುಕೊಂಡು, ಖಡ್ಗಲೋಮನನ್ನು ಕುರಿತು, ''ಎಲೈ ವೀರ ಪುರುಷನೇ! ಸಮರ ಸಿದ್ಧತೆಯಲ್ಲಿ ರಣಾಂಗಣಕ್ಕೆ ಬಂದ ಸರಿ ಬಲರೊಡನೆ ಮೊದಲು ಗೌರವದಿಂದ ಮಾತನಾಡುವದನ್ನು ಕಲಿತುಕೋ!. ಸುಜನರನ್ನು ವ್ಯರ್ಥವಾಗಿ ನಿಂದೆಯಾಡಿದವನು, ಮುಂದಿನ ಜನ್ಮದಲ್ಲಿ ಹಂದಿಯಾಗಿ ಹುಟ್ಟುವನೆಂಬ ನೀತಿವಚನವನ್ನು ನೀನು ಅರಿತಿಲ್ಲವೇ?'' ಎಂದು ಪ್ರಶ್ನೆ ಮಾಡಿದನು. ಏನು ಹೇಳಿದರೇನು? ನಂದೀಶ್ವರನ ಸದ್ಬೋಧೆಯು ಆ ದುಷ್ಟ ರಾಕ್ಷಸನ ಮೈಗೆ ತಾಗಲಿಲ್ಲ. ಬೋರ್ಗಲ್ಲ ಮೇಲೆರೆದ ನೀರಿನಂತೆ, ಅವೆಲ್ಲಾ ವ್ಯರ್ಥವಾಗಿ ಹೋದವು, ಆಗ ನಂದಿಯು ಉಪದೇಶ ಮಾಡುವದನ್ನು ನಿಲ್ಲಿಸಿದನು. ಮತ್ತೂ ಆ ದೈತ್ಯನನ್ನು ಕುರಿತು, ''ಎಲೋ ಕುಂತಲೋಮಾ! ನಿನಗಿನ್ನು ನೀತಿಹೇಳಿ ಉಪಯೋಗವಿಲ್ಲ, ತೊಗಲು ಬಾವುಲಿಯಂತೆ ಬಗಲಲ್ಲಿ ಜೋತುಬಿದ್ದಿರುವ ಆ ನಿನ್ನ ದರಿದ್ರ ಧನುಸ್ಸನ್ನೆತ್ತಿಕೋ!... ನಿನಗೆ ಮರಣವೇ ತುಂಬಿ ಬಂದಿದೆ ಎಂದಾಗ, ಅದನ್ನು ತಪ್ಪಿಸವದಕ್ಕೆ ಯಾರಿಂದಲೂ ಸಾಧ್ಯವಿಲ್ಲ'' ಎಂದು ನುಡಿಯುತ್ತ, ತನ್ನ ಧನಸ್ಸನ್ನೆತ್ತಿಕೊಂಡು, ತನ್ನ ಹಣೆಯ ಬೆವರಿನಿಂದ ಧನುಸ್ಸಿನ ಸೂತ್ರವನ್ನು ತಣಿಸಿ, ಏಕಕಾಲಕ್ಕೆ ಸಹಸ್ರಬಾಣಗಳನ್ನು ಹೆದೆಗೆ ಹೂಡಿ, ಕೋಲ್ಮಿಂಚಿನಂತೆ ಖಡ್ಗಲೋಮನ ಮೇಲೆ ಪ್ರಯೋಗ ಮಾಡಿದನು. ಅಬ್ಬಾ! ಜಯ ನಂದಿಯ ಆ ಪರಾಕ್ರಮುವನ್ನು ವರ್ಣಿಸುವರಾರು? ಆತನು ಗೈದ ಆರ್ಭಟಕ್ಕೆ ಭೂಮಿಯು ಗದಗದನೇ ನಡುಗಿ ಭೂಕಂಪಉಂಟಾಯಿತು. ಆಕಾಶದಲ್ಲಿ ''ಧಣಾರ್'' ಎಂಬ ಘೋರ್ ಶಬ್ದ ಕೇಳಿ ಬಂದಿತು ಆಕಾಶದಲ್ಲಿದ್ದ ಅಸಂಖ್ಯಾತ ನಕ್ಷತ್ರಗಳು ತಮ್ಮಿಂದತಾವೇ ಉರಿದು, ಜರಿದು ನೆಲಕ್ಕೆ ಬಿದ್ದವು.

ಧೃತಿಯಗೆಡದಲೆ ಕುಂತಲೋಮನು। ಹತಿಸಿದನು ತಾ ಪರಿಘ ತಿರುಗಿಸಿ ।
ಪತನಗೊಂಡುದ ನೋಡಿ ನಕ್ಕನು ಸಾಸಿರಂಬುಗಳೂ ॥
ಕತತ ಕುದಿಬುದು ರಕುತ ರಕ್ಕಸ । ನತಿ ತ್ವರದಿ ಮೇಲೆತ್ತಿ ಸಬಳವ ।
ನತಿ ಭಯಂಕರವಾಗಿ ತೂರಿದ ಕ್ರೂರತನದಿಂದಾ ॥ ೧೫॥

ಜಿಗಿದು ಕಡಿದನು ನಂದಿ ಸಬಳವ । ಮಿಗಿಲು ಶೂಲಾಯುಧದ ಅಲಗಲಿ ।
ತೆಗೆದು ಧನು ಮೀಂಟಿದನು ಭೀಕರ ಸರ್ಪಬಾಣವನೂ ॥
ಬಗೆಯ ಬಣ್ಣದ ಹೊಗೆಯ ಕಾರುತ । ಬಗಿದು ಎದೆ ಬೆನ್ನಲ್ಲಿ ಹಾದರು ।
ಸೊಗದಿ ಕಾದಾಡುತ್ತ ಖಡ್ಗದಿ ಸಾರಥಿಯ ಕಡಿದಾ ॥೧೬॥

ಕೊಲುವ ಬಗೆ ಹೇಗೆಂದು ಚಿಂತಿಸಿ। ಖಲಹರನ ನೆನೆಯಲ್ಕೆ ನಂದಿಯು ।
ಉಲಿಯಿತಾನಭ ಅಮೃತವಿದೆ ರಾಕ್ಷಸನ ಎದೆಯೊಳಗೆ ॥
ಸುಲಿದು ಆಗ್ನ್ಯಾಸ್ತ್ರದಲಿ ಒಣಗಿಸು। ಚಲಿಪುದಾಗಲೆ ಪ್ರಾಣ ಪಕ್ಷಿಯು ।
ನಿಲದೆ ಓಡುವನಾಗ ದೈತ್ಯಾಧಮನು ಯಮಪುರಿಗೇ ॥ ೧೭॥

ಎಂದು ಸಾರಿದ ನಭದ ವಾಕ್ಯವ । ನಿಂದು ಆಲಿಸಿ ನವಿನ ಸಾರಥಿ।
ತಂದು ರಥವೇರಿದನು ನಂದಿಯು ಭವ್ಯ ಸಂಭ್ರಮದೀ ॥
ಹೊಂದಿಸುತ ಅಗ್ನ್ಯಾಸ್ತ್ರ ಧನುವಿಗೆ । ನಿಂದು ಹೊಡೆದನು ರೋಷದಿಂದಲಿ ।
ಬಂದಿತೈ ಅಗ್ನ್ಯಾಸ್ತ್ರ ಕುಂತದ ಲೋಮಗೆದುರಾಗೀ ॥೧೮॥

ಖಳನು ವರುಣಾಸ್ತ್ರವನು ಹೂಡಲು। ಹೊಳೆಯದಾಯಿತು ಸೂತ್ರ ಮಂತ್ರವು ।
ಇಳಿಯಿತಾಗಲೆ ಅಗ್ನಿ ಅಸ್ತ್ರವು ಅಸುರನುರದೊಳಗೆ ॥
ಮಳೆಯ ನೀರಿಳಿದಂತೆ ತಟತಟ। ಇಳಿದು ಸೋರಿತು ಭುವಿಗೆ ಅಗ್ನಿಯು ।
ತಿಳಿದು ನಿಶ್ಯೇಷವನುಗೊಳಿಸಿದ ವಾಯು ಸಹಿತಾಗೀ ॥೧೯॥

ಸುಧೆಯು ತೀರಲು ವಸುಧೆಯೊಳಗುರು । ಳಿದನು ಕಣ್ಣಾಲಿಗಳ ಕಿಸಿಸುತ ।
ಮುದದಿ ಯಮ ಪಾಶದಲಿ ಸೆಳೆದನು ಅಸುರನಸುವನ್ನೂ ॥
ವಧೆಯಗೊಳ್ಳಲು ಕುಂತಲೋಮನು। ಬೆದರಿತಾ ಅರಿಸೇನೆ ಭಯದಲಿ ।
ಚೆದುರಿ ಓಡಿತು ದಿಕ್ಕು ದಿಕ್ಕಲಿ ಗಾಳಿ ಪಟದಂತೆ ॥೨೦॥

ಹಿಡಿದು ಹೊಡೆದವು ಸುರರ ಸೇನಾ । ಪಡೆಗಳೆಲ್ಲವು ಮುತ್ತಿ ಮುಸುಕುತ ।
ಜಡಿದು ಕೆಡಹಿದರಮಮ ಆ ರಣ ಭೀತಿಮಯವಾಯ್ತು॥
ಕಡಿದ ಕೈ ಕಾಲ್ ರುಂಡ ರಥಗಳು । ಉಡಿದ ಸೊಂಡಿಲದಾನೆ ಘೀಳಿಡು ।
ತೆಡವಿಡದೆ ಸಾಗಿದವು ರಕುತದ ಘೋರ ನದಿಗಳೊಳು ॥೨೧॥

ಸುರರು ಹೂಮಳೆ ಗರೆದು ನಂದಿಗೆ । ಹರಸಿದರು ಒಕ್ಕೊರಲಿನಿಂದಲಿ ।
ಹರನರೂಪಿಗೆ ಜಯದ ಮೂರ್ತಿಗೆ ಜಯಜಯಾಯೆನುತಾ ॥
ಭರದಿ ಶಿವನಪ್ಪಿದನು ಬಸವನ। ಉರದಿ ಪ್ರೀತ್ಯಾದರಗಳಿಂದಲಿ ।
ಜರಿದು ಜಯಜಯವೆನುತ ಮಣಿದನು ನಂದಿ ಶಿವನಿಂಗೆ ॥೨೨॥

ಇತಿ ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್. ಜೋಶಿ ವಿರಚಿತ, ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್ "ಖಡ್ಗಲೋಮ ವಧೋ" ನಾಮಕ ಶೋಡಶೋಧ್ಯಾಯಃ ॥

ಅಂತು ಅಧ್ಯಾಯ ೧೬ ಕ್ಕಂ, ಪದ ೨೨ ಕ್ಕಂ, ಒಟ್ಟು ಪದ, ೨೫೬ ಕ್ಕಂ ಮಂಗಲಮಸ್ತು

ಏಳುಕೋಟಿಗ ! ಏಳುಕೋಟಿಗ !!.. ಏಳುಕೋಟಿಗೋ !!!... ಸಾಂಗಬಲೋ !..

* * * * * *

# ಅಧ್ಯಾಯ ೧೭ ಸಪ್ತದಶೋಧ್ಯಾಯಃ
## ಮಣಿಕಾಸುರ ವಧೆ

ಸೂಚನೆ :-

**ಮಣಿಕದಾನವ ಶೂಲಿಯೊಂದಿಗೆ । ಸೆಣಿಸಿ ಸೋಲುತ ಮರಣ ಸಮಯದಿ ।**
**ತಣಿಸಿದನು ಶಂಕರನ ಸ್ತೋತ್ರದಿ ಪಡೆದ ಮುಕುತಿಯನೂ ॥**

**ಸೂಚನೆಯ ಅರ್ಥ :-** "ಮಲ್ಲದೈತ್ಯನ ಬಲಾಢ್ಯ ಬಂಧುವಾದ ಮಣಿಕಾಸುರನು ಪರಮಾತ್ಮನೊಂದಿಗೆ ಘನಘೋರವಾಗಿ ಯುದ್ಧ ಮಾಡುತ್ತಾ, ಕೊನೆಯಲ್ಲಿ ಸೋತು ಮರಣೋನ್ಮುಖನಾಗಿರುವ ಸಮಯದಲ್ಲಿ. ಹಠಾತ್ತಾಗಿ ಪೂರ್ವಜನ್ಮಾಂತಾರಗಳ ಸ್ಮೃತಿಯುಂಟಾದದ್ದರಿಂದ, ಆತನು ಭಕ್ತಿ ಭಾವದಿಂದ ಶಿವ ಚರಣಗಳನ್ನು ಮಸ್ತಕದಲ್ಲಿಟ್ಟುಕೊಂಡು, ಅನನ್ಯವಾಗಿ ಶಿವನನ್ನು ಸ್ತೋತ್ರ ಮಾಡ್ತಾ ಇದ್ದಾನೆ. ಆ ಭಕ್ತನ ಪರಿಶುದ್ಧವಾದ ಭಕ್ತಿಗೊಲಿದ ಪರಮಾತ್ಮ, ಕಾರುಣ್ಯ ಭಾವದಿಂದ ಮಣಿಕಾಸುರನಿಗೆ ಜೀವನ್ಮುಕ್ತಿಯನ್ನು ನೀಡ್ತಾ ಇದ್ದಾನೆ" ಎಂಬುದನ್ನು ಸೂಚಿಸುತ್ತ, ಕವಿಯು ಮುಂದಿನ ಕಥಾ ಭಾಗವನ್ನು ಈ ರೀತಿಯಾಗಿ ವರ್ಣನೆ ಮಾಡಿ ಹೇಳ್ತಾ ಇದ್ದಾನೆ. ಅದೇನೆಂದರೆ -

**ಶೂರ ಸೇನಾಧಿಪರು ದಳಗಳು । ಸೂರೆಗೊಂಡುದ ಕಂಡು ರೋಷದಿ।**
**ಕಾರಿದರು ಕಿಡಿಗಳನು ಕಣ್ಣಲಿ ಅಣ್ಣತಮ್ಮದಿರೂ ॥**
**ಘೋರ ರಣಭೂಮಿಯಲಿ ಇಬ್ಬರೆ। ಸೇರಿ ಅಪ್ತವಿಚಾರ ಗೈದರು ।**
**ಮಾರಿಗೌತಣವಿಡುವೆನೆಂದಬ್ಬರಿಸಿ ಮಣಿ ಎದ್ದಾ ॥೧॥**

ಬೆಚ್ಚದಿರು ಅಣ್ಣಯ್ಯ ದಿವಿಜರ । ಕೊಚ್ಚಿ ರಣದಲಿ ಸೂರೆ ಗೈವೆನು ।
ಸಚ್ಚಿದಾತ್ಮನ ಕಟ್ಟಿ ತರುವೆನು ಬೇಡ ಸಂದೇಹ ॥
ಮಚ್ಚಿನಿಂದಲಿ ಸೀಳಿ ಬ್ರಹ್ಮನ। ಅಚ್ಯುತನ ಹೊತ್ತಂದು ಸಲಿಸುವೆ ।
ಕೆಚ್ಚೆದೆಯ ಈ ವೀರಗಾಶೀರ್ವದಿಸಿ ಕಳಿಸೆಂದಾ ॥೨॥

ಶಬ್ದಾರ್ಥ :- ಸೇನಾಧಿಪ = ಸೇನಾಪತಿ; ದಳ = ಚತುರಂಗ ಬಲ; ಸೂರೆಗೊಳ್ಳು = ನಾಶವಾಗು; ಆಪ್ತವಿಚಾರ = ಆಪ್ತಾಲೋಚನೆ; ಮಣಿ = ಮಲ್ಲದೈತ್ಯನತಮ್ಮ ದಿವಜರು = ದೇವತೆಗಳು; ಕೊಚ್ಚಿ = ಕಡಿದು; ಸಚ್ಚಿದಾತ್ಮ = ಶಿವ; ಸಂದೇಹ = ಸಂಶಯ; ಅಚ್ಯುತ = ವಿಷ್ಣು; ಸಲಿಸು = ಸಮರ್ಪಿಸು; ಮಚ್ಚು = ಕಂದಲಿ (ಆಯುಧ).

ಭಾವಾರ್ಥ :- ದೈತ್ಯ ಸೇನೆಯ ಅಸಂಖ್ಯಾತ ಶೂರ ಸೇನಾಪತಿಗಳೂ, ಅಲ್ಲದೇ ಕೋಟಿಗೂ ಮಿಕ್ಕಿದ ಅಸಂಖ್ಯಾತ ಚತುರಂಗ ಬಲವೂ, ಯುದ್ಧದಲ್ಲಿ ಸಮಗ್ರವಾಗಿ ನಾಶವಾದದ್ದನ್ನು ಕಂಡು, ಮಲ್ಲಾಸುರ, ಮತ್ತೂ ಮಣಿಕಾಸುರರೆಂಬ ದೈತ್ಯ ಸಹೋದರರಿಬ್ಬರೂ ಕಣ್ಣುಗಳಿಂದ ಕಿಡಿಗಳನ್ನು ಕಾರಿದರು, ಆ ಭಯಂಕರವಾದ ರಣಭೂಮಿಯಲ್ಲಿ ಇಬ್ಬರೇ ಕುಳಿತುಕೊಂಡು, ಬಹಳ ಹೊತ್ತಿನವರೆಗೆ ಆಪ್ತಾಲೋಚನೆ ಮಾಡಿದರು. ಕೊನೆಗೆ ಒಂದು ನಿರ್ಧಾರಕ್ಕೆ ಬಂದವನಂತೆ, ತಮ್ಮನಾದ ಮಣಿಕಾಸುರನು "ಈ ದೇವತೆಗಳನ್ನು ನಾಶಮಾಡಿಬಿಡುತ್ತೇನೆ, ಸಕಲ ಮಾರೀ ದೇವತೆಗಳಿಗೆ ರಣರಂಗಕ್ಕೆ ಬರಲು ಆಹ್ವಾನಿಸುತ್ತೇನೆ," ಎಂದು ನುಡಿಯುತ್ತ ರಣಭೂಮಿಯಿಂದ ಮೇಲಕ್ಕೆದ್ದನು. ಅವನ ಆಗಿನ ರೂಪವು ತುಂಬಾ ಭಯಾನಕವಾಗಿತ್ತು. ಆತನು ದೈತ್ಯ ಚಕ್ರವರ್ತಿಯಾದ ಮಲ್ಲಾಸುರನಿಗೆ ಧೈರ್ಯ ತುಂಬುತ್ತ, "ಅಣ್ಣಾ! ಇಷ್ಟೊಂದು ಸಣ್ಣ ವಿಷಯಕ್ಕಾಗಿ ನೀನೇಕೆ ಚಿಂತಿಸುವಿ? ನೀನೇನೂ ಭಯಗೊಳ್ಳುವ ಕಾರಣವಿಲ್ಲ. ನಾನು ಈಗಿಂದೀಗಲೇ ರಣಕ್ಕೆ ನುಗ್ಗಿ, ಆ ಮೂವತ್ಮೂರು ಕೋಟಿ ದೇವತೆಗಳನ್ನೂ ಕೊಚ್ಚಿ, ರಣರಂಗದಲ್ಲಿ ಸೂರೆಮಾಡಿ ಬಿಡುತ್ತೇನೆ, ಅಲ್ಲದೇ ಇಷ್ಟೆಲ್ಲ ಅನಾಹುತಕ್ಕೆ ಕಾರಣನಾದ ಆ ಪರಮಾತ್ಮನನ್ನು ಸಮರದಲ್ಲಿ ಸೋಲಿಸಿ, ಜೀವಂತವಾಗಿ ಕಟ್ಟಿ ತಂದು ನಿನ್ನ ಪಾದಕಮಲಗಳಲ್ಲಿ ಕೆಡಹುತ್ತೇನೆ. ಬ್ರಹ್ಮ, ಹರಿ, ಇಬ್ಬರನ್ನೂ ಕಂದಲಿಯಿಂದ ಸೀಳಿ ಬುಟ್ಟಿಯಲ್ಲಿ ತುಂಬಿ ತಂದು ನಿನಗೆ ಸಮರ್ಪಣೆ ಮಾಡ್ತೇನೆ. ಇದರಲ್ಲಿ ನಿನಗೆ ಯಾವುದಕ್ಕೂ ಸಂಶಯ ಬೇಡಾ! ಈ ನಿನ್ನ ಕೆಚ್ಚೆದೆಯ ತಮ್ಮನಿಗೆ ಅಕ್ಕರೆಯಿಂದ ಆಶೀರ್ವದಿಸಿ, ನನಗೆ ರಣರಂಗಕ್ಕೆ ಹೊರಡಲು ಅಪ್ಪಣೆ ನೀಡು!" ಎಂದು ಕೇಳಿಕೊಳ್ತಾ ಇದ್ದಾನೆ ಪರಾಕ್ರಮಿಯಾದ ಮಣಿಕಾಸುರ. ಅಲ್ಲದೇ ತನ್ನ ಹಿತೋಪದೇಶವನ್ನು ಮುಂದುವರಿಸುತ್ತಾ.

ಹಿರಿಯ ಭಾಗ್ಯವು ನನ್ನದಿದೆ ಕರಿ । ವರವದನ ಪಿತನೊಡನೆ ಕಾದುವ ।
ಗರುವವಿದೆ ವಿಶ್ವಾಸಸಮರದಿ ಗೆಲುವೆನೆಂತೆಂಬ ॥
ಮರಣಗೊಂಡರು ಸರಿಯೆ ಶಿವನಲಿ । ಬೆರೆವೆನಾತನ ಚರಣ ಕಮಲದಿ ।
ದೊರೆತ ಅಪಜಯ ಜಯಗಳೆರಡಲಿ ಕೀರ್ತಿಯನೆ ಕಾಂಬೆ ॥ ೩॥

ಎನುತ ಸಂಭಾಳಿಸುತ ಅಣ್ಣನ । ವಿನುತ ಮಹದಾಜ್ಞೆಯನು ಪಡೆಯುತ ।
ದನುಜ ಮಣಿಕನು ನಡೆದು ಬಂದನು ರಣದ ಕುಂಭಿನಿಗೆ
ಘನದ ಪದ ನ್ಯಾಸದಿ ವಸುಂಧರೆ। ಧನನ ನಡುಗಿದಳಯ್ಯ ಉಸಿರಲಿ।
ಘನದ ಕಿಡಿಯೇಳುತ್ತ ಖ-ಕಣವ ತುಂಬಿತಾಕ್ಷಣದಿ ॥ ೪ ॥

ಧರಿಸಿ ವಿಂಶೋನ್ನತದ ಭುಜಗಳ । ಇರಿಸುತಲಿ ಪರಿಪರಿಯ ಆಯುಧ ।
ಸುರರ ನೋಡುತ ಕಿರುಚಿದನು ಆ ಎಂದು ಬಾಯ್ದೆರೆದು ॥
ಧರಣಿ ನಡುಗಿತು ಗಿರಿಗಳದುರುತ । ಮುರಿದು ಬಿದ್ದವು ಮುನಿ ಸಮಾಧಿಗ ।
ಕೊರಗಿದವು ದಿಸೆದಿಸೆಗೆ ಆ ಕೈಲಾಸ ಗಿರಿಯಲ್ಲೀ ॥ ೫ ॥

ಶಬ್ದಾರ್ಥ :- ಕರಿವರವದನಪಿತ = ಶಿವ; ಗರುವ = ಗರ್ವ; ಸಮರ = ಯುದ್ಧ; ವಿನುತ = ಶ್ರೇಷ್ಠ; ಮಹದಾಜ್ಞೆ = ಅಪ್ಪಣೆ; ಕುಂಭಿನಿ = ಭೂಮಿ; ಮಣ = ಡೊಂಕಾಗು ; ಪದನ್ಯಾಸ = ಹೆಜ್ಜೆಯ ತುಳಿತ; ಕಣ = ಅಂಗಳ; ಖ = ಆಕಾಶ; ಜ್ವಾಲೆಯುಸಿರಲಿ = ಬೆಂಕಿಯಂಥ ಶ್ವಾಸೋಚ್ಛ್ವಾಸದಲ್ಲಿ; ಘನದ = ಭಯಂಕರ ಭಾರವುಳ್ಳ; ಗರ್ಜನೆಗೈ = ಆರ್ಭಟಿಸು; ವಿಂಶೋನ್ನತದ ಭುಜಗಳಲಿ = ಇಪ್ಪತ್ತು ದೀರ್ಘಬಾಹುಗಳಲ್ಲಿ; ಗಂಡೆದೆಗೊಂಡು = ಗಂಡಸರಾಗಿ ; ದಿಸೆದಿಸೆಗೆ = ದಿಕ್ಕಾಪಾಲಾಗಿ; ಕೈಲಾಸಗಿರಿ = ಹಿಮಾಲಯ.

ಭಾವಾರ್ಥ :- ಅಣ್ಣಾ! ನನ್ನ ಭಾಗ್ಯವು ಊರ್ಜಿತವಾಗಿದೆ. ಯಾಕೆಂದರೆ, ಗಣಪತಿಯ ತಂದೆಯಾದ ಶಿವನೊಂದಿಗೆ ಸಮರದಲ್ಲಿ ಕಾದಾಡುವ ಸುಯೋಗ ನನಗೆ ದೊರೆತಿದೆ. ಯುದ್ಧದಲ್ಲಿ ಗೆದ್ದೇ ತೀರುವೆನೆಂಬ ವಿಶ್ವಾಸವೂ ನನಗಿದೆ. ಅಂತೂ ಮೀರಿ ನಾನು ಸಮರದಲ್ಲಿ ಸೋತರೂ, ಮಡಿದರೂ, ನನಗದರ ಚಿಂತೆಯಿಲ್ಲ. ಯಾಕೆಂದರೆ ಅನಾಯಾಸವಾಗಿ ಸಿಕ್ಕ ಈ ಸುಯೋಗವನ್ನು ಪಯೋಗಿಕೊಂಡು, ನಾನು ಶಿವನ ಪಾದಕಮಲಗಳಲ್ಲಿ ಸೇರಿಕೊಂಡು ಜೀವನ್ಮುಕ್ತಿ ಪಡೆಯುತ್ತೇನೆ. ಒಟ್ಟಾರೆ ನಾನು ಶಿವನೊಂದಿಗೆ ಯುದ್ಧ ಮಾಡುವಾಗ ಗೆದ್ದರೂ ಅಷ್ಟೇ ; ಸೋತರೂ ಅಷ್ಟೇ !... ಸೋಲು-ಗೆಲುವುಗಳೆರಡರಲ್ಲಿಯೂ ನಾನು ಕೀರ್ತಿಯನ್ನೇ ಪಡೆಯುತ್ತೇನೆ.

ಈ ಪ್ರಕಾರವಾಗಿ ಅಣ್ಣ ಮಲ್ಲಾಸುರನನ್ನು ಸಮಾಧಾನೋಕ್ತಿಗಳಿಂದ ಸಂತೈಸಿದ ಮಣಿಕಾಸುರನು, ಅಣ್ಣನಿಗೆ ನಮಸ್ಕರಿಸಿ, ಆತನ ಅಮೋಘವಾದ ಆಶೀರ್ವಾದವನ್ನು ತಲೆಯಲ್ಲಾಂತು, ತಾನೊಬ್ಬನೇ ಒಬ್ಬನಾಗಿ ನಡೆಯುತ್ತ ರಣಭೂಮಿಯತ್ತ ಬರ್ತಾ ಇದ್ದಾನೆ. ಮಣಿಕಾಸುರನ ಆಗಿನ ಸ್ಥಿತಿ ಹೇಗಿತ್ತೆಂದರೆ- ಆತನು ಪಾದಗಳನ್ನಿಟ್ಟ ಭೂಭಾಗವು, ಭಾರದಿಂದಾ ಜಜ್ಜಿ ಹೋಗ್ತಾ ಇತ್ತು. ಆತನ ಸ್ವಾಶೋಚ್ಛಾಸದಲ್ಲಿ ಆಕಾಶದಂಗಳವು ಬೆಂಕಿಯಂಥಾ ಜ್ವಾಲೆಗಳಿಂದ ತುಂಬಿಹೋಗಿತ್ತು. ಈ ಪ್ರಕಾರ ರಣರಂಗಕ್ಕೆ ಆಗಮಿಸಿದ ಮಣಿಕಾಸುರನು, ತನ್ನ ಘನಘೋರವಾದ ಗದೆಯನ್ನೆತ್ತಿ ದೇವ ಸಮೂಹದೆದುರು ಏಕಾಕಿಯಾಗಿ ನಿಂತುಕೊಂಡು ಗರ್ಜನೆ ಮಾಡ್ತಾ ಇದ್ದಾನೆ. ದೀರ್ಘವಾದ ಇಪ್ಪತ್ತು ಬಾಹುಗಳಲ್ಲಿ ತರತರದ ಆಯುಧಗಳನ್ನು ಧರಿಸಿದಂಥಾ ದಾನವನು ದೇವ-ಸಮುದಾಯದೆದುರು ನಿಂತುಕೊಂಡು. ''ಎಲವೆಲವೋ ದುರಾತ್ಮರಾದ ದೇವತೆಗಳೇ! ನಿಮ್ಮಲ್ಲಿ ಯಾರಿಗಾದರೂ ಗಂಡೆದೆ ಇದ್ದರೆ, ನನ್ನೊಂದಿಗೆ ಯುದ್ಧಕ್ಕೆ ಬರ್ರೀ'' ಅತಾ ಗುಡುಗು ಹಾಕ್ತಾ ಇದ್ದಾನೆ. ಆತನ ಆ ಘನಘೋರವಾದ ಗರ್ಜನೆಗೆ, ದೇವತೆಗಳು ಥರಥರ ನಡುಗಿ ಹೋಗ್ತಾಇದ್ದಾರೆ. ಬ್ರಹ್ಮಾಂಡವೇ ತತ್ತರಿಸಿ ಹೋಗ್ತಾ ಇದೆ, ಗಿರಿಗಳು ಅದುರೆದುರಿ ಕಪ್ಪರಿಸಿ ಬೀಳ್ತಾ ಇವೆ. ಕೈಲಾಸ ಗಿರಿಯಲ್ಲಿದ್ದ ಸಿದ್ಧ ಸಾಧ್ಯರ ಸಮಾಧಿಗಳು ದಿಕ್ಕಾಪಾಲಾಗಿ ಚದುರಿ ಬೀಳ್ತಾ ಇವೆ.

**ಉಕ್ಕಿ ಮೊರೆದವು ಸಪ್ತಸಾಗರ । ಚುಕ್ಕೆಗಳು ಉದುರಿದವು ನಭದಿಂ ।**
**ದಿಕ್ಕುದಿಕ್ಕಲಿ ಓಡಿದವು ಆ ವನದ ಪ್ರಾಣಿಗಳೂ ॥**
**ತೆಕ್ಕೆ ಸಡಲಿತು ಕಿನ್ನರಂಗಳ । ತಿಕಿ ಮುಕ್ಕುತ ಬಂಡೆ ಜರಿದವು ।**
**ಸೊಕ್ಕಿದಾ ಮಣಿ ದೈತ್ಯನಾರ್ಭಟ ಸಿಡಿಲ ನಾದದಲೀ ॥ ೬॥**

ಕೆಂಡಗೆಂಪನು ಬಳಿದ ಕೇಶವು । ದುಂಡು ಮೊಗಕೊಪ್ಪಿರ್ದ ಮೀಸೆ ಪ್ರ ।
ಚಂಡ ಮೇಘಾವಳಿಯ ಮೀಂಟುವ ಹೊಂಗಿರೀಟಗಳ ॥
ಕಂಡು ಆ ಮಾರ್ತಾಂಡ ಭೈರವ । ಪುಂಡ ದಾನವನಿವನು ಮಾಂತ್ರಿಕ ।
ಕಂಡು ಕೊಳ್ಳಿರಿ ಯನ್ನ ಕುಶಲತೆ ಎನುತ ಸುರರಿಂಗೆ ॥ ೭ ॥

ಚಲಿಪ ನಂದಿಯನಿಳಿದು ಪದದಲಿ । ಚಲಿಸಿ ದೈತ್ಯಂಗೆದುರು ನಿಲ್ಲಲು ।
ಉಲಿದನಾ ಖಳನಿಂದೆ ನುಡಿಗಳ ಶಿವನ ಹಳಿದಾಡೀ ॥
ಎಲವೊ ಶಂಕರ ಭಿಕ್ಷೆ ಬೇಳ್ಪುದ । ನುಳಿದು ನೀ ಹೋರಾಟ ಗೈವೊಡೆ ।
ಅಳಿವು ತಪ್ಪದು ಎಂದಿಗೆಂದಿಗು ಹೋಗು ಹಿಂದಿರುಗೀ ॥ ೮॥

ಶಬ್ದಾರ್ಥ :- ಸಪ್ತಸಾಗರ = ಏಳು ಸಮುದ್ರಗಳು ; ನಭದಿಂ = ಆಕಾಶದಿಂದ; ಕಿನ್ನರಂಗಳ = ಕಿನ್ನರದಂಪತಿಗಳ; ತೆಕ್ಕೆ = ಅಪ್ಪಿಕೊಂಡದ್ದು; ಕೇಶ = ತಲೆಗೂದಲು; ಮೇಘಾವಳಿ = ಮೇಘಮಂಡಲ ; ಮೀಂಟುವ = ತಿಕ್ಕುವ; ಹೊಂಗಿರೀಟ = ಬಂಗಾರ ಕಿರೀಟ; ಮಾರ್ತಾಂಡ ಭೈರವ = ಶಿವ; ಮಾಂತ್ರಿಕ = ಮಂತ್ರಬಲ್ಲವ; ಕಂಡುಕೊಳ್ಳಿರಿ = ನೋಡಿರಿ; ಕುಶಲತೆ = ಚಾತುರ್ಯ; ಸುರರಿಂಗೆ = ದೇವತೆಗಳಿಗೆ; ಚಲಿಪ = ನಡೆಯುತ್ತಿರುವ; ಪದದಲಿ = ಪಾದಾಚಾರಿಯಾಗಿ; ಚಲಿಸಿ = ನಡೆದು; ಉಲಿ = ಮಾತಾಡು; ಹಳಿದಾಡಿ = ನಿಂದೆಯಾಡಿ; ಬೆಳ್ಪುದ = ಬೇಡುವದನ್ನು; ಉಳಿದು = ಬಿಟ್ಟು; ಹೋರಾಟ ಗೈವೊಡೆ = ಕದನಕ್ಕೆ ನಿಂತರೆ; ಅಳಿವು = ವಿನಾಶ.

ಭಾವಾರ್ಥ :- ದೈತ್ಯ ಮಣಿಕಾಸುರನ ಗರ್ಜನೆಯಿಂದಾಗಿ ಏಳೂ ಸಮುದ್ರ ಗಳು ಉಕ್ಕೇರಿದವು. ಆಕಾಶದಿಂದ ನಕ್ಷತ್ರಗಳುರುಳಿ ನೆಲಕ್ಕೆ ಬಿದ್ದವು. ಆ ನಿಬಿಡಾರಣ್ಯದಲ್ಲಿ ವಾಸವಾಗಿದ್ದ ಪ್ರಾಣಿಗಳೆಲ್ಲ ಭಯದಿಂದ ದಿಕ್ಕೆಟ್ಟು ಓಡತೊಡಗಿದವು. ಒಬ್ಬರಿಗೊಬ್ಬರು ಅಪ್ಪಿಕೊಂಡಿದ್ದ ಕಿನ್ನರ ದಂಪತಿಗಳು. ಬೆಚ್ಚಿ ದೂರ ಸರಿದರು. ಪರ್ವತಗಳಲ್ಲಿಯ ಬಂಡೆಗಲ್ಲುಗಳು ಒಂದಕ್ಕೊಂದು ತಿಕ್ಕಿ ನೆಗೆದಾಡುತ್ತ ನೆಲಕ್ಕೆ ಉದುರಿ ಬಿದ್ದುವು. ಕೆಂಬಣ್ಣದ ಕೇಶರಾಶಿಗಳಿಂದಲೂ, ದುಂಡು ಮುಖಕ್ಕೊಪ್ಪಿದ ಭೀಕರ ಮೀಸೆಗಳಿಂದಲೂ, ಮೇಘಾವಳಿಯನ್ನು ಮುಟ್ಟುವಷ್ಟು ಎತ್ತರವಾಗಿದ್ದ ಕಿರೀಟದಿಂದಲೂ, ಪರಿಶೋಭಿಸುತ್ತಿರುವಂಥ

ಆ ಮಣಿಕ ದೈತ್ಯನನ್ನು ಕಂಡ ಮಾರ್ತಾಂಡ ಭೈರವನು, ಸಕಲ ದೇವತೆಗಳನ್ನು ಕುರಿತು, ''ದೇವತೆಗಳೇ! ಈತನು ಪ್ರಚಂಡ ರಾಕ್ಷಸನಾಗಿದ್ದಾನೆ. ಅಲ್ಲದೇ ಮಂತ್ರ ವಿದ್ಯೆಯನ್ನು ಬಲ್ಲವನಾಗಿದ್ದಾನೆ. ಆದ್ದರಿಂದ ನೀವೀಗ ಯುದ್ಧಕ್ಕೆ ಹೋಗುವದು ಬೇಡಾ!... ನಾನೇ ಸ್ವತಃ ಈ ದೈತ್ಯನೊಂದಿಗೆ ಹೋರಾಟ ಮಾಡುತ್ತೇನೆ. ನೀವುಗಳೆಲ್ಲ ಸುಮ್ಮನೇ ನಿಂತುಕೊಂಡು ಸಮರ ಕಲೆಯನ್ನು ಅವಲೋಕಿಸಿರಿ! ಎಂದು ತಿಳಿಸಿದನು. ಮತ್ತೂ ಮಣಿಕಾಸುರನು ಕಾಲುನಡಿಗೆಯಿಂದ ಬರುತ್ತಿರುವದನ್ನು ಗಮನಿಸಿದ ತಾನೂ. ನಂದಿಯನ್ನಿಳಿದು ಪಾದಾಚಾರಿಯಾಗಿಯೇ ದೆತ್ಯನ ಸಮ್ಮುಖಕ್ಕೆ ಬಂದು ನಿಂತನು. ಶಿವನನ್ನು ಕಂಡ ದೈತ್ಯನು ಆತನಿಗೆ ಅನೇಕ ನಿಂದಾ ನುಡಿಗಳನ್ನಾಡಿದನು.

''ಎಲವೋ ದರಿದ್ರ ಶಂಕರನೇ! ಭಿಕ್ಷೆ ಬೇಡುವದನ್ನು ಬಿಟ್ಟು, ವೀರಾಧಿವೀರನಂತೆ ನನ್ನೊಂದಿಗೆ ಹೋರಾಟಕ್ಕೆ ನಿಂತರೆ, ನಿನಗೆ ಎಂದೆಂದಿಗೂ ಅಳಿಗಾಲವು ತಪ್ಪಲಾದದೆಂದು ತಿಳಿದುಕೋ!.... ಅದಕ್ಕಾಗಿ ನೀನೀಗ ಮರ್ಯಾದೆಯಿಂದ ತಿರುಗಿ ಹೋಗಿಬಿಡು! ಎಂದು ದೈತ್ಯನು ಗರ್ಜಿಸಿದನು. ಮತ್ತೂ ಶಿವನನ್ನು ಕುರಿತು, ಹೀಗೆ ಹೇಳ್ತಾನೆ.....

**ಒಲುಮೆಯಿಂ ನೀ ಬೇಡು ಭಿಕ್ಷೆಯ। ಒಲಿದು ಕ್ಷಮಿಸುವ ಮಲ್ಲ ಭೂಪತಿ।**
**ಬಲರ ಕಾಣೆನು ದಾನಕ್ಷಮೆಯೊಳು ಮಲ್ಲನಂಥವರಾ॥**
**ಫಳವು ಕಳೆದಿಲ್ಲಿನ್ನು ಭಿಕ್ಷೆಗೆ। ಛಲವು ಸಲದೆಂದೆನಲು ಶಂಕರ।**
**ಅಳಿದನ್ನೈ ದಯೆಯೆಂಬ ಭಾವವ ದೈತ್ಯನೆದುರಿನಲಿ ।೯॥**

**ಜರಿದ ನುಡಿಗಳ ತಾಳಿ ಭೈರವ । ನುರುತರದ ಗದೆಯೆತ್ತಿ ಕ್ರೋಧದಿ।**
**ಧರಿಸು ಶಿರದಲ್ಲೆನುತ ಹಣಿದನು ಲೋಹಭಾರದಲಿ॥**
**ಅರಿವುದಪ್ಪುತ ನೆಲಕೆ ಬಿದ್ದರು। ಮರುಕ್ಷಣದಿ ಮೇಲೆದ್ದ ರಕ್ಕಸ।**
**ತರಿದನಾಗದೆ ಖಡುಗದಿಂದಲಿ ಮತ್ತೆ ಫಲ್ಗಡಿದು॥೧೦॥**

**ಇಕ್ಕಿದನು ಜಂಭೆಯಲಿ ಮುಕುಟಕೆ। ಚಿಕ್ಕೆ ಸುರಿದಂತಾಯ್ತು ಸಾಸಿರ।**
**ಮಿಕ್ಕ ಮೆಳೆಬಿಲ್ ಮೂಡಿ ಗೋಚರಿಸಿದವು ನಭದೊಳಗೆ॥**
**ಕಕ್ಕುಲಾತೆಯನಳಿದ ಶಂಕರ। ತೆಕ್ಕೆ ಬೀಳುತಲೆತ್ತಿ ದೈತ್ಯನ।**
**ಲೆತ್ತಿ ತೂರಿದ ನಭಕೆ ಹಾಳಾಗೆನುತ ಶಪಿಸುತ್ತ ॥೧೧॥**

ಶಬ್ದಾರ್ಥ :- ಒಲುಮೆಯಿಂ = ಪ್ರೀತಿಯಿಂದ; ಒಲಿದು = ಮೆಚ್ಚಿ; ಉರುತರ = ಭಯಂಕರ: ಪಲ್ಗಡಿದು = ಹಲ್ಲು ಕಡಿದು; ಮಳೆಬಿಲ್ = ಕಾಮನಬಿಲ್ಲು; ಗೋಚರಿಸು = ಕಾಣು; ನಭದೊಳಗೆ = ಆಕಾಶದೊಳಗೆ.

ಭಾವಾರ್ಥ :- ಎಲೋ ಶಿವನೇ ! ನೀನು ಪ್ರೀತಿಯಿಂದ ಹೋಗಿ ಮಲ್ಲ ಚಕ್ರವರ್ತಿಯ ಹತ್ತಿರ ಭಿಕ್ಷೆ ಬೇಡು! ಆತ ನಿಶ್ಚಯವಾಗಿಯೂ ನಿನಗೆ ಪ್ರಾಣದಾನ ಮಾಡುತ್ತಾನೆ. ದಾನ ಮಾಡುವವದರಲ್ಲಾಗಲೀ, ಕ್ಷಮೆದೋರುವವದರಲ್ಲಾಗಲೀ, ಮಲ್ಲ ಭೂಪತಿಗೆ ಸರಿಯಾದ ದಾನಿಗಳನ್ನು ನಾನು ಇದುವರೆಗೂ ಕಂಡಿಲ್ಲ. ಈಗಲೂ ಇನ್ನೂ ಕಾಲ ಮಿಂಚಿಲ್ಲ; ಬೇಗ ಹೋಗು. ಭಿಕ್ಷುಕರಾದವರಿಗೆ ಹಟಮಾರಿತನ ಎಂದೆಂದಿಗೂ ಒಳ್ಳೇದಲ್ಲ'' ಎಂದು ಮಣಿಕ ದೈತ್ಯನು ಹೀನ ನುಡಿಗಳನ್ನಾಡಿದ ತಕ್ಷಣವೇ, ಶಿವನು ಆ ದೈತ್ಯನ ಬಗೆಯಲ್ಲಿದ್ದ ದಯಾ ಬುದ್ಧಿಯನ್ನು ಹರಿದೊಗೆದನು. ಮತ್ತೂ ಭಯಂಕರವಾದ ತನ್ನ ಗದೆಯನ್ನೆತ್ತಿ ದೈತ್ಯನ ಶಿರೋಭಾಗಕ್ಕೆ ಅಪ್ಪಳಿಸುತ್ತ ''ಹಾಳಾಗಿ ಹೋಗು'' ಎಂದು ಶಪಿಸಿದನು. ಆ ಗದಾಪ್ರಹಾರದಿಂದ ಮಣಿಕಾಸುರನು ಅರಿವು ತಪ್ಪಿ ನೆಲಕ್ಕೆ ಕುಸಿದನು. ಮರುಕ್ಷಣದಲ್ಲಿಯೇ ಮತ್ತೆ ಚೇತರಿಸಿಕೊಂಡು ಶಿವನ ಗದೆಯನ್ನು ಖಡ್ಗದಿಂದ ತರಿದು ಹಾಕಿದನು. ಮತ್ತೂ ಹದನವಾಗಿದ್ದ ಕಿರುಗತ್ತಿಯೊಂದನ್ನೆತ್ತಿ ಶಿವನ ಕಿರೀಟಕ್ಕೆ ಹಲ್ಲುಕಡಿಯುತ್ತ ಪ್ರಹಾರ ಮಾಡಿದನು. ಆ ಹೊಡೆತದಿಂದ ಶಿವನ ಮಣಿ ಮುಕುಟದಲ್ಲಿದ್ದ ಸಹಸ್ರಾರು ರತ್ನಗಳು, ನಕ್ಷತ್ರ ದೋಪಾದಿಯಲ್ಲಿ ಸಿಡಿದವು. ಅದರಿಂದಾಗಿ ಆಕಾಶದಲ್ಲಿ ಏಕಕಾಲಕ್ಕೆ ಸಹಸ್ರಾರು ಸಂಖ್ಯೆಯ ಇಂದ್ರ ಧನುಸ್ಸುಗಳು ಗೋಚರಿಸಿದವು. ಕೂಡಲೆ ಸಿಟ್ಟಿಗೆದ್ದ ಶಿವನು, ಮಣಿಕಾಸುರನಿಗೆ ತೆಕ್ಕೆ ಬಿದ್ದು, ನೆಲಕ್ಕೆ ಕೆಡವಿ ತಿಕ್ಕಿದನು. ಮತ್ತೂ ತನ್ನ ಪರಮಶಕ್ತಿಯಿಂದ ಆ ದೈತ್ಯನನ್ನು ಆಕಾಶಕ್ಕೆ ತೂರಿ ದನು.

ಹಕ್ಕಿಯಾಗುತ ಹಾರಿದನು ಖಲ । ಕುಕ್ಕಿದನು ಶರಭಾಗಿ ಶಿವಭುಜ ।
ದಿಕ್ಕು ದಿಕ್ಕಲಿನಿಂದ ದಿವಿಜರ ಪಂಜರದಿ ತರಿದಾ ॥
ಇಕ್ಕಿದರು ಬೊಬ್ಬೆಯನು ಸುರಗಣ । ಕಕ್ಕವಿಕ್ಕ್ಯಾಗುತ್ತ ಭಯದಲಿ।
ನಕ್ಕು ನಲಿಯುತೆ ಮತ್ತೆ ದೈತ್ಯನು ನಿಂದ ಶಿವನೆದುರು ॥೧೨॥

ಪಾಣಿಯಲಿ ಧನು ಧರಿಸಿ ಸೂತ್ರಕೆ । ಸಾಣಿ ಹಿಡಿದಂಬುಗಳ ಜೋಡಿಸಿ ।
ಮಾಣಿದಾ ವಿಷಯಗಳ ಯೋಗಿಯು ಬಿಸುಟುವಂದದಲೀ॥
ಕೇಣಗೊಳ್ಳುತಲೆಸೆದ ಕೆಡುಕನ। ಕ್ಷೋಣಿ ಸಂಖ್ಯೆಯ ಮಿಕ್ಕುವಾಯುಧ ।
ಬಾಣಗಳನೆಲ್ಲವನು ನುಂಗಿದ ಶಿವನು ಹೂಂಕರಿಸಿ ॥೧೩॥

ಹಿಂದೆ ಕಾದಿದ ದೈತ್ಯ ನಿಕರಕೆ । ತಂದನೀತನು ಹೇಡಿ ಬಿರುದನು।
ಕಂದುತನ ತಾನಿಲ್ಲ ಸಾಹಸ ಕೆನುತ ಸುರನಿಕರಾ ॥
ಬಂದುದೇ ವಿಪರೀತ ಶಿವ ಶಿವ । ಎಂದು ಮರುಗುತೆ ಭಯದ ಭಾವದ।
ಬಂಧಿಯಲಿ ಸಿಲುಕಿತ್ತು ಸುರಗಣವಂದು ರಣದೊಳಗೆ ॥೧೪॥

**ಕೇಕೆ ಹಾಕುತೆ ಮೀಸೆದಿರುವುತೆ । ನೂಕುತಿರ್ದನು ಬಾಣ ಮಳೆಗಳ।**
**ಸಾಕು ಬೇಕೆಂಬವರ ಕಾಣೆನು ಯುದ್ಧರಂಗದೊಳು॥**
**ನಾಕಜರು ನಡುಗಿದರು ಪಾರ್ವತಿ । ಸೋಕಿಕೊಂಡಳು ಶಿವನ ಸರಸತಿ।**
**ಸಾಕು ಮಾಡೈ ಸೃಷ್ಟಿ ಕಾರ್ಯವ ನೆಂದಳಾ ಪತಿಗೆ ॥೧೫॥**

ಶಬ್ದಾರ್ಥ:- ಖಲ = ದೈತ್ಯ; ಬೊಬ್ಬೆ = ಶಂಖವಾದ್ಯ; ಸುರಗಣ = ದೇವತೆಗಳ ಗುಂಪು; ಅಂಬು = ಬಾಣ; ಮಾಣದ = ಕೆಟ್ಟ; ಬಿಸುಟು = ಎಸೆ; ಕೇಣಗೊಳ್ಳುತ = ಸಿಟ್ಟಿನಿಂದ; ನಾಕಜರು = ದೇವತೆಗಳು; ಸೋಕಿಕೊಳ್ಳು = ಅಪ್ಪಿ ಕೊಳ್ಳು; ಸರಸತಿ = ಶಾರದೆ; ಶರಭ = ಸಿಂಹದ ಬೇಟೆಯನ್ನಾಡುವ ಕ್ರೂರ ಪಕ್ಷಿ.

ಭಾವಾರ್ಥ:- ಶಿವನಿಂದ ಗಗನಕ್ಕೆ ತೂರಲ್ಪಟ್ಟ ಆ ದೈತ್ಯನು, ಒಮ್ಮಿಂದೊಮ್ಮಿಲೇ ಶರಭ ಪಕ್ಷಿಯಾಗಿ ಆಕಾಶದಲ್ಲಿ ಹಾರಾಡತೊಡಗಿದನು. ಮತ್ತೂ ತನ್ನ ತೀಕ್ಷ್ಣವಾದ ಕೊಕ್ಕಿನಿಂದ ಶಿವನ ಭುಜವನ್ನು ಕುಕ್ಕಿ ನೋಯಿಸಿದನು. ಸುತ್ತಲೂ ನಿಂತು ನೋಡುತ್ತಿದ್ದ ದೇವತೆಗಳನ್ನು ತನ್ನ ಕ್ರೂರ ಪಂಜರದಿಂದ ಇರಿಯತೊಡಗಿದನು. ಅಸುರನ ಈ ದಾಳಿಯಿಂದ ಕಕ್ಕಾವಿಕ್ಕಿಯಾದ ದೇವತೆಗಳು, ಭಯದಿಂದ ಶಂಖವಾದ್ಯ ಮಾಡತೊಡಗಿದರು. ಅದನ್ನೆಲ್ಲ ನೋಡಿ ನಗುತ್ತ ದೈತ್ಯ ಮಣಿಕಾಸುರನು, ಮತ್ತೆ ದೈತ್ಯ ರೂಪತಾಳಿ ಶಿವನೆದುರು ಬಂದು ನಿಂತನು. ತನ್ನ ಧನುಸ್ಸಿಗೆ ಸಾಣೆಹಿಡಿದ ಕ್ರೂರ ಭಾಣಗಳನ್ನು ಹೆದೆಯೇರಿಸಿ, ಅನಿತ್ಯವಾದ ವಿಷಯ ಸುಖಗಳನ್ನು ಸಮರ್ಥಯೋಗಿಯು ಹೊರತಳ್ಳುವಂತೆ ಹೂಡಿ ಹೊಡೆದನು, ಹೀಗೆ ಆ ರಾಕ್ಷಸನಿಂದ ತನ್ನೆಡೆಗೆ ತೂರಲ್ಪಟ್ಟ ಅಸಂಖ್ಯ ಆಯುಧಗಳನ್ನೂ, ಸಿಟ್ಟಿನಿಂದ ಬಿಸುಟಿದ ಕ್ರೂರ ಬಾಣಗಳನ್ನೂ, ಶಿವನು ಕೇವಲ ತನ್ನ ಹೂಂಕಾರ ಮಾತ್ರ ದಿಂದಲೇ ಭಸ್ಮೀಭೂತಗೊಳಿಸಿದನು.

''ಇದು ವರೆಗಿನ ದೇವ-ದಾನವರ ಯುದ್ಧದಲ್ಲಿ ಈ ಮೊದಲು ಹೋರಾಡಿ ಸತ್ತ ಅಸಂಖ್ಯಾತ ಶೂರರು, ಈ ಮಣಿಕಾಸುರನ ಸಾಹಸದೆದುರು ಹೇಡಿಗಳೆನಿಸಿ ಹೋದರು. ಇವನ ಶೌರ್ಯಕ್ಕೆ ಕಲಂಕವೆಂಬುದೇ ಇಲ್ಲದಂತಾಯಿತು, ಶಿವಶಿವಾ! ಹೀಗಾದರೆ ಮುಂದಿನ ಗತಿಯೇನು?'' ಎಂದು ಚಿಂತಿಸುತ್ತಾ ಆ ದೇವತೆಗಳ ಸಮೂಹವೆಲ್ಲ ದಂಗುಬಡಿದವರಂತೆ ನಿಂತುಕೊಂಡಿತ್ತು.

ದೈತ್ಯ ಮಣಿಕಾಸುರನು ಒಂದೇಸವನೆ ಕೇಕೆ ಹಾಕುತ್ತ, ಮೀಸೆ ತಿರುವುತ್ತ. ಅಸಂಖ್ಯಾತ ಬಾಣಗಳಿಂದ ಸತತವಾಗಿ ಮಳೆಗರೆಯುತ್ತಲೇ ಇದ್ದನು. ಆತನ ಹೋರಾಟಕ್ಕೆ ''ಸಾಕು,ಬೇಕು,'' ಎಂಬ ಭಾವನೆಗಳೇ ಇರಲಿಲ್ಲ. ಆ ಘನ ಘೋರವಾದ ಯುದ್ಧದಿಂದ ತಲ್ಲಣಗೊಂಡ ದೇವತೆಗಳು, ಗದಗದನೇ ನಡುಗಿ ಹೋದರು. ಪಾರ್ವತಿಯು ಭೀತಿಯಿಂದ ಶಿವನನ್ನು ಅಪ್ಪಿಕೊಂಡಳು, ಸರಸ್ವತಿಯು ತನ್ನ ಪತಿಯಾದ ಬ್ರಹ್ಮನನ್ನು ಕುರಿತು, ''ದಯಮಾಡಿ ಈ ಸೃಷ್ಟಿ ಕಾರ್ಯವನ್ನು ನಿಲ್ಲಿಸಿ ಬಿಡು'' ಎಂದು ವಿನಂತಿಸಿಕೊಂಡಳು.

ಮತ್ತೆ ಹರ ಭೇದಿಸಿದ ಶೂಲದಿ। ಒತ್ತಿಹೃದಯಕೆ ಬೆನ್ನ ದಾಂಟಿಸೆ।
ಸತ್ತೆ ತಾನೆಂದೆನುತ ಉಗ್ರನು ಘೋರ ಹಯವಾದಾ॥
ಇತ್ತು ಇಳೆನುಡುಗಿಸುವ ಹೇಷಣೆ। ಒತ್ತಿ ಬರಲಾ ಕಾಡುಗುದುರೆಯ।
ಕತ್ತು ಕತ್ತರಿಸಿದನು ಖಡುಗದಿ ಕೃತ್ತಿ ವಾಸಕನೂ ॥೧೬॥

ಮತ್ತ ಗಜ ಕೇಸರಿಗಳಾಗುತ। ಕತ್ತೆಕಿರುಬಾದಿಗಳ ರೂಪವ ।
ಹೊತ್ತು ಹೆದರಿಸಲೆತ್ನಿಸಿದನಾ ಕ್ರೂರ ಮಾಯಾವಿ ॥
ಕತ್ತ ಕತ್ತರಿಸಿದನು ಪ್ರತಿ ಸಲ । ಸತ್ತು ಬದುಕಿದ ಕ್ರೂರ ದೈತ್ಯನು।
ಉತ್ತಮಾಶ್ವವನೇರಿ ಖಡುಗವ ತಿರುಗಿಸುತ ಬಂದಾ ॥೧೭॥

ಕುತ್ತಿಗೆಯ ಆ ರುಂಡಮಾಲೆಯ । ಮತ್ತೆ ಭುಜದೊಳಗಿರ್ದ ಉರಗರ।
ಕತ್ತರಿಸಿ ನೆಲಕೊಗೆದು ನಕ್ಕನು ಮಣಿಕ ದೈತ್ಯೇಂದ್ರಾ॥
ಪಿತ್ತವೇರಿತು ಶಿರಕೆ ಶಿವನಿಗೆ। ಮತ್ತೆ ಬ್ರಹ್ಮಾಸ್ತ್ರವ ಪಿನಾಕಕೆ।
ಒತ್ತಿಬಿಸುಟಲು ಬೆಂಕಿಯುಗುಳುತ ಬಂದಿತಾ ಶರವು ॥೧೮॥

**ಘೋರ ಉರಿಜಳ ತಾಳಲಾರದೆ । ಭಾರಿ ತಾಪವ ತಡೆಯಲಾರದೆ ।**
**ಸಾರಿ ಹೊಕ್ಕನು ತುಂಗೆ ಮಡುವಿಗೆ ತುರಗ ಸಹಿತಾಗೀ॥**
**ವೀರ ಮಣಿಕಾಸುರನು ನದಿಯಲಿ। ಸಾರಿ ಹೊಕ್ಕಾ ಮಡುವು ಮಂಗಲ।**
**ಕಾರಿ ಸದುಫಲವೀವ ತುರಗದ ತೀರ್ಥವೆಂದಾಯ್ತು ॥೯॥**

ಶಬ್ದಾರ್ಥ :- ಛೇದಿಸು = ಕಡಿ; ಹೇಷಣೆ = ಕುದುರೆಯ ಹೇಕರಿಕೆ; ಕೃತ್ತಿವಾಸಕ = ಸ್ಮಶಾನವಾಸಿಯಾದ ಶಿವ; ಕೇಸರಿ= ಸಿಂಹ; ಕತ್ತೆಕಿರುಬ = ಒಂದು ಕ್ರೂರಪ್ರಾಣಿ; ಮಾಯಾವಿ = ಮಾಂತ್ರಿಕ; ಉರಗ = ಸರ್ಪ; ಪಿನಾಕ = ಶಿವನ ಧನುಸ್ಸು; ತೀರ್ಥ = ಪುಣ್ಯೋದಕ ಸದುಫಲವೀವ = ಒಳ್ಳೇಫಲದಾಯಕವಾದ; ತುರಗತೀರ್ಥ = ತುಂಗಾನದಿಯ ಒಂದು ತೀರ್ಥ.

ಭಾವಾರ್ಥ :- ಶಿವನು ತನ್ನ ತ್ರಿಶೂಲವನ್ನು ಮಣಿಕಾಸುರನ ಎದೆಗೆ ಚುಚ್ಚಿ, ಬೆನ್ನಲ್ಲಿ ಪಾರಾಗುವಂತೆ ಇರಿದನು. ಆಗ ಆ ರಕ್ಕಸನು ಸತ್ತೆನೆಂಮ ಭಯದಿಂದ ಒಮ್ಮಿಂದೊಮ್ಮಿಲೇ ತನ್ನ ಮಾಯಾಶಕ್ತಿಯಿಂದ ಘನಘೋರವಾದ ಕಾಡುಗುದುರೆಯಾಗಿ ಬಂದು, ಶಿವನೆದುರು ನಿಂತು ಭೂಮಿಯು ನಡುಗುವಂತೆ ಹೇಷಾರವ ಗೈದನು. ಆಗ ಶಿವನು ತಕ್ಷಣವೇ ತನ್ನ ಖಡ್ಗದಿಂದ ಆ ಕಾಡುಗುದುರೆಯ ಕುತ್ತಿಗೆಯನ್ನು ಕತ್ತರಿಸಿಹಾಕಿದನು. ರಾಕ್ಷಸನು ಸಿಂಹವಾಗಿ, ಆನೆಯಾಗಿ, ಕತ್ತೆಕಿರುಬಾದಿಗಳ ಅನೇಕ ರೂಪಗಳನ್ನು ತಾಳುತ್ತ ಶಿವನನ್ನು ಅಂಜಿಸುವಸ ಪ್ರಯತ್ನ ಮಾಡಿದನು. ಆದರೆ ದೈತ್ಯನು ಹೊಸ ಹೊಸ ರೂಪ ತಾಳಿದಂತೆಲ್ಲ, ಶಿವನು ಪ್ರತಿಸಲವೂ ಆತನನ್ನು ಸಂಹಾರ ಮಾಡತೊಡಗಿದನು. ಕೊನೆಗೆ ಮಣಿಕಾಸುರನು ಒಂದು ಉತ್ತಮವಾದ ಕುದುರೆಯನ್ನೇರಿಕೊಂಡು, ಶಿವನ ಸಮ್ಮುಖಕ್ಕೆ ಖಡ್ಗ ತಿರುಗಿಸುತ್ತಾ ಬಂದು, ತನ್ನ ಖಡ್ಗದಿಂದ ಶಿವನ ಕೊರಳೊಳಗಿದ್ದ ರುಂಡ ಮಾಲೆಯನ್ನೂ ಆತನ ಭುಜಗಳಿಗೆ ಅಲಂಕಾರಗಳಾಗಿದ್ದ ಸರ್ಪಗಳನ್ನೂ ಕತ್ತರಿಸಿ ನೆಲಕ್ಕೊಗೆದು ಗಹಗಹಿಸಿ ನಗತೊಡಗಿದನು. ಈಗ ಮಾತ್ರ ಶಿವನಿಗೆ ಸಂಯಮನ ಮೀರಿದಂತಾಯಿತು. ಆತನು ಕ್ರೋಧದಿಂದ ತನ್ನ ಪಿನಾಕವೆಂಬ ಧನುಸ್ಸನ್ನೆತ್ತಿಕೊಂಡು, ಅದಕ್ಕೆ ಬ್ರಹ್ಮಾಸ್ತ್ರವನ್ನು ಹೂಡಿ ರಾಕ್ಷಸನ ಮೇಲೆ ಪ್ರಹಾರಮಾಡಿದನು. ಆ ಭೀಕರ ಬ್ರಹ್ಮಾಸ್ತ್ರವು ಉರಿಯನ್ನುಗುಳುತ್ತ ರಾಕ್ಷಸನ ಕಡೆಗೆ ಧಾವಿಸಿ ಬರತೊಡಗಿತು. ಆ ಭೀಕರ ಅಸ್ತ್ರವ ತಾಪ, ಉರಿಜಳಗಳನ್ನು ತಾಳಲಾರದೇ, ಮಣಿಕಾಸುರನು ಅದರ ಉಪಶಮನಕ್ಕಾಗಿ, ಕುದುರೆ ಸಮೇತವಾಗಿ ತುಂಗಭದ್ರಾ ನದಿಯ ಒಂದು ಮಡುವಿನಲ್ಲಿ ದುಮುಕಿಬಿಟ್ಟನು. ಆ ಮುಡುವೇ ಈಗ ಭಕ್ತರಿಗೆ ಸತ್ಫಲಗಳನ್ನು ಕೊಡುವಂಥಾ ತುರಗ ತೀರ್ಥವಾಗಿ ಪರಿಣಮಿಸಿದೆ.

ಬಂದನಾ ಮುಡುವಿಂದಲೇಳುತೆ । ಹೊಂದಿಸುತ ನಾರಾಚ ವರ್ಷವ ।
ನಿಂದು ಶೇಖರ ನಂಗ ಅಂಗದಿ ಬಿಸುಟ ಬಲವಾಗಿ॥
ಚಂದ್ರಮೌಳಿಯ ಮೌಳಿಯೊಳಗಿರು। ವಿಂದುವನು ನೋಯಿಸಿಲು ಜಡೆಯೊಳ।
ಗಂದು ಮರೆಯಾಗಿರ್ದತಾಳದೆ ಬಾಣ ಘಾತಗಳಾ೨೦।

ಸಂದು ಸಂದಲಿ ಸಿಕ್ಕ ಬಾಣದಿ । ನೊಂದನಾ ಶಿವ ಮುನಿದುಶೂಲದಿ।
ಹಂದಿಯನು ಕೊಲುವಂತೆ ಇರಿದನು ತುಂಡುತುಂಡಾಗಿ॥
ಹಿಂದಿನಾ ಜನುಮಗಳ ಕರ್ಮದ।ಲಂದು ಬೀಳಲು ಭುವಿಗೆ ರಕ್ಕಸ।
ಚಂದ್ರಮೌಳಿಯು ಒದೆಯಲೆಂದೆತ್ತಿದನು ಪಾದವನು ।೨೧॥

ಬಂದಿತಾಗಲೆ ಪೂರ್ವಜನ್ಮದಿ । ಸಂದ ಕರ್ಮಸ್ಮೃತಿಯನೆನಪಿಸಿ।
ಸ್ಕಂದನಪ್ಪನ ಪಾದ ಶಿರದಲ್ಲಾಂತು ಮಣಿ ನುಡಿದಾ॥
ನಿಂದಿರ್ಕೈ ಹರ ಎಲ್ಲಿ ಪೋಗುವಿ।ಬಂಧಿಸಿಹೆನಾ ಭಕ್ತಿ ಪಾಶದಿ ।
ಸಂದಿತಲ್ಲವೆ ಶೌರ್ಯನಾ ರಣರಂಗದಲಿ ತೋರ್ದಾ ।೨೨॥

**ವೈರ ಭಕ್ತಿಯ ಸಲಿಸಿ ಅಂತ್ಯದಿ। ಚಾರು ಚರಣವ ಪಿಡಿದ ಮಣಿಕನ ।**
**ಮಾಲಹರ ಹರಸಿದನು ಜೀವನ್ಮುಕ್ತಿ ಪಡೆಯೆನುತಾ॥**
**ಭೂರಿ ಸಂತಸಗೊಂಡೆ ವೀರನೆ। ತೋರಿದಾ ಸಾಹಸಕೆ ಮೆಚ್ಚಿದೆ ।**
**ಮೇರುವೆನಿಸಲಿ ಜಗದಿ ಈ ಗಿರಿ ಎಂದು ಹರಸಿದನು ।೨೩॥**

ಶಬ್ದಾರ್ಥ :- ನಾರಾಚ = ಉಕ್ಕಿನ ಬಾಣ; ವರ್ಷ = ಮಳೆ; ಇಂದುಶೇಖರ = ಶಿವ; ಇಂದು = ಚಂದ್ರ; ಸ್ಕಂದನಪ್ಪ = ಶಿವ; ಶಿರದಲ್ಲಾಂತು = ಸಿರಸ್ಸಿದಲ್ಲಿ ಧಾರಣೆ ಮಾಡಿ; ಪಾಶ = ಹಗ್ಗ; ಮೇರು = ಶ್ರೇಷ್ಠ; ಭೂರಿ = ಬಹಳ; ಗಿರಿ = ಪರ್ವತ; ಮಾರಹರ = ಶಿವ;

ಭಾವಾರ್ಥ :- ಬಳಿಕ ಮಣಿಕ ದೈತ್ಯನು ಆ ಮಡುವಿನಿಂದೆದ್ದು ಬಂದು ತನ್ನ ಧನುಸ್ಸಿಗೆ ಉಕ್ಕಿನಿಂದ ಸಿದ್ಧವಾದ ಅನೇಕ ಬಾಣಗಳನ್ನು ಹೂಡಿ ಶಿವನ ಮೇಲೆ ಮಳೆಗರೆದನು. ಆ ಬಾಣಗಳು ಶಿವನ ಪ್ರತಿಯೊಂದು ಅಂಗಾಂಗಗಳಲ್ಲಿ ನಟ್ಟು ಶಿವನನ್ನು ಬಾಧೆಗೊಳಿಸಿದವು. ಶಿವನ ಜಡೆಯಲ್ಲಿದ್ದ ಚಂದ್ರನು ಆ ಬಾಣಗಳ ಆಘಾತವನ್ನು ತಾಳಲಾರದೇ, ಕೂದಲಿನ ಮರೆಯಲ್ಲಿ ಅಡಗಿಕೊಂಡನು. ಪ್ರತಿಯೊಂದು ಅಂಗದಲ್ಲಿಯೂ ನಟ್ಟ ಬಾಣಗಳ ನೋವಿನಿಂದ ಶಿವನು ಸಿಟ್ಟಿಗೆದ್ದನು. ಕೊನೆಗೆ ತನ್ನ ಅತೀ ಪ್ರಖರವಾದ ಶೂಲವನ್ನೆತ್ತಿ, ಕಾಡುಹಂದಿಯನ್ನು ಬೇಡರು ಹೊಡೆದು ಕೊಲ್ಲುವಂತೆ, ಶೂಲದಿಂದ ತುಂಡು ತುಂಡು ಮಾಡಿಬಿಟ್ಟನು. ಪೂರ್ವಜನ್ಮದ ಕರ್ಮಕ್ಕನುಸಾರವಾಗಿ, ಮಣಿಕದೈತ್ಯನು ನೆಲಕ್ಕೆ ಬಿದ್ದನು. ಶಿವನು ಸಿಟ್ಟಿನಿಂದ ಆತನನ್ನು ಒದೆಯಲೆಂದು ಬಲಗಾಲನ್ನೆತ್ತಿದನು. ತಕ್ಷಣವೇ ಮಣಿಕಾಸುರನಿಗೆ ಪೂರ್ವಜನ್ಮಾಂತರಗಳ ಜ್ಞಾನ ಉಂಟಾಯಿತು, ಆತನು ತಕ್ಷಣವೇ ಒದೆಯಲೆಂದೆತ್ತಿದ್ದ ಶಿವನ ಪಾದವನ್ನು ಗಟ್ಟಿಯಾಗಿ ಹಿಡಿದುಕೊಂಡು, ತನ್ನ ಮಸ್ತಕದಲ್ಲಿರಿಸಿಕೊಂಡನು. ಮತ್ತೂ ಶಿವನನ್ನು ಕುರಿತು, "ಪ್ರಭೂ! ಪರಮಾತ್ಮಾ! ನೀನು ಎಲ್ಲಿ ಹೋಗುವಿ? ನಿಲ್ಲು, ನಾನು ನಿನ್ನನ್ನು ಭಕ್ತಿಯೆಂಬ ಪಾಶದಿಂದ ಬಂಧಿಸಿದ್ದೇನೆ. ವಿರೋಧ ಭಕ್ತಿಯಿಂದ ನಿನ್ನನ್ನು ಮೆಚ್ಚಿಸಿ ಕೃತಾರ್ಥನಾಗಿದ್ದೇನೆ. ಪರಮಾತ್ಮಾऽ!... ನಾನು ರಣರಂಗದಲ್ಲಿ ನಿನ್ನೊಂದಿಗೆ ಕಾದಾಡಿದ ಶೌರ್ಯವು, ನಿನ್ನ ಮನಕ್ಕೆ ಮೆಚ್ಚುಗೆಯಾಯಿತಲ್ಲವೇ? ಜನ್ಮಾಂತರಗಳಿಂದ ನಾನು ವಿರೋಧ ಭಕ್ತಿಯನ್ನೇ ಸಾಧಿಸುತ್ತ ಬಂದದ್ದು

ಸಾರ್ಥಕವಾಯಿತೇ ಪ್ರಭೂ?'' ಎಂದು ಪ್ರಶ್ನೆ ಮಾಡಿದನು. ಆಗ ಶಿವನು ಪ್ರಸನ್ನನಾಗಿ, ''ಭಕ್ತಾ ಮಣಿಕಾಸುರಾ! ಜೀವನದ ಕೊನೆಯವರೆಗೂ ವಿರೋಧ ಭಕ್ತಿ ತೋರಿಸಿ, ಅಂತ್ಯದಲ್ಲಿ ನನ್ನ ಪಾದ ಹಿಡಿದಿರುವಿ, ನಿನ್ನ ವಿರೋಧ ಭಕ್ತಿಯಿಂದ ನಾನು ಸಂಪ್ರೀತನಾಗಿದ್ದೇನೆ. ರಣರಂಗದಲ್ಲಿ ನೀನು ನನ್ನೊಂದಿಗೆ ಕಾದಾಡಿ ತೋರಿಸಿದ ಶೌರ್ಯವು, ನನ್ನ ಮನಕ್ಕೆ ಮೆಚ್ಚುಗೆಯಾಗಿದೆ. ನೀನು ನನ್ನೊಂದಿಗೆ ವೀರ ತನದಿಂದ ಕಾದಾಡಿದ ಈ ಗಿರಿ ಪ್ರದೇಶವು, ಜಗತ್ತಿನ ಅಂತ್ಯಂತ ಪುಣ್ಯಕರ ಕ್ಷೇತ್ರಗಳಲ್ಲಿ ಒಂದಾಗಿ ಪರಿಣಮಿಸಲಿ!''... ಎಂದು ಹರಸಿದನು.

**ಇತಿ ಸಾಹಿತ್ಯರತ್ನಾಕರ ಶ್ರೀ ನಿಂಗಭಟ್. ಜೋಶಿ ವಿರಚಿತ ಶ್ರೀ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್ ಮಣಿಕಾಸುರ ವಧೋ ನಾಮಕ ಸಪ್ತದಶೋ ಧ್ಯಾಯಃ ||**

**ಅಂತು ಅಧ್ಯಾಯ ೧೭ ಕ್ಕಂ,ಪದ ೨೩ ಕ್ಕಂ ಒಟ್ಟು ಪದ ೨೭೪ಕ್ಕಂ ಮಂಗಲ ಮಸ್ತು!...**

**ಏಳು ಕೋಟಿಗ! ಏಳುಕೋಟಿಗ!!... ಏಳು ಕೋಟಿಗೋ !!!... ಸಾಂಗಬಲೋ!..**

*****

# ಅಧ್ಯಾಯ - ೧೮ ಅಷ್ಟದಶೋಧ್ಯಾಯ : ||
## ಮಣಿಕಾಸುರ ಕೃತ ಶಿವಸ್ತೋತ್ರ.

ಸೂಚನೆ:-

ಮಣಿಕ ದೈತ್ಯನು ಮರಣ ಸಮಯದಿ । ತಣಿಸಲಾ ಶಿವನನ್ನು ಸ್ತೋತ್ರದಿ ।
ಫಣಿಗಳಾಭರಣಿತ್ತನವನಿಗೆ ಸಕಳ ಇಷ್ಟಾರ್ಥಾ ||

(ಸೂಚನಾ ಪದ್ಯದ ಅರ್ಥ)

''ಮಣಿಕಾಸುರನೆಂಬ ಆ ದೈತ್ಯನು ತನ್ನ ಮರಣದ ಸಮಯದಲ್ಲಿ ಶಿವನ ಸ್ತೋತ್ರ ಮಾಡಿ ಮೆಚ್ಚಿ ಸಲಾಗಿ, ಸಂಪ್ರೀತಗೊಂಡ ಪರಮಾತ್ಮನು, ಆ ಭಕ್ತ ಮಣಿಕಾಸುರನಿಗೆ ಸಕಲ ಇಷ್ಟಾರ್ಥಗಳನ್ನೂ, ಮೋಕ್ಷ ಮದವಿಯನ್ನೂ, ಇತ್ತು ಸಂಪ್ರೀತಗೊಳಿಸಿದನೆಂಬುದನ್ನು ಸೂಚಿಸುತ್ತಾ'' ಕವಿಯು ಮುಂದಿನ ಕಥಾಭಾಗವನ್ನು ಈ ರೀತಿಯಾಗಿ ವಿವರಿಸ್ತಾ ಇದ್ದಾನೆ.

ನಿಲ್ಲು ಶಂಭುವೆ ಎಲ್ಲಿ ಪೋಗುವಿ। ಫುಲ್ಲಲೋಚನ ನ್ಯಾಯವೇ ಇದು ।
ಸೊಲ್ಲು ಸೊಲ್ಲಿಗು ವೈರ ಭಕುತಿಯ ಸಲಿಸಿ ಬಂದಿಹೆನೂ ||
ಅಲ್ಲಿಗಿಲ್ಲಿಗೆ ಹೋಗೆ ಬಿಡೆ ನಾಂ। ಇಲ್ಲಿ ಮಸ್ತಕದಿರಿಸು ಪಾದವ।
ಕಲ್ಲಿ ನಾಥಾ ನಿನ್ನ ಸ್ತೋತ್ರವ ಗೈವೆ ಅವಧರಿಸು ।।೧।।

ಶಾಂತನ್ನೆ ನೀ ಶುದ್ಧ ಮೂರ್ತಿಯು। ಕಾಂತೆ ಕೈವಲ್ಯಳಿಗೆ ಅಧಿಪತಿ।
ಕಂತು ಹರ ಶಿವ ತ್ರಾಹಿ ತ್ರಾಹೀ ಎನುತ ಗೋಗರೆದು ॥
ಭ್ರಾಂತಿ ಬಿಡಿಸುತ ಪೊರೆಯೊ ಕರುಣಾ। ವಂತ ಕೊಡದಿರು ಅನ್ಯ ಜನುಮವ।
ಶಾಂತಿಯಿದೆ ತವ ಪದದಿ ಇಲ್ಲಿಯೆ ನನ್ನ ನೆಲೆಗೊಳಿಸು।೨।

ಚಿಂತಿತಾರ್ಥವನೀವ ಚಿನ್ಮಯ। ಅಂತ್ಯ ಆದಿಗಳಿರದ ಮುನಿಜನ।
ದಂತರಂಗ ಸುಖಾಸನಸ್ಥಿತ ಸಚ್ಚಿದಾನಂದಾ॥
ಭ್ರಾಂತಿಯಿಂ ತಿರುಗಿದೆನು ನಾನಾ। ಹಂತ ಹಂತದ ಯೋನಿಗಿಳಿಯುತ।
ಕಂತು ಹರ ಕ್ಷಮೆಗೈದು ರಕ್ಷಿಸುಯನ್ನನನವರತಾ।೩॥

ನಿತ್ಯ ನಿರ್ಗುಣ ನಿಗಮಗೋಚರ । ಸತ್ಯ ಶಾಶ್ವತ ಸುರ ಸುಪೂಜಿತ।
ಭೃತ್ಯ ಭಯ ಸಂಹಾರ ಶಂಕರ ಸರ್ವಸರ್ವಜ್ಞಾ॥
ಪ್ರತ್ಯಗಾತ್ಮ ಪರಾತ್ಮ ಸೋಮಾ। ದಿತ್ಯ ಪಾವಕನೇತ್ರ, ಮುನಿಜನ।
ನುತ್ಯ ನಿತ್ಯಾನಂದ ದಾಯಕ ಸಲಹು ಎಂತೆಂದಾ।೪॥

**ಭಕುತ ವತ್ಸಲ ಭಯ ನಿವಾರಕ। ಮುಕುತಿ ಮೋಕ್ಷಕ್ಕೊಡೆಯ ಶಿವ ಶಿವ ।**
**ಶಕುತಿ ಸೋತಿದೆ ಜನುಮವೆತ್ತಲು ನೀಡು ಮುಕುತಿಯನು॥**
**ಸಕಳ ಬ್ರಹ್ಮಾಂಡಕ್ಕೆ ಆಧಿಪತಿ। ಶಕುತಿ ಶೌರ್ಯಗಳೆಲ್ಲ ಇದ್ದರು।**
**ಮುಕುತಿ ಸಾರವೆ ಇರದ ಈ ಸಂಸಾರ ನಿಸ್ಸಾರಾ ।೮॥**

ಶಬ್ದಾರ್ಥ :- ಮಸ್ತಕ = ತಲೆ; ಕಲ್ಲಿನಾಥ = ಶಿವ; ಅವಧರಿಸು = ಸ್ವೀಕಾರಮಾಡು; ಕೈವಲ್ಯಳು = ಜೀವನ್ಮುಕ್ತಿ ನೀಡುವ ಪಾರ್ವತಿ; ಕಂತುಹರ = ಕಾಮನನ್ನುಕೊಂದ ಶಿವ; ಕರುಣಾವಂತ = ಕರುಣೆಯುಳ್ಳವ; ಚಿಂತಿತಾರ್ಥವನೀವ = ಬೇಡಿದ್ದನ್ನು ಕೊಡುವಂಥಾ; ತವ = ನಿನ್ನ; ಅಂತ್ಯ = ಕೊನೆ; ಆದಿ = ಪ್ರಾರಂಭ; ಅಂತರಂಗ = ಒಳಭಾಗ; ಸುಖಾಸನಸ್ಥಿತ = ಸುಖಾಸನದಲ್ಲಿ ವಿರಮಿಸುವ; ಸಚ್ಚಿದಾನಂದ = ಸುಖವೆ ತಾನಾದ ಪರಮಾತ್ಮ; ಹಂತ ಹಂತದ = ತರತರದ; ಯೋನಿಗಿಳಿಯುತೆ = ಜನ್ಮತಾಳುತ್ತ; ಕಂತು = ಕಾಮ; ಅನವರತ = ಯಾವಾಗಲೂ; ನಿತ್ಯ = ಯಾವಾಗಲೂ ಇರುವಂಥದ್ದು; ನಿರ್ಗುಣ = ಗುಣಾತೀತ; ನಿಗಮ = ವೇದ; ಗೋಚರ = ಕಾಣಿಸುವಂಥ; ಸುರಸುಪೂಜಿತ = ದೇವತೆಗಳಿಂದ ವಂದ್ಯನಾದವ; ಭೃತ್ಯ = ಸೇವೆಮಾಡುವವ; ಶಂಕರ = ಶುಭವನ್ನುಂಟುಮಾಡುವವವ; ಭಯ ಸಂಹಾರ = ಭಯವನ್ನು ದೂರಮಾಡುವವ; ಸರ್ವ = ಶಿವ; ಸರ್ವಜ್ಞ = ಎಲ್ಲವನ್ನೂ ತಿಳಿದವ; ಸೋಮಾದಿತ್ಯ = ಸೂರ್ಯಚಂದ್ರರು; ಪಾವಕ = ಅಗ್ನಿ; ನುತ್ಯ = ಸ್ತುತಿಸಲ್ಪಡುವ; ನಿತ್ಯಾನಂದದಾಯಕ = ಸದಾಸುಖನೀಡುವ ಪರಮಾತ್ಮ ; ಭಕುತ ವತ್ಸಲ = ಭಕ್ತರಿಗೆ ಮಕ್ಕಳೋಪಾದಿಯಲ್ಲಿ ಸುಖಕೊಡುವ; ಅಧಿಪತಿ = ಒಡೆಯ; ಶಕುತಿ = ಶಕ್ತಿ; ನಿಸ್ಸಾರ = ರುಚಿಇಲ್ಲದ್ದು; ಸಾರ = ತಿರುಳು.

ಭಾವಾರ್ಥ :- ಮಣಿಕಾಸುರನು ಭಕ್ತಿಯಿಂದ ಶಿವಚರಣಗಳನ್ನು ಹಿಡಿದು ಪ್ರಶ್ನೆ ಮಾಡ್ತಾನೇ... ಶಿವ ಪರಮಾತ್ಮನೇ! ಎಲ್ಲಿ ಹೋಗುವಿ ನಿಲ್ಲು!... ನಾನು ಜನ್ಮ ಜನ್ಮಾಂತರಗಳಿಂದಲೂ ನಿನಗೆ ವೈರಿಯಾಗಿ ಜನಿಸಿ, ವೈರ ಭಕ್ತಿಯನ್ನು ನಿನಗೆ ಸಮರ್ಪಿಸ್ತಾ ಬಂದಿದ್ದೇನೆ. ಹೀಗಿದ್ದೂ, ನನ್ನ ಅವಸಾನ ಕಾಲದಲ್ಲಿ ಕಂಡೂ ಕಾಣದಂತೆ ಒದ್ದು ಹೊರಟು ಹೋಗುವದು ಇದು ಯಾವ ನ್ಯಾಯಾ? ನಿನ್ನನ್ನು ಅತ್ತಿತ್ತ ಚಲಿಸುವದಕ್ಕೂ ನಾನು ಬಿಡಲಾರೆ! ಇಲ್ಲಿ ನನ್ನ ಮಸ್ತಕದ ಮೇಲೆ ನಿನ್ನ ಪಾದವನ್ನಿರಿಸು! ಕಲ್ಲಿನಾಥಾ! ನಾನು ನಿನ್ನನ್ನು ಸ್ತೋತ್ರ ಮಾಡುತ್ತೇನೆ. ಅದನ್ನು ದಯವಿಟ್ಟು ಸ್ವೀಕಾರ ಮಾಡು! ಎಂದು ಅನನ್ಯಭಕ್ತಿಯಿಂದಲೂ, ಅಧಿಕಾರವಾಣಿಯಿಂದಲೂ ಕೇಳಿಕೊಳ್ತಾ ಇದ್ದಾನೆ ಭಕ್ತ ಮಣಿಕಾಸುರ!...

''ಪರಮಾತ್ಮಾ! ನೀನು ಸುಶಾಂತನೂ, ಶುದ್ಧ ಮೂರ್ತಿಯೂ, ಸರ್ವಜೀವಿಗಳಿಗೆ ಮುಕ್ತಿ ನೀಡುವ ಪಾವತೀ ದೇವಿಯ ಪತಿಯೂ, ಆಗಿರುವಿ! ಕಾಮನನ್ನು ಕೊಂದ ಪ್ರಭುವೇ! ದಯವಿಟ್ಟು ನನ್ನನ್ನು ಉದ್ಧಾರಮಾಡು'' ಅಂತಾ ಅನನ್ಯ ಭಕ್ತಿಯಿಂದ ಗೋಗರೆದು ಕೇಳಿಕೊಳ್ತಾ ಇದ್ದಾನೇ

ಭಕ್ತ ಶ್ರೇಷ್ಠನಾದಂಥಾ ಮಣಿಕಾಸುರ, ಮತ್ತೂ ಏನು ಕೇಳಿಕೊಳ್ತಾ ಇದ್ದಾನೆ ಅಂದ್ರೆ..... ಜಗದೊಡೆಯಾ! ನನಗೆ ಜನ್ಮಾಂತರಗಳಿಗೆ ಹೋಗಬೇಕೆನ್ನುವ ಭ್ರಾಂತಿಯನ್ನು ತಪ್ಪಿಸಿ ಬಿಡು! ಇನ್ನು ಮುಂದೆ ಬೇರೇ ಜನ್ಮವನ್ನು ನನಗೆ ಯಾವ ಕಾಲಕ್ಕೂ ನೀಡಬೇಡಾ! ನಿನ್ನ ಪಾದ ಕಮಲಗಳ ಮೇಲೆ ಬಿದ್ದುಕೊಂಡಿರುವಂಥಾ ಸುಖ ಶಾಂತಿಗಳನ್ನು, ನಾನು ಬೇರೆಲ್ಲಿಯೂ ಕಾಣಲಿಲ್ಲಾ. ಅದಕ್ಕಾಗಿ ದಯವಿಟ್ಟು ನಿನ್ನ ಪದ ಪಂಕಜಗಳಲ್ಲಿಯೇ ನನಗೆ ಸ್ಥಾನಕೊಟ್ಟು ಉದ್ಧರಿಸು!'' ಇದೇ ನನ್ನ ಶಾಸ್ವತ ಸ್ಥಾನವಾಗಲೀ'' ಅಂತಾ ಬೇಡಿಕೊಳ್ತಾ ಇದ್ದಾನೆ ಮಣಿಕಾಸುರ ; ಪರಮಾತ್ಮಾ! ನೀನು ಭಕ್ತರಿಗೆ ಬೇಡಿದ್ದನ್ನೆಲ್ಲ ಕೊಡುವಂಥ ಚಿನ್ಮಯ ಮೂರ್ತಿಯಾಗಿರುವಿ! ಆದಿ - ಅಂತ್ಯಗಳಿಲ್ಲದ ನಿರಂತರನೂ, ಮುನಿಜನರ ಹೃದಯ ಸಿಂಹಾಸನ ಮಂಡಿತನೂ, ಸಚ್ಚಿದಾನಂದ ಸ್ವರೂಪನೂ, ಆಗಿರುವಿ! ಮಾಯಾ ಅವಿದ್ಯೆಗಳ ಸಂಯೋಗದಿಂದ ಸಮುತ್ಪನ್ನನಾದ ನಾನು, ಭ್ರಾಂತಿಯಿಂದ ನಾನಾ ಜನ್ಮಗಳಲ್ಲಿ ಹುಟ್ಟುತ್ತಾ ಸಾಯುತ್ತಾ ಸುಖ - ದುಃಖಗಳನ್ನು ಅನುಭವಿಸುತ್ತಾ, ಸಾಕಷ್ಟು ಕಷ್ಟ ಪಟ್ಟಿದ್ದೇನೆ. ಪರಮಾತ್ಮಾ ಇನ್ನಾದರೂ ನನ್ನನ್ನು ಕ್ಷಮಿಸಿ ನಿನ್ನ ಪಾದಾರವಿಂದಗಳಲ್ಲಿ ಐಕ್ಯವಾಗುವದಕ್ಕೆ ನನಗೆ ಅವಕಾಶ ನೀಡು! ನನ್ನನ್ನು ರಕ್ಷಿಸು! ಪರಮಾತ್ಮಾ!... ನೀನು ನಿತ್ಯನೂ, ನಿರ್ಗುಣನೂ, ವೇದ ಗೋಚರನೂ ಆಗಿರುವಿ! ಸತ್ಯನೂ, ಶಾಶ್ವತನೂ, ದೇವತೆಗಳಿಂದ ಪೂಜೆಗೊಳ್ಳುವವನೂ, ಭಕ್ತರ ಭಯನಾಶಕನೂ, ಶುಭದಾಯಕನೂ, ಸರ್ವಜ್ಞನೂ ಸರ್ವಶಕ್ತನೂ, ಪ್ರತ್ಯಗಾತ್ಮ - ಪರಮಾತ್ಮ ಸ್ವರೂಪಿಯೂ, ಸೂರ್ಯಚಂದ್ರ ಅಗ್ನಿಯರನ್ನೇ ತ್ರಿನೇತ್ರಗಳನ್ನಾಗಿ ಮಾಡಿಕೊಂಡ ವಿರಾಟ ಸ್ವರೂಪನೂ, ಮುನಿಜನರಿಂದ ಸ್ತೋತ್ರಮಾಡಿಸಿಕೊಳ್ಳುವವನೂ, ನಿತ್ಯಾನಂದದಾಯಕನೂ ಆಗಿರುವಿ! ದಯವಿಟ್ಟು ನನಗೆ ಆಶ್ರಯ ನೀಡು...

ಪರಮಾತ್ಮ! ನೀನು ಭಕ್ತ ವತ್ಸಲನೂ, ಭಯ ನಿವಾರಕನೂ, ಮುಕ್ತಿ ಗೊಡೆಯನೂ ಆಗಿರುವಿ! ಜನ್ಮಾಂತರಗಳಲ್ಲಿ ತಿರುಗಿ ತಿರುಗಿ ನನಗೀಗ ಶಕ್ತಿ ಸೋತಿದೆ. ಅದಕ್ಕಾಗಿ ನನಗೆ ಪುನರ್ಜನ್ಮವೀಯದೇ ನನಗೆ ಮುಕ್ತಿ ನೀಡು! ಇಡೀ ಬ್ರಹ್ಮಾಂಡಕ್ಕೇ ಚಕ್ರವರ್ತಿಯಾಗಿದ್ದರೂ, ಸಾಕಷ್ಟು ಶಕ್ತಿ ಐಶ್ವರ್ಯಗಳನ್ನು ನಿನ್ನಿಂದ ಪಡೆದಿದ್ದರೂ, ನಿತ್ಯಾನಂದದ ಸೊಗಸೇ ಇಲ್ಲದ ಈ ಸಂಸಾರ, ನಿಜಕ್ಕೂ ನಿಸ್ಸಾರವಾಗಿದೆ'' ಎಂಬ ಅರಿವು ನನಗೀಗ ಉಂಟಾಗಿದೆ ಪ್ರಭೂ!... ಅದಕ್ಕಾಗಿ ನನಗೆ ಜೀವನ್ಮುಕ್ತಿ ನೀಡು!... ಎಂಬುದಾಗಿ ಕೇಳಿಕೊಳ್ತಾ ಇದ್ದಾನೆ, ಭಕ್ತ ಮಣಿಕಾಸುರ.

**ಪಾಹಿ ಪರಮೇಶ್ವರ ಪರಾತ್ಪರ । ಪಾಹಿ ಸರ್ವಾತ್ಮಕನೆ ಗುಣನಿಧಿ।**
**ಪಾಹಿ ಸರ್ವನೆ ಸರ್ವಗುಣ ಗಣ ನಿಲಯ ಓಂಕಾರಾ ॥**
**ತ್ರಾಹಿ ಮಾಂ ಕೃಪೆದೋರು ಹರಹರ। ತ್ರಾಹಿ ನೀನೇ ಸರ್ವ ರಕ್ಷಕ ।**
**ಪಾಹಿ ಭವ ಭಯ ಹಾರಿ ಹರಹರ ಶ್ರೀಮಾಹಾದೇವಾ ।೬॥**

ನೀನೆ ಬ್ರಹ್ಮನು ನೀನೆ ರುದ್ರನು। ನೀನೆ ವಿಷ್ಣುವು ನೀನೆ ಸರ್ವವು।
ನೀನೆ ಸರ್ವಾತ್ಮರಲಿ ತುಂಬಿಹೆ ಜೀವ ರೂಪದಲಿ ॥
ನೀನೆ ಆಗಸ ನೀನೆ ಭೂಮಿಯು। ನೀನೆ ವಾಯುವು ನೀನೆ ಪಾವಕ।
ನೀನೆ ಜಲವಾಗಿರುವಿ ಸರ್ವಕು ಚೇತನನು ನೀನೇ ॥೭॥

ನೀನೆ ಪಾರ್ವತಿ ನೀನೆ ಸರಸತಿ। ನೀನೆ ಲಕುಮಿಯು ನೀನೆ ಶಕುತಿಯು।
ನೀನಿರದೆ ಜಗವಿಲ್ಲ ಸರ್ವವು ಶಿವಮಯಾಗಿಹುದೂ ॥
ನೀನೆ ದಾನಿಯು ನೀನೆ ಭಿಕ್ಷುಕ। ನೀನೆ ಪಂಡಿತ ಪಾಮರನು ನೀ।
ನೀನೆ ಸರ್ವಾತ್ಮರಲಿ ನೆಲಿಸಿಹೆ ಜ್ಞಾನ ದಿಟ್ಟಿಯಲೀ॥೮॥

ಬಾಳು ನೀನೆ ಭವವು ನೀನೇ ।ಮೇಲು ಕೀಳುಗಳೆಲ್ಲನೀನೇ।
ಸಾಲು ಸಾಲಲಿ ಬೆಳೆದ ಗಿರಿವನ ಝರಿಗಳೂ ನೀನೆ ॥
ಕಾಲ ನೀನೆ ಕವಿತೆ ನೀನೇ। ಪಾಲಿಸುವ ಪರಶಕ್ತಿ ನೀನೇ।
ಏಳು ಕೋಟೀ ಗಣಗಳೊಡೆಯಾ ರಕ್ಷಿಸೆಂದ ಮಣೀ ॥೯॥

ಶಬ್ದಾರ್ಥ :- ಪಾಹಿ = ರಕ್ಷಿಸು; ತ್ರಾಹಿ = ರಕ್ಷಿಸು; ಮಾಂ = ನನ್ನನ್ನು; ಪಾವಕ = ಅಗ್ನಿ; ಚೇತನ = ಚೈತನ್ಯ;
ಸರಸತಿ = ಸರಸ್ವತಿ; ಲಕುಮಿ = ಲಕ್ಷ್ಮೀ; ಪಾಮರ = ಎಲ್ಲದರಲ್ಲಿಯೂ ದಲಿತ.

ಭಾವಾರ್ಥ :- ಪರಮಾತ್ಮಾ! ನನ್ನನ್ನು ರಕ್ಷಿಸು! ಪರಾತ್ಪರನೇ! ಗುಣನಿಧಿಯೇ! ಎಲ್ಲ ಜೀವಿಗಳಲ್ಲಿ ನೆಲಿಸಿದವನೇ! ಗಣಾಧೀಶನೇ! ಓಂಕಾರನೇ ನನ್ನ ಮೇಲೆ ಕೃಪೆ ಮಾಡು! ಶರನೇ! ಸರ್ವ ರಕ್ಷಕನೇ! ಭವ ಸಾಗರವನ್ನು ದಾಟಿಸುವ ಪರಮಾತ್ಮ ಮಹಾದೇವಾ! ನನ್ನನ್ನು ರಕ್ಷಿಸು!... ಬ್ರಹ್ಮನೂ ನೀನೇ ಆಗಿರುವಿ; ರುದ್ರನೂ ನೀನೇ ಆಗಿರುವಿ! ವಿಷ್ಣುವೂ ನೀನೇ ಆಗಿರುವಿ! ವಿಚಾರಿಸಿ ನೋಡಿದರೆ ಜಗತ್ತಿನ ಸರ್ವ ಜೀವಿಗಳಲ್ಲಿಯೂ ಜೀವಾತ್ಮ ಸ್ವರೂಪದಲ್ಲಿ ನೀನೇ ವ್ಯಾಪಿಸಿಕೊಂಡಿರುವಿ. ಇದಲ್ಲದೇ ನೀರು, ಗಾಳಿ, ಆಕಾಶ, ಅಗ್ನಿ ಈ ಪಂಚ ಮಹಾಭೂತಗಳು ಸಹಿತ ನೀನೇ ಆಗಿರುವಿ! ಸರ್ವಜಗತ್ತಿಗೂ ನೀನು ಚೈತನ್ಯ ಸ್ವರೂಪನಾಗಿರುವಿರಿ.

ಪಾರ್ವತಿಯೂ ನೀನೆ! ಸರಸ್ವತಿಯೂ ನೀನೇ! ಲಕ್ಷ್ಮೀ ದೇವಿಯೂ ನೀನೇ! ಆದಿ ಶಕ್ತಿಯೂ ನೀನೇ! ಒಟ್ಟಾರೆ ನೀನಿರದೇ ಈ ಜಗತ್ತೇ ಇಲ್ಲ. ಈ ವಿಶ್ವವೆಲ್ಲವೂ ಶಿವಮಯವಾಗಿಯೇ ಇದೆ!.

ಪರಮಾತ್ಮಾ! ದಾನ ಮಾಡುವವನೂ ನೀನೇ ಆಗಿರುವಿ! ಕೊಟ್ಟದಾನ ಸ್ವೀಕರಿಸುವ ಭಿಕ್ಷಕನೂ ನೀನೇ ಆಗಿರುವಿ! ವೇದ ಶಾಸ್ತ್ರಗಳನ್ನೋದಿದ ಮಹಾ ಪಂಡಿತನೂ ನೀನೇ ಆಗಿರುವಿ! ವಿದ್ಯಾಬುದ್ಧಿ ಸಂಪತ್ತುಗಳಿಲ್ಲದ ದರಿದ್ರನೂ ನೀನೇ ಆಗಿರುವಿ! ಉಚ್ಚವೂ ನೀನೇ ಆಗಿರುವಿ; ನೀಚವೂ ನೀನೇ ಆಗಿರುವಿ! ಸಾಲುಸಾಲಾಗಿ ಬೆಳೆದ ಗಿಡ-ಮರ-ಗುಡ್ಡ-ವನ-ಗಿರಿ-ಝುರಿ, ಸರ್ವಸ್ವವೂ ನೀನೇ ಆಗಿರುವಿ!..... ಯಮನೂ ನೀನೇ ಆಗಿರುವಿ; ಕವಿತೆಯೂ ನೀನೇ ಆಗಿರುವಿ; ಜೀವಿಗಳನ್ನೆಲ್ಲ ಪರಿಪಾಲಿಸುವ ಪರಾಶಕ್ತಿಯೂ ನೀನೇ ಆಗಿರುವಿ!... ಹೀಗೆ ಅನಂತ ಮುಖಗಳಿಂದ ಈ ಜಗತ್ತನ್ನೆಲ್ಲ ವ್ಯಾಪಿಸಿಕೊಂಡು, ಏಳು ಕೋಟಿ ಗಣಗಳಿಗೆ ಒಡೆಯನಾಗಿ ಈ ಜಗತ್ತನ್ನಾಳುತ್ತಿರುವಂಥಾ ಮಹಾಮಹಿಮ ಮಾಲತೀಶಾ! ಕರುಣೆಯಿಂದ ನನನ್ನು ರಕ್ಷಿಸು!'' ಎಂಬುದಾಗಿ ಅನನ್ಯ ಭಕ್ತಿಯಿಂದ ಶಿವನ ಪಾದಕಮಗಳಲ್ಲಿ ಬಿದ್ದುಕೊಂಡೇ ಸ್ತ್ರೋತ್ರ ಮಾಡ್ತಾ ಇದ್ದಾನೆ ಶಿವಭಕ್ತ ಮಣಿಕಾಸುರ.

ಬಿಗಿದ ಕಂಠದಿ ಭಾಷ್ಪ ಹರಿಸುತ । ಮಿಗಿಲು ಪದಪದ್ಮಗಳ ತೋಯಿಸೆ ।
ಮಗುವಿನಂ ತಪ್ಪಿದನು ಪಶುಪತಿ ಮಣಿಯ ಮುದ್ದಾಡಿ॥
ಸೊಗಸುಗೊಂಡೆನು ನಿನ್ನ ಸ್ತೋತ್ರದಿ । ಹಗೆತನದಿ ನೀ ತೋರ್ದ ಶೌರ್ಯದಿ।
ಮಿಗೆವರಂ ನೀ ಬೇಡುನೀಡುವೆನೆಂದ ಪರಮೇಶಾ ॥೧೦॥

ನಾನು ಗೈದಿಹ ನಿನ್ನ ಸ್ತೋತ್ರವ । ಹಾನಿಗೊಳಿಸದೆ ಪಠಿಪ ಮಾನವ।
ನೇನು ಪಾಪವ ಮಾಡಿದರು ನೀ ಕ್ಷಮಿಪುದವನನ್ನು ॥
ಧೇನು ಹಯಗಜ ಸಿರಿಯು ಸಂಪದ। ಮಾನ ಮರ್ಯಾದೆಯಲಿ ಮೆರೆಸುತ ।
ಆನರಂಗಿಕ್ಕುವದು ಮುಕುತಿಯ ಅಂತ್ಯಕಾಲದೊಳೂ ॥೧೧॥

ಯನ್ನ ತುರಗದ ರೂಪವಿದು ತವ । ಸನ್ನಿಧಾನದಲಿರಲಿ ಸಂತತ।
ನಿನ್ನ ಭಕುತರು ಸಾರಿ ಕುಣಿಯಲಿ ನನ್ನ ನೆನಪಿನಲಿ॥
ಮನ್ನಿಸಿದೆ ನಾ ನಿನ್ನ ಬೇಡಿಕೆ। ಯನ್ನನುಜ್ಞೆಯೊಳಾಂತು ಸಾಗಲಿ ।
ನನ್ನ ನಿನ್ನಯ ಯುದ್ಧ ಕೀರ್ತಿ ಪ್ರಸಿದ್ಧಿಸಲಿ ಎಂದಾ ॥೧೨॥

ಶಬ್ದಾರ್ಥ :- ಭಾಷ್ಪ = ಕಣ್ಣೀರು; ಮಿಗಿಲು = ಶ್ರೇಷ್ಠ; ಪದಪದ್ಮ = ಪಾದಕಮಲ; ಸ್ತೋತ್ರ = ಸ್ತುತಿಮಾಡುವದು; ಹಗೆತನ = ವೈರತ್ವ;
ಮಿಗೆ = ಶ್ರೇಷ್ಠ ; ಪಠಿಪ = ಓದುವ; ಧೇನು = ಆಕಳು; ನರ = ಮನುಷ್ಯ; ಇಕ್ಕುವದು = ಕೊಡುವದು; ತುರಗ = ಕುದುರೆ;
ತವ = ನಿನ್ನ; ಸನ್ನಿಧಾನ = ಸಮಕ್ಷಮ; ಸಂತತ = ಯಾವಾಗ್ಲೂ; ಮನ್ನಿಸಿದೆ = ಸ್ವೀಕರಿಸಿದೆ; ಅನುಜ್ಞೆ = ಆಜ್ಞೆ;
ಬೇಡಿಕೆ = ಇಷ್ಟಾರ್ಥ.

ಭಾವಾರ್ಥ :- ಮಣಿಕಾಸುರನು ಭಕ್ತಿಭಾವದಿಂದಲೂ, ಬಿಗಿದ ಕಂಠದಿಂದಲೂ ಕಣ್ಣೀರುದುರಿಸುತ್ತ, ಶಿವನ ಪಾದಕಮಗಳನ್ನು ತೋಯಿಸಿ ಬಿಡ್ತಾ ಇದ್ದಾನೆ. ಆಗ ಭಕ್ತ ಪ್ರೇಮಿಯಾದ ಪರಮಾತ್ಮ, ಆ ಮಣಿಕಾಸುರನನ್ನು ಮಗುವಿನಂತೆ ಅಪ್ಪಿಕೊಂಡು ಮುದ್ದಾಡಿ ಬಿಡ್ತಾನೆ. ಮತ್ತೂ ಹೀಗೆ ಹೇಳ್ತಾನೇ.... ''ಎಲೋ ಭಕ್ತ ಮಣಿಕಾಸುರನೇ!... ಅಂತ್ಯ ಕಾಲದಲ್ಲಿ ನೀನು ಗೈದ ಭಕ್ತಿಯುತವಾದ ಸ್ತೋತ್ರದಿಂದಲೂ, ರಣರಂಗದಲ್ಲಿ ನೀನು ತೋರಿದ ಅತುಲ ಪರಾಕ್ರಮದಿಂದಲೂ, ನಾನು ಸಂತುಷ್ಟನಾಗಿದ್ದೇನೆ. ಭಕ್ತಾ!.... ನಿನಗೆ ಬೇಕಾದ ವರವನ್ನು ಬೇಡು!.,. ನಿನ್ನ ಇಷ್ಟಾರ್ಥವನ್ನು ನಾನು ನೆರವೇರಿಸಿ ಕೊಡ್ತೇನೇ ''ಅಂತಾ ಪರಮಾತ್ಮ ಹೇಳ್ತಾ ಇದ್ದಾನೆ. ಆಗ ಮಣಿಕಾಸುರ ಏನು ಕೇಳಿದಾ ಅಂದ್ರೆ, ''ಪ್ರಭೂ! ಪರಮಾತ್ಮ! ನನ್ನ ಇಷ್ಟಾರ್ಥಗಳನ್ನು ನೀನು ನೆವೇರಿಸಿ ಕೊಡೋದೇ ನಿಜವಾದ್ರೆ, ಈಗ ನಾನು ಗೈದಿರುವ ನಿನ್ನ ಸ್ತೋತ್ರವನ್ನು, ಯಾವ ಮನುಷ್ಯ ಪಠಣ ಮಾಡ್ತಾನೋ, ಅವನು ಎಂಥ ಪಾಪ ಮಾಡಿದ್ದರೂ ಸಹಿತ ನೀನು ಅವನನ್ನು ಕ್ಷಮಿಸಿ ಬಿಡಬೇಕು! ಅವನ ಮನೆಯಲ್ಲಿ ಆಕಳುಗಳು ಆನೆ-ಕುದುರೆ ಮುಂತಾದ ಪಶು ಸಂಪತ್ತನ್ನೂ ಅಖಂಡವಾದ ಸಿರಿ ಸಂಪತ್ತನ್ನೂ, ಮಕ್ಕಳು ಮರಿಗಳನ್ನೂ, ನೀನು ತಪ್ಪದೇ ಕೊಡತಕ್ಕದ್ದು! ಆತನು ಗೌರವದಿಂದ ಬಾಳುತ್ತಿದ್ದು, ಜೀವನದ ಕೊನೆಯಲ್ಲಿ ಅವನಿಗೆ ನೀನು ಮುಕ್ತಿಯನ್ನು ದಯಪಾಲಿಸತಕ್ಕದ್ದು! ಅಲ್ಲದೆ ನಾನು ತಾಳಿದ ಕುದುರೆಯ ರೂಪವು, ಸದಾ ನಿನ್ನ ಸಮ್ಮುಖದಲ್ಲಿರತಕ್ಕದ್ದು!.. ನನ್ನ ಸ್ಮರಣೆಗೊಸ್ಕರವಾಗಿ ನಿನ್ನ ಭಕ್ತರು, ಉತ್ಸವ ಸಮಯದಲ್ಲಿ ನಿನ್ನೆದುರು ಕುದುರೆಯಂತೆ ಕುಣಿಯುತ್ತಿರಬೇಕು!'' ಅಂತಾ ಕೇಳಿಕೊಳ್ತಾ ಇದ್ದಾನೆ. ಆಗ ಮಾರ್ತಾಂಡ ಭೈರವನು ''ತಥಾಸ್ತು!'' ಅಂತಾನೆ! ಇಷ್ಟೇ ಅಲ್ಲದೇ ''ನೀನು ನನ್ನೊಂದಿಗೆ ಹೋರಾಟಮಾಡಿದ ವಿಷಯವು ಜಗದ್ವಿಖ್ಯಾತಿಯನ್ನು ಪಡೆಯಲಿ! ನೀನಿನ್ನು ಜೀವನ್ಮುಕ್ತನಾಗು!'' ಎಂದು ಹರಸ್ತಾ ಇದ್ದಾನೆ ಮಾರ್ತಾಂಡ ಭೈರವ.

ಇತಿ ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್. ಜೋಶಿ ವಿರಚಿತ ಮ್ಹಾಲಾಸಾ ಮಾರ್ತಾಂಡ ಭೈರವ ಪುರಾಣದೋಳ್, ಮಣಿಕಾಸುರ ಕೃತ, ಶಿವ ಸ್ತೋತ್ರ ನಾಮಕ, ಅಷ್ಟದಶೋಧ್ಯಾಯಃ ॥ ಅಂತು ಪದ ೧೨ ಕ್ಕಂ, ಒಟ್ಟು ಪದ ೨೯೧ಕ್ಕಂ, ಮಂಗಲಮಸ್ತು!

ಏಳುಕೋಟಿ! ಏಳುಕೋಟಿಗ!! ಏಳುಕೋಟಿಗೋ!! ಸಾಂಗಬಲೋ !...

*****

# ಅಧ್ಯಾಯ ೧೯ ಏಕೋನಃವಿಂಶೋಧ್ಯಾಯಃ ॥

## ಶ್ರೀ ವಿಷ್ಣು ಸಂದಾನ ಯತ್ನ

ಸೂಚನೆ :-

ಮುಕುತಿಯನು ಮಣಿಗಿತ್ತ ಶ್ರೀ ಶಿವ । ಭಕುತ ಬಂಧುವು ಎಂದು ಚಿಂತಿಸಿ ।
ಸುಖದಿ ಪಾತಾಳಕ್ಕೆ ಪೋಗೆಂದೊರೆಸಿದನುಹರಿಯಿಂ॥

ಸೂಚನೆಯ ಅರ್ಥ :- ಮಣಿಕಾಸುರನಿಗೆ ಮುಕ್ತಿಯನ್ನು ದಯಪಾರಿಸಿದ ಪರಮಾತ್ಮನು, ''ಮಲ್ಲಾಸುರನುತನ್ನ ಭಕ್ತನ ಸಹೋದರನಾಗಿದ್ದಾನೆ'' ಎಂಬ ಕನಿಕರದಿಂದ, ಶ್ರೀ ವಿಷ್ಣುವಿನ ಮುಖಾಂತರವಾಗಿ, ಮಲ್ಲನಿಗೆ ''ನೀನಿನ್ನು ಮರ್ಯಾದೆಯಿಂದ ಪಾತಾಳ ಲೋಕಕ್ಕೆ ನಿನ್ನ ಅಳಿದುಳಿದ ಸೈನ್ಯ ಸಮೇತವಾಗಿಹೊರಟುಹೋಗು!'' ಎಂದು ಆಜ್ಞೆ ಮಾಡಿ, ಕಳಿಸಿ ಕೊಡ್ತಾನೇ'' ಎಂಬುದನ್ನು ಸೂಚಿಸುತ್ತ ಕವಿಯುಮುಂದಿನ ಕಥಾ ಭಾಗವನ್ನು ಈ ರೀತಿಯಾಗಿ ಹೇಳ್ತಾ ಇದ್ದಾನೆ.

ಭಕುತ ನಗ್ರಜ ನೀತ ಮಲ್ಲನು। ರಕುತದೋಕುಳಿಆಟ ಸಾಕೆಂ।
ದ್ಯುಕುತಿಯಲಿ ಶ್ರೀ ಹರಿಯಕರೆಯಿಸಿ ಹರನು ಬೆಸಗೊಂಡಾ॥
ಸಖನೆ ಪೋಪುದು ಮಲ್ಲನಲ್ಲಿಗೆ। ವಿಕಸ ಗೈವುದುಸಕಲ ಸಂಗತಿ।
ಸುಖದಿಪಾತಾಳಕ್ಕೆ ಪೋಗುತ ಬದುಕು ಎಂದೊರೆಯ್ಯೆ ॥೧॥

ಮುಕುತಿ ಗೊಳ್ಳಲಿ ಇಹವು ದೈತ್ಯರ । ನಿಕರ ವೆಂದಿಗು ಬೇಡ ಇಳೆಯಲಿ।
ಸಕಲ ರಾಜರು ರಾಜ್ಯವಾಳಲಿ ಸತ್ಯ ಧರ್ಮದಲಿ ॥
ಯುಕುತಿಯಲಿ ಸ್ವಾಧ್ಯಾಯ ಯೋಗಾ। ಮುಖಿಗಳಾಗಲಿ ದ್ವಿಜರು ದಿವಜರು ।
ಸುಖಿಸಲ್ಯೆ ಯಜ್ಞಾದಿಗಳ ಹವಿ ಪಡೆದು ತುಷ್ಟಿಯಲೀ ॥೨॥

ಎಂದಘೋರನು ನುಡಿಯೆ ದೇವ ಮು। ಕುಂದ ಗರುಡವನೇರಿ ಗಗನದಿ ।
ಬಂದು ತಲುಪಿದ ಮಲ್ಲ ಭೂಪನ ಭವ್ಯ ಬೀಡಾರ॥
ಅಂದವೇರಿದ ಮೊಗದ ಆ ಅರ । ವಿಂದ ಲೋಚನ ನಿರೆ ನಿರಾಯುಧ।
ತಂದು ಪಾಧ್ಯಾರ್ಘ್ಯಗಳ ಸಲ್ಲಿಸಿ ನಿಂದ ಕೈಮುಗಿದೂ ।೩॥

ಕೇಳು ಮಲ್ಲಾಸುರನೆ ಮಮುಭ। ಕ್ತಾಳಿ ವಂಶಜನೆಂದು ಬಂದಿಹೆ।
ತಾಳು ಶಾಂತಿಯ ನಿಲಿಸು ಭೈರವ ನೊಡನೆ ಕದನವನೂ॥
ಹಾಳುಗೊಳ್ಳಲಿ ಬೇಡ ಸಮರದಿ। ಏಳು ಕೋಟಿಗ ಕೊಲುವ ನಿಶ್ಚಿತ।
ಕೇಳು ಕ್ಷಮೆ ಶಿವನಲ್ಲಿ ಪಾತಾಳದಲಿ ನೀ ಬದುಕೂ ।೪॥

ನಷ್ಟಗೊಳಿಸಿದಿ ಸಮರದಲೀ ನೀ ನೆಷ್ಟುದಾನವ ಕಲಿಗಳಂ ನಿನ।
ಗಿಷ್ಟ ಬಾಂಧವ ಪುತ್ರ ಮಿತ್ರಾದಿಗಳ ನೀ ಕಳೆದೇ॥
ಎಷ್ಟು ಸಂಖೆಯ ಶೂರಧೀರೋ । ತ್ಕೃಷ್ಟ ಸೇನಾನಿಗಳ ನಳಿದೆ ಬ।
ಲಿಷ್ಟ ಬಂಧುವು ಮರಣ ಹೊಂದಿದ ನಿನ್ನ ಕಣ್ಣೆದುರೇ ।೫॥

ಅಗಣಿತದ ಮದ್ದಾನೆ ಮಾವುತ। ಮಿಗೆ ತುರಂಗಾನಿಕರ ರಥಿಕರ।
ಬಗೆಯರಿದುಚೋದಿಸುವ ಸಾರಥಿಗಳನು ಕಳಕೊಂಡೇ॥
ಬಗೆ ಬಗೆಯ ಶಸ್ತ್ರಾಸ್ತ್ರ ಕಾಲಾ।ಳುಗಳ ಕೊಲಿಸಿದಿ ಕಳೆದು ವೈರದಿ।
ಮಿಗಿಲು ರತ್ನಾವಳಿಯ ಕೆಚ್ಚಿದ ಹೇಮ ರಥಗಳನೂ ॥೬॥

ಛಲದಿ ನೀ ಕಾಳಗಕೆ ನಿಂತರೆ। ಸೆಳೆವ ನಾ ಶಿವ ನಿನ್ನ ಜೀವವ।
ಪ್ರಳಯನಟನವ ನಿನ್ನ ಕೊಲ್ಲುವ ನಿಮಿಷ ಮಾತ್ರದಲೀ॥
ಅಳಿದಹಂಕೃತಿ ಏಳು ಕೋಟಿಯ। ನಳಿನ ಚರಣಕ್ಕೆರಗಿ ಬದುಕುತ।
ಉಳಿವುದೇ ಲೇಸೆಂದು ನುಡಿದನು ಹರಿಯು ಪಾತಳದೀ ॥೭॥

ಪೇಳದಿರು ಶ್ರೀ ಹರಿಯೆ ಮನ್ನಿಸು। ತಾಳಲಾರೆನು ಮನದ ಬೇಗೆಯ।
ಏಳುತಿದೆ ಕುದಿಯುತ್ತ ನೆತ್ತರು ಶಿವನ ಬಗೆಯಲ್ಲೀ॥
ಕೇಳಲೇನಾ ಹರಗೆ ಕ್ಷಮೆಯನು। ಬಾಳಲೇನಾ ಕಳ್ಳನಂದದಿ।
ಹೇಳು ವೀರರಿಗುಚಿತವೇ ನೀ ಗೈವ ಸಲಹೆ ಇದು॥೮॥

ಶಬ್ದಾರ್ಥ :- ಅಗ್ರಜ = ಅಣ್ಣ; ಯುಕುತಿ = ಯುಕ್ತಿ; ವಿಕಸಗೈ = ವಿವರಿಸಿ ಹೇಳು; ಒರೆ = ಹೇಳು; ಇಹ = ಭೂಮಿ; ನಿಕರ = ಗುಂಪು; ಇಳೆ = ಭೂಮಿ; ಸ್ವಾಧ್ಯಾಯ = ವೇದಾಭ್ಯಾಸ; ದ್ವಿಜರು = ಬ್ರಾಹ್ಮಣರು; ಅಘೋರ = ಶಿವ; ಹವಿ = ತುಪ್ಪ (ಯಜ್ಞಾಹುತಿಗೆ ಹಾಕುವ ಪದಾರ್ಥ) ಮುಕುಂದ = ವಿಷ್ಣು; ಬೀಡಾರ = ಡೇರೆ; ಅರವಿಂದ ಲೋಚನ = ಕಮಲದಂತೆ ಕಣ್ಣುಳ್ಳವ (ವಿಷ್ಣು) ನಿರಾಯುದ್ಧ = ಕೈಯ್ಯಲ್ಲಿ ಯಾವ ಆಯುಧಗಳನ್ನೂ ಧರಿಸದೇ ಇದ್ದವ; ಪಾದ್ಯ = ನೀರಿನಿಂದ ಕಾಲುತೊಳೆಯುವದು; ಅರ್ಘ್ಯ = ಶಾಸ್ತ್ರೋಕ್ತವಾಗಿ ನೀರು ಬಿಟ್ಟು ಸ್ವಾಗತಿಸುವದು; ಭಕ್ತಾ ಳಿ ವಂಶಜ = ಭಕ್ತ (ಪ್ರಹ್ಲಾದನ) ವಂಶದಲ್ಲಿ ಜನಿಸಿದವ; ಭೈರವ = ಶಿವ; ಕದನ = ಯುದ್ಧ; ಏಳು ಕೋಟಿಗ = ಮಾರ್ತಾಂಡ ಭೈರವ; ಕಲಿ = ಶೂರ; ಉತ್ಕೃಷ್ಟ = ಪರಮ ಶ್ರೇಷ್ಠ; ಬಲಿಷ್ಠ ಬಂಧು = ಬಲಶಾಲಿಯಾದ ಸಹೋದರ (ಮಣಿಕಾಸುರ) ಮಾವುತ = ಆನೆ ನಡೆಸುವವ; ಮಿಗೆ = ಶ್ರೇಷ್ಠ; ತುರಂಗಾನಿಕರ = ಕುದುರೆಗಳ ಹಿಂಡು; ಬಗೆಯರಿತು ಚೋದಿಸುವ = ಹದವರಿತು ನಡಿಸುವ; ಸಾರಥಿ = ರಥಗಳನ್ನೋಡಿಸುವವ; ಹೇಮ = ಬಂಗಾರ ಮಯ; ಕೊಲಿಸಿದಿ = ಕೊಲ್ಲಿಸಿದಿ; ರತ್ನಾವಳಿಯ ಕೆಚ್ಚಿದ = ಬೆಲೆಯುಳ್ಳ ರತ್ನಗಳಿಂದ ಕೆಚ್ಚಲ್ಪಟ್ಟ; ಸೆಳೆವ = ಎಳೆದುಕೊಳ್ಳುವ; ಪ್ರಳಯನಟ = ಪ್ರಳಯ ಕಾಲದ ರುದ್ರ; ನಿಮಿಷ ಮಾತ್ರದಲಿ = ಒಂದೇ ನಿಮಿಷದಲ್ಲಿ; ಅಳಿ = ಇಲ್ಲದಂತೆ ಮಾಡು; ಅಹಂಕೃತಿ = ಅಹಂಕಾರ; ಏಳು ಕೋಟ = ಮಾರ್ತಾಂಡಭೈರವ; ಮನ್ನಿಸು = ಕ್ಷಮಿಸು; ಬೇಗೆ = ಬೆಂಕಿ; ಉಚಿತ = ಯೋಗ್ಯ.

ಭಾವಾರ್ಥ :- "ಮಲ್ಲನು ತನ್ನ ಪರಮ ಭಕ್ತನಾದ ಮಣಿಕಾಸುರನ ಅಣ್ಣನಾಗಿದ್ದಾನೆ ಎಂಬ ಕಾರಣದಿಂದ , ಇನ್ನು ಮೇಲೆ ರಣರಂಗದಲ್ಲಿ ರಕ್ತದೋಕುಳಿಯಾಡುವದನ್ನು ನಿಲ್ಲಿಸಬೇಕೆಂಬ ಉದ್ದೇಶದಿಂದ, ಭಕ್ತಾಭಿಮಾನಿಯಾದ ಭೈರವನು ಶ್ರೀವಿಷ್ಣುವನ್ನು ಕರೆದು ಆತನಿಗೆ ಹೀಗೆ ಹೇಳ್ತಾನೆ.... "ಮಾಧವಾ!... ನೀನೀಗ ಮಲ್ಲನಿದ್ದಲ್ಲಿಗೆ ಹೋಗು! ಮತ್ತೂ ಅವನಿಗೆ ರಣರಂಗದಲ್ಲಿ ನಡೆದ ಎಲ್ಲ ಸಂಗತಿಯನ್ನು ವಿವರವಾಗಿ ತಿಳಿಸು! ತನ್ನ ಪ್ರಾಣಕ್ಕೆ ವಿಪತ್ತು ಬರಬಾರದೆಂಬ ಆಲೋಚನೆಯು ಮಲ್ಲನಿಗಿದ್ದರೆ, ಅವನು ನನಗೆ ಶರಣಾಗತನಾಗಿ, ಪಾತಾಳ ಲೋಕಕ್ಕೆ ತನ್ನ ಅಳಿದುಳಿದ ಸೈನ್ಯಸಮೇತವಾಗಿ ಹೋಗಿ, ವಾಸಮಾಡುವದಕ್ಕೆ ಆಜ್ಞಾಪಿಸು!" ಎಂಬುದಾಗಿ ನುಡಿದು, ಶ್ರೀಹರಿಯನ್ನು ಈ ಕಾರ್ಯಕ್ಕಾಗಿ ರಾಯಭಾರಿಯನ್ನಾಗಿ ಮಾಡಿ ಕಳಿಸಿ ಕೊಡ್ತಾ ಇದ್ದಾನೆ ಮಾರ್ತಾಂಡ ಭೈರವ.

ಪರಮಾತ್ಮಾನು ಹೀಗೆ ಹೇಳಿದೊಡನೆಯೇ ಮುಕುಂದನು ಗರುಡನನ್ನೇರಿಕೊಂಡು ಆಕಾಶಮಾರ್ಗವಾಗಿ ತ್ವರಿತದಿಂದ ಸಂಚರಿಸಿ, ಮಲ್ಲ ಭೂಪತಿಯು ಎಲ್ಲಿ ವಾಸವಾಗಿದ್ದನೋ, ಆ ಡೇರೆಯ ಮುಂದೆ ಬಂದು ಗರುಡನಿನ್ನಿಳಿದು ನಿಲ್ತಾ ಇದ್ದಾನೆ. ತೇಜಸ್ವಿಯಾದ ಮುಖಉಳ್ಳವನೂ, ಕಮಲ ನಯನನೂ, ಆದಂಥಾ ಶ್ರೀಹರಿಯು ನಿರಾಯುಧವಾಗಿ ತನ್ನ ಡೇರೆಯೆದುರು ಬಂದು ನಿಂತದ್ದನ್ನು ಕಂಡ ಮಲ್ಲಾಸುರನು, ಭಯ ಭಕ್ತಿಗಳಿಂದ ಶ್ರೀ ಹರಿಯನ್ನು ಸ್ವಾಗತಿಸಿ, ಅರ್ಘ್ಯ, ಪಾದ್ಯಾದಿಗಳಿಂದ ಸಂತುಷ್ಟಿಗೊಳಿಸಿ, ಕೈ ಜೋಡಿಸಿ ನಿಲ್ತಾ ಇದ್ದಾನೆ.

ಆಗ ವಿಷ್ಣು ಪರಮಾತ್ಮ ಶೇಳ್ತಾನೇ... ಮಲ್ಲಾಸುರನೇ! ನೀನು ನನ್ನ ಭಕ್ತನಾದ ಪ್ರಹ್ಲಾದನ ವಂಶದಲ್ಲಿ ಹುಟ್ಟಿದವನೆಂಬ ಕಾರಣ ದಿಂದ, ಕರುಣೆ ಪಟ್ಟು, ನಿನಗೆ ಹಿತೋಪದೇಶ ಮಾಡುವದಕ್ಕಾಗಿಯೇ ನಾನಿಲ್ಲಿಗೆ ಬಂದಿದ್ದೇನೆ, ನಾನು ಹೇಳುವದರಲ್ಲಿ ವಿಶ್ವಾಸವಿಡು! ನೀನು ಈಗಿಂದೀಗಲೇ ಶಿವನೊಂದಿಗೆ ಸಾರಿರುವ ಯುದ್ಧವನ್ನು ಸಮಾಪ್ತಿ ಗೊಳಿಸಿ ಬಿಡು! ಯುದ್ಧದಲ್ಲಿ ನಿನಗೆ ಯಾವ ಕಾಲಕ್ಕೂ ಜಯ ದೊರೆಯಲಾರದು ! ನೀನು ಹೀಗೆಯೇ ಯುದ್ಧ ಮುಂದುವರಿಸಿದ್ದಾದರೆ, ಆ ಮಾರ್ತಾಂಡ ಭೈರವನು ನಿಶ್ಚಿತವಾಗಿಯೂ ನಿನ್ನನ್ನು ಕೊಂದು ಹಾಕ್ತಾನೆ, ಅದಕ್ಕಾಗಿ ನೀನೀಗ ಮರ್ಯಾದೆಯಿಂದ ಶಿವನಲ್ಲಿ ಕ್ಷಮೆ ಕೇಳು! ಮತ್ತೂ ಆತನ ಅಭಿಪ್ರಾಯದಂತೆ ನಿನ್ನ ಅಳಿದುಳಿದ ಸೈನ್ಯ ಪರಿವಾರ ಸಮೇತನಾಗಿ ಪಾತಾಳ ಲೋಕಕ್ಕೆ ಹೋಗಿ, ಜೀವ ಉಳಿಸಿಕೋ! ನೀನು ಹೂಡಿದ ಯುದ್ಧದಿಂದ ನಿನಗೀಗ ಸಾಕಷ್ಟು ಹಾನಿಯಾಗಿದೆ. ಸಮರದಲ್ಲಿ ನೀನು ಕಳೆದುಕೊಂಡ ವೀರ ಸೇನಾನಿಗಳಿಗೆ ಲೆಕ್ಕವಿಲ್ಲ. ನಿನ್ನ ಆಪ್ತೇಷ್ಟರೂ, ಬಂಧು ಬಾಂಧವರೂ, ಪುತ್ರ, ಮಿತ್ರಾದಿಗಳೂ, ಸಾಕಷ್ಟು ಸಂಖ್ಯೆಯಲ್ಲಿ. ಈ ಯುದ್ಧದಲ್ಲಿ ಹತರಾಗಿ ಹೋದರು, ಶೂರರೂ, ಧೀರರೂ, ಉತ್ಕೃಷ್ಟರೂ ಆದಂಥಾ ಅಸಂಖ್ಯಾತ ಸೇನಾ ನಾಯಕರನ್ನೂ, ಕಲಿಗಳನ್ನೂ, ನೀನು ಕಳೆದುಕೊಂಡು ಬಿಟ್ಟಿ!.. ಇದಲ್ಲದೇ ನಿನ್ನ ಬಲಿಷ್ಟ ಬಂಧುವಾದ ಮಣಿಕಾಸುರನು, ನೀನು ನೋಡುತ್ತಿದ್ದಂತೆಯೇ ಶಿವನೊಂದಿಗೆ ಕಾದಾಡಿ ಮರಣ ಹೊಂದಿದ್ದನ್ನು ನೀನು ನೋಡಿದ್ದೀಯಾ!.... ಲೆಕ್ಕವಿಲ್ಲದಷ್ಟು ಆನೆಗಳೂ, ಮಾವುತರೂ, ಅಸಂಖ್ಯಾತ ಕುದುರೆಗಳೂ, ಹದವರಿತು ರಥನಡಿಸುವ ಸಮರ್ಥ ಸಾರಥಿಗಳೂ, ಕೋಟಿಗೂ ಮಿಕ್ಕಿದ ಕಾಲಾಳುಗಳೂ, ಇವೆಲ್ಲವುಗಳನ್ನು ಶಿವನೊಂದಿಗೆ ವೈರ ಸಾಧಿಸಿ ನೀನು ಕಳೆದು ಕೊಂಡಿರುವಿ! ನೀನು ಸಮರದಲ್ಲಿ ಕಳೆದುಕೊಂಡ ರತ್ನ ಖಚಿತ ಬಂಗಾರದ ರಥಗಳು ಅಗಣಿತ!.

ಹೀಗಿದ್ದೂ ಮತ್ತೂ ನೀನು ಕಾಳಗಕ್ಕೆ ನಿಂತರೆ, ಕಾಲ ಭೈರವನಾದ ಆ ಶಿವನು ನಿನ್ನ ಪ್ರಾಣ ಸೆಳೆಯುವದರಲ್ಲಿ ಸಂದೇಹವಿಲ್ಲ. ಯಾಕೆಂದರೆ, ಆ ಮಾರ್ತಾಂಡ ಭೈರವನು ಪ್ರಳಯ ಕಾಲದ ರುದ್ರ ನಟನಾಗಿದ್ದಾನೆ, ಅವನು ನಿಮಿಷ ಮಾತ್ರದಲ್ಲಿ ನಿಶ್ಚಯವಾಗಿಯೂ ನಿನ್ನನ್ನು ತರಿದು ಹಾಕ್ತಾನೆ. ಆದ ಕಾರಣ, ನೀನೀಗ ನಿನ್ನ ಅಹಂಕಾರವನ್ನು ತೊಡೆದುಹಾಕು; ಮರ್ಯಾದೆಯಿಂದ ಶಿವನ ಪಾದಾರವಿಂದಗಳಿಗೆ ಶರಣು ಹೋಗಿ, ಆತನ ಇಚ್ಛೆಯಂತೆ ನಿನ್ನ ಅಳಿದುಳಿದ ಬಂಧು ಬಾಂಧವರನ್ನು ಕಟ್ಟಿಕೊಂಡು ಪಾತಾಳಲೋಕಕ್ಕೆ ಹೊರಟು ಹೋಗು! '' ಇದೊಂದೇ ನಿನಗೀಗ ಪ್ರಾಣ ವುಳಿಸಿಕೊಳ್ಳುವದಕ್ಕೆ ಸರಳ ದಾರಿಯಾಗಿದೆ !'' ಎಂದು ಶ್ರೀ ಹರಿಯ ಮಲ್ಲನಿಗೆ ಹಿತೋಪದೇಶ ಮಡ್ತಾನೆ, ಆದರೆ ದೈತ್ಯೇಂದ್ರ ಮಲ್ಲನು ಅದಕ್ಕೆ ಸರ್ವಥಾ ಒಪ್ಪಲಿಲ್ಲ. ಅವನು ಏನು ಹೇಳ್ತಾನೆ..... ಅಂದ್ರೆ.. ''ಶ್ರೀಹರಿಯೇ !... ನನ್ನ ಪರಮಭಕ್ತನಾದ ಪ್ರಹ್ಲಾದನ ವಂಶಜನೆಂಬ ಅಭಿಮಾನದಿಂದ ನಾನು ಹಿತೋಪದೇಶ ಮಾಡುವದಕ್ಕೆ ಬಂದರೆ, ನನ್ನ ಮಾತನ್ನೇ ಅವಹೇಳನ ಮಾಡ್ತಾ ಇದ್ದಾನಲ್ಲಾಂತ ದಯವಿಟ್ಟು ನೀನು ತಪ್ಪು ಭಾವಿಸಬೇಡಾ! ಈ ಯುದ್ಧ ನಿಲ್ಲಿಸುವ ವಿಷಯದಲ್ಲಿ ನಾನು ಯಾರ ಮಾತನ್ನೂ ಮನ್ನಿಸಲಾರೆ!.... ಯಾಕೆಂದರೆ... ನನ್ನ ಮನಕ್ಕೀಗ ಬೆಂಕಿ ಹತ್ತಿದೆ, ಆ ಬೇಗೆಯಿಂದಾಗಿನ್ನ ರಕ್ತದ ಕಣ ಕಣವೂ ಕುದಿದೇಳ ತೊಡಗಿದೆ, ಆ ದುಷ್ಟ ಶಿವನ ವಿಷಯದಲ್ಲಿ ನಾನು ಯಾವ ಕಾಲದಲ್ಲೂ ಸಂಧಾನಕ್ಕೆ ಸಿದ್ಧನಿಲ್ಲ!... ಪರಿಸ್ಥಿತಿ ಇಷ್ಟೊಂದು ಉಲ್ಬಣಗೊಂಡಿರುವಾಗ, ದೈತ್ಯ ಚಕ್ರವರ್ತಿಯಾದ ನಾನು? ಆ ದರಿದ್ರ ಶಿವನಲ್ಲಿ ಕ್ಷಮೆ ಕೇಳಲೇ?.... ಜೀವಗಳ್ಳನಾಗಿ, ಆತನ ಇಚ್ಛೆಯಂತೆ ನಾನು ಪಾತಾಳಲೋಕಕ್ಕೆ ಹೋಗಿ ಕಳ್ಳನಂತೆ

ಬದುಕಿಕೊಂಡಿರಬೇಕೇ? ನೀನೇ ಹೇಳು ಪದ್ಮನಾಭಾ! ನಿನ್ನ ಹೇಳಿಕೆಯಂತೆ ನಡೆಯಲು ನಾನು ಯಾವ ಕಾಲಕ್ಕೂ ಸಾಧ್ಯವಿಲ್ಲ'' ಅಂತಾ ಖಂಡತುಂಡಾಗಿ ಹೇಳ್ತಾ ಇದ್ದಾನೆ ದೈತ್ಯ ಚಕ್ರವರ್ತಿ ಮಲ್ಲಾಸುರ ಮತ್ತೂ ಏನು ಕೇಳ್ತಾನೇಽ ಅಂದ್ರೆ ..................

ಎಲ್ಲಿ ಹುಡುಕಲಿ ನನ್ನ ತಮ್ಮನ। ಅಲ್ಲಿ ಕಾಂಬನು ಶಿವನ ಉದರದಿ।
ಅಲ್ಲದೆಲ್ಲಿಯು ದೊರಕಲಾರನು ಪ್ರಿಯ ಸಹೋದರನು॥
ಹಲ್ಲೆ ಗೈಯ್ಯುತ ಶಿವನ ಶಿರಗಡಿ। ವಲ್ಲಿವರೆಗೂ ಶಾಂತಿ ಕಾಣೆನು ।
ಚಲ್ಲುವರಿಯುವ ರುಧಿರ ವಾಹಿನಿಯಲ್ಲಿ ಮಿಯುವೆನೂ ॥೯॥

ಸಲ್ಲದಲ್ಲಿಯ ವರೆಗೆ ಶಂತಿಯು । ನಿಲ್ಲದೆನ್ನಯ ಮನದ ತಳಮಳ।
ಹುಲ್ಲ ರಾಶಿಯದೇನು ಗೈವುದು ಚಿತ್ರಭಾನುವಿನಾ॥
ಅಲ್ಲಿ ಗಿರಿಮಣಿಚೂಲದಲಿ ಶ್ರೀ ಹರಿ । ನಿಲ್ಲುತೊಂಚಣ ನೋಡು ಯುದ್ಧವ ।
ಸೊಲ್ಲನಡಗಿಸಿ ಬಿಡುವೆ ಶಿವ ಪರಿವಾರ ಸಹಿತಾಗೀ ॥೧೦॥

ಫುಲ್ಲ ಲೋಚನ ನಿನ್ನ ರಾಯಸ। ವೆಲ್ಲ ಪುಸಿಯಾಯ್ತೆಂದು ಮರುಗದೆ।
ನಿಲ್ಲು ಬಿನತಿಪೆ ಶಿವನ ಖಡುಗದಿ ಕಡಿವ ಪರ್ಯಂತಾ॥
ಇಲ್ಲವಾದರೆ ಪೋಗು ಜವದಲಿ।ನಲ್ಲೆ ಪಾರ್ವತಿಗುಸುರು ಶೀಘ್ರದಿ।
ಎಳ್ಳು ದರ್ಭಾಕ್ಷತೆಗಳಿಕ್ಕಲು ಶಿವನ ಶ್ರಾದ್ಧಕ್ಕೆ ॥೧೧॥

ಶಬ್ದಾರ್ಥ :- ಉದರ = ಹೊಟ್ಟೆ; ಚಲ್ಲುವರಿವ = ಸುತ್ತಲೂ ಜಿಗಿಯುವ; ರುಧಿರ = ರಕ್ತ ಮೀಯು = ಸ್ನಾನ ಮಾಡು;
ಚಿತ್ರಭಾನು = ಬೆಂಕಿ, ಒಂಚಿಣ = ಒಂದು ಕ್ಷಣ.

ಭಾವಾರ್ಥ :- ಇದೂ ಅಲ್ಲದೆ ಮತ್ತೆ ಪ್ರಶ್ನೆ ಮಾಡ್ತಾನೇ.... "ನಾರಾಯಣಾ!... ಕಳೆದುಹೋದ ನನ್ನ ವೀರ ತಮ್ಮನನ್ನು ನಾನೀಗ ಎಲ್ಲಿ ಹುಡುಕಲಿ? ಅಯ್ಯೋS! ನನ್ನ ತಮ್ಮ ಅಲ್ಲಿ ಶಿವನ ಹೊಟ್ಟೆಯಲ್ಲಿ ಕಾಣ್ತಾ ಇದ್ದಾನೆ. ಅವನು ಬೇರೆ ಕಡೆಯಲ್ಲಿ ಎಲ್ಲಿಯೂ ಹೋಗಿಲ್ಲ!.... ಶಿವನ ರುಂಡ ಚೆಂಡಾಡಿ, ಅವನನ್ನು ಹರಿಗಡಿಯುವ ವರೆಗೂ ನನಗೆ ಸಮಾಧಾನವಿಲ್ಲಾ! ಶಿವನ ರುಂಡ ಕತ್ತರಿಸಿದಾಗ್ಗ, ಸುತ್ತಲೂ ಚಿಮ್ಮುವ ರಕ್ತ ಪ್ರವಾಹದಲ್ಲಿ ನಾನು ಮಜ್ಜನ ಗೈದಾಗಲೇ ನನಗೆ ಶಾಂತಿ!... ಅಲ್ಲಿಯ ವರೆಗೂ ನನಗೆ ಶಾಂತಿ ಸಮಾಧಾನಗಳಿಲ್ಲ. ನನ್ನ ಮನದ ತಳಮಳ ತಪ್ಪುವಂತಿಲ್ಲಾ!!... ನಾರಾಯಣಾ!.... ಹುಲ್ಲಿನ ಬಣವೆ ಎಷ್ಟು ದೊಡ್ಡದಾಗಿದ್ದರೇನು? ಬೆಂಕಿಯು ಅದನ್ನು ನೋಡಿ ಹೆದರಲು ಸಾಧ್ಯವಿದೆಯೇ?.. ಶ್ರೀಹರೀ!... ದಯವಿಟ್ಟು ನೀನೊಂದು ಕ್ಷಣ ಅಲ್ಲಿ ಮಣಿ ಚೂಲ ಪರ್ವತದ ಶಿಖರದ ಮೇಲೆ ನಿಂತುಕೊಂಡು, ನನ್ನ ಪರಾಕ್ರಮವನ್ನು ನೋಡು! ಶಿವನನ್ನೂ ಅವನ ಗಣ ಸಮೂಹವನ್ನು, ನಿರ್ನಾಮ ಮಾಡಿಬಿಡುತ್ತೇನೆ.

ನಾರಾಯಣಾ! ನಿನ್ನ ಸಂಧಾನವೆಲ್ಲ ನಿರರ್ಥಕವಾಯಿತೆಂದು ಮರುಗಬೇಡಾ! ನಾನು ನಿನಗೆ ವಿನಂತಿಸಿ ಕೇಳಿಕೊಳ್ತಾ ಇದ್ದೇನೆ! ದಯವಿಟ್ಟು ನಾನು ಶಿವನ ಸಿರಸ್ಸನ್ನು ಚೆಂಡಾಡುವವರೆಗೆ ಮಾತ್ರ ನೀನಲ್ಲಿ ಇದ್ದು ಹೋಗು!... ಅದು ನಿನ್ನ ಮನಸ್ಸಿಗೆ ಬರದಿದ್ದರೆ, ಈಗಿಂದೀಗಲೇ ಹೊರಟು, ಶಿವಸತಿಯಾದ ಪಾರ್ವತಿಯನ್ನು ಭೆಟ್ಟಿಯಾಗು! ಅವಳಿಗೆ ತನ್ನ ಗಂಡನ ಶ್ರಾದ್ಧ ಕರ್ಮಕ್ಕೆ ಬೇಕಾಗುವ ಎಳ್ಳು, ದರ್ಭೆ, ಅಕ್ಷತೆ ಇವನ್ನೆಲ್ಲಾ ತೀವ್ರ ಸಂಗ್ರಹಿಸಿ ಇಡೋದಕ್ಕೆ ತಿಳಿಸಿಬಿಡು!" ಎಂದು ನಿಷ್ಠುರವಾಗಿ ಮಾತಾಡಿ ಕಳಿಸಿಬಿಡ್ತಾನೆ.

ಇತಿ ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್. ಜೋಶಿ. ವಿರಚಿತ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣ ದೋಳ್,
'ಶ್ರೀ ವಿಷ್ಣು ಸಂಧಾನ ಯತ್ನೋ'ನ್ನಾಮಕ ಏಕೋನಃ ವಿಂಶೋಧ್ಯಾಯ ::||

ಏಳುಕೋಟಿ! ಏಳುಕೋಟಿಗ! ಏಳುಕೋಟಿಗೋ!! ಸಾಂಗಬಲೋ !...

ಅಂತು ಅಧ್ಯಾಯ ೧೯ಕ್ಕಂ, ಪದ ೧೧ ಕ್ಕಂ, ಒಟ್ಟು ಪದ ೩೦೨ ಕ್ಕಂ, ಮಂಗಲ ಮಸ್ತು.



## ವಿಂಶೋಧ್ಯಾಯಃ ॥ ೨೦ ನೇ ಅಧ್ಯಾಯ
## ಘೃತಮಾರೀ ಯುದ್ಧ ವರ್ಣನ

ಸೂಚನೆ :-

ಸೊಕ್ಕಿನಿಂ ರಣಕಿಳಿದ ಮಲ್ಲನ। ತೆಕ್ಕೆ ಮುಕ್ಕಿಯಲೆತ್ತಿ ಸೆಣಸುತ।
ದಿಕ್ಕು ಗೆಡಿಸಿದಳಬಬ ಶಿವಸಂಜಾತೆ ಘೃತಮಾರೀ॥

ಸೂಚನೆಯ ಅರ್ಥ:- ಶ್ರೀಹರಿಯ ಹಿತೋಪದೇಶವನ್ನು ಧಿಕ್ಕರಿಸಿ, ಸೊಕ್ಕಿನಿಂದ ರಣರಂಗಕ್ಕೆ ಬಂದ ಮಲ್ಲದೈತ್ಯನನ್ನು ನೋಡಿದ ಶಿವಸಂಜಾತೆಯಾದ ಘೃತಮಾರಿಯು , ತಟ್ಟನೇ ಆತನ ಮೇಲೆರಗಿ, ತೆಕ್ಕೆ ಮುಕ್ಕಿಯಾಡಿ ಹೋರಾಡುತ್ತ, ಆ ದೈತ್ಯ ಚಕ್ರವರ್ತಿಯನ್ನು ದಿಕ್ಕು ತಪ್ಪುವಂತೆ ಮಾಡಿಬಿಟ್ಟಳೆಂಬುದನ್ನು ಸೂಚಿಸುತ್ತ, ಕವಿಯು ಮುಂದಿನ ಕಥಾ ಭಾಗವನ್ನು ಈ ರೀತಿಯಾಗಿ ವರ್ಣನೆ ಮಾಡ್ತಾ ಇದ್ದಾನೆ!..... ಅದೇನೆಂದರೆ

ಹರಿಯ ಸಂದೇಶವನು ಧಿಕ್ಕರ ವೆರಿಸಿದಾ ವಾರ್ತೆಯನು ತಿಳಿಯುತ।
ಕರಕರನೆ ಪಲ್ಗಡಿದು ಹೊರಟಳು ರಣಕೆ ಘೃತ ಮಾರೀ॥
ಹಿರಿದ ನಾಲಿಗೆ ವಜ್ರದಂತಿಯು। ಕೊರೆವ ಕಣ್ನೋಟದಲೆ ಕೊಲ್ಲುವ।
ಅರಿ ಭಯಂಕರಳಾಗಿ ನಿಂದಳು ರಣದಿ ಆ ದುರ್ಗಿ ॥೧॥

ಮುಗಿಲ ಮುಟ್ಟುವ ನಿಲುವು ಈ ಜಗ । ದಗಲ ಹಬ್ಬಿದ ಭವ್ಯ ಕಾಯವು।
ನಗಗಳಂಥ ನಿತಂಬ ಕುಚ ಜೋಡಿಗಳು ಭೀಕರದಾ ॥
ಬಗೆಯ ಬಣ್ಣಿಪುದೇ ಅಸಾಧ್ಯವು। ನಿಗಿ ನಿಗಿಪ ಕೆಂಗಣ್ಣ ಭೀಕರ ।
ಮೊಗದಿ ಗೋಚರಿಸಿದಳು ಸಾಂಬ ಸುಪುತ್ರಿ ದುರ್ಗಿಯೊಲು ॥೨॥

ಶಬ್ದಾರ್ಥ :- ಧಿಕ್ಕರವೆರೆಸು = ದಿಕ್ಕಾರಮಾಡು; (ತುಚ್ಛಗೊಳಿಸು) ಪಲ್ಗಡಿದು = ಹಲ್ಲುಕಡಿದು ; ನಿಲುವು = ಎತ್ತರ;
ಜಗದಗಲ = ವಿಶಾಲವಾಗಿ ಕಾಯ = ದೇಹ; ನಗ = ಪರ್ವತ; ನಿತಂಬ = ತಿಗ; ಕುಚ = ಮೊಲೆ;
ನಿಗಿನಿಗಿಪ = ಹೊಳೆಯುವ; ಸಾಂಬ = ಶಿವ ದುರ್ಗಿಯೊಲು = ದುರ್ಗಾದೇವತೆಯಂತೆ;

**ಭಾವಾರ್ಥ :-** ಮಲ್ಲ ದೈತ್ಯನು ಶ್ರೀಹರಿಯ ಸಂದೇಶವನ್ನು ಧಿಕ್ಕರಿಸಿದ ವಾರ್ತೆಯನ್ನು ತಿಳಿಯುತ್ತಲೇ, ಶಿವ ಸಂಜಾತೆಯಾದ ಘೃತಮಾರಿಯು, ಸಿಟ್ಟಿಗೆದ್ದಳು, ಕರಕರನೇ ಹಲ್ಲು ಕಡಿಯುತ್ತ ರಣರಂಗದತ್ತ ಹೊರಟಳು. ಅವಳ ಆಗಿನ ರೂಪವು ತುಂಬಾ ಭಯಾನಕವಾಗಿತ್ತು, ಆಗಲವಾಗಿ ಹಿರಿದನಾಲಿಗೆ, ವಜ್ರಮಯವಾಗಿರುವ ಕೋರೆ ಹಲ್ಲುಗಳು, ಕೇವಲ ನೋಟ ಮಾತ್ರದಿಂದಲೇ ವೈರಿಗಳನ್ನು ಸಾಯಿಸಿಬಿಡುವ ದುರ್ಗಾದೇವತೆಯಂತೆ, ಅವಳು ಗೋಚರಿಸುತ್ತಿದ್ದಳು, ಮುಗಿಲಿಗೆ ಮುಟ್ಟುವಷ್ಟು ಎತ್ತರವಾಗಿದ್ದ, ಹಾಗೂ ಅದಕ್ಕೆ ತಕ್ಕಂತೆ ಧಡೂತಿಯಾಗಿದ್ದ ಕಾಯವು, ಅವಳದಾಗಿತ್ತು. ಅವಳ ತಿಗ, ಮತ್ತೂ ಮೊಲೆಯ ಜೋಡಿಗಳು, ಭಯಂಕರವಾದ ಬೆಟ್ಟಗಳನ್ನೇ ಇಟ್ಟಿರುವರೇನೋ ಎಂಬಂತೆ ಗೋಚರಿಸುತ್ತಿದ್ದವು. ಇನ್ನು ಆ ಕೆಂಗಣ್ಣಿನ ನೋಟದ ಬಗೆಯನ್ನು ವಿವರಿಸುವದೆ ಅಸಾಧ್ಯವೆನಿಸುತ್ತಿತ್ತು. ಹೀಗೆ ಆ ಸಾಂಬ ಪುತ್ರಿಯಾದ ಘೃತಮಾರಿಯು ಅತಿ ಭಯಾನಕಳಾಗಿ ದುರ್ಗಿಯಂತೆ ಗೋಚರಿಸುತ್ತಿದ್ದಳು.

**ಇತ್ತಲಾ ಮಾಯಾವಿ ಮಲ್ಲನು । ಎತ್ತರದ ಮುಕುಟವನು ಮೋರಿಸಿ ।**
**ಕತ್ತುರಿಯಲೆರಕೊಂಡು ಪೂಸಿಸಿ ಸಕಳ ಸೌಗಂಧಾ ॥**
**ಒತ್ತಿ ಸಿಕ್ಕಿಸಿ ಭುಜ ಕಿರೀಟವ ಕತ್ತಿ ಢಾಲ್ಗದೆ ಧನುವನೇರಿಸಿ ।**
**ಮತ್ತ ಗಜದಂತೊತ್ತಿ ಬಂದನು ರಣದ ಕುಂಭಿನಿಗೆ ।।೩।।**

**ನಿಂತು ನೋಡಿದಳವನ ಆರ್ಭಟ। ಸಂತೆಯಂದದಿ ನೆರೆದ ಸೇನೆಯ।**
**ಕಂತು ಹರಸಂಜಾತೆಯೊಂದೆಡೆ ಜಪ್ಪಿಸುತ ಕುಳಿತು॥**
**ಬಂತು ಮೇಘಾವಳಿಯ ತೆರದಲಿ। ಎಂತು ಸೈನ್ಯವೊ ಲೆಕ್ಕವಿಲ್ಲವು।**
**ನಿಂತು ಗುಡುಗಿದ ಹರಿಯ ತೆರದಲಿ ಮಲ್ಲ ದೈತ್ಯೇಂದ್ರಾ।।೪॥**

ಪೊಡವಿ ಗದಗದ ನಡುಗಿ ಹೋಯಿತು। ಉಡಿದು ಬಿದ್ದವು ತಾರೆ ನಭದಿಂ।
ಹುಡಿಗಳಾಗುತ ಹಾರಿದವು ಗಿರಿ ಧೂಳಿ ಪಟವಾಗಿ॥
ಸಿಡಿಲ ಸಪ್ಪಳ ಸಪ್ಪೆಯೆನಿಸಿತು। ಗುಡುಗಿದಾ ದೈತ್ಯೇಂದ್ರ ನಾರ್ಭಟ ।
ಕೊಡೆದು ಏಕಾಕಾರವಾದವು ಸಪ್ತ ಶರಧಿಗಳು ।೫॥

ಧರೆಯ ಭಾರವ ಸಹಿಸಲಾರದೆ । ಉರಗ ರಾಜೊದ್ದಾಡುತಿರ್ದನು।
ಮರಣ ಗೊಂಡವರಂತೆ ಬಿದ್ದರು ಸುರರು ಮೂರ್ಛೆಯಲೀ॥
ಹರನ ಸಂಗಡ ತುಮುಲ ಯುದ್ಧಕೆ। ಕೆರೆದು ಕಾಲ್ ನಿಂತಿರುವ ಮಲ್ಲಾ।
ಸುರನ ನಿಲುವನು ಕಂಡಳೈ ಆ ಕಾಳಿ ಘೃತಮಾರೀ ।೬॥

ಬಿಗಿದ ಮುಷ್ಟಿಯಲೆದ್ದು ಬಂದಳು । ಅಗಣಿತದ ಆ ಸೈನ್ಯ ಪಡೆಯಂ ।
ಬಗಿದು ಒಳಹೊಕ್ಕಾನೆಗಳ ನೆತ್ತೆತ್ತಿ ಕುಕ್ಕಿದಳು ॥
ರಗಳೆ ರಂಪಟ ವಾವುದಿಲ್ಲ ದೆ । ಮಿಗಿಲು ವಾದ್ಯದ ಗೋಷ್ಠಿಯಿಲ್ಲದೆ।
ಒಗೆದಳೈ ಕುದುರೆಗಳ ಕುದುರೆಗೆ ಕಾಲಪಿಡಿಪಿಡಿದೂ ।೭॥

ಶಬ್ದಾರ್ಥ :- ಮಾಯಾವಿ = ಮಂತ್ರವಿದ್ಯೆಬಲ್ಲವ; ಮೋರಿಸಿ = ತಲೆಗೇರಿಸಿ; ಕತ್ತುರಿ = ಕಸ್ತೂರಿ; ಪೂಸಿಸಿ = ಹಚ್ಚಿಕೊಂಡು;
ರಣದ ಕುಂಭಿನಿ = ರಣಭೂಮಿ; ಅಂತುಹರ ಸಂಜಾತೆ = ಘೃತಮಾರಿ; ಮೇಘಾವಳಿ = ಕಾರ್ಮೋಡದ ಗುಂಪು; ಹರಿ = ಸಿಂಹ;
ಉಡಿದು = ಕತ್ತರಿಸಿ; ಹುಡಿ = ಧೂಳು; ಬಗಿದು = ಛೇದಿಸಿ; ವಾದ್ಯಗೋಷ್ಠಿ = ವಾದ್ಯಗಳ ಸಪ್ಪಳ.

ಭಾವಾರ್ಥ :- ಇತ್ತ ಮಂತ್ರವಿದ್ಯೆ ಬಲ್ಲವನಾದ ಮಲ್ಲಾಸುರನು, ಎತ್ತರವಾದ ಹೊಂಗಿರೀಟ ಧಾರಣೆ ಮಾಡಿ ಕೊಂಡು, ಕಸ್ತೂರಿ ಮಿಶ್ರಿತ ಜಲದಿಂದ ಮಜ್ಜನ ಮಾಡಿಕೊಂಡು ತರತರದ ಸೌಗಂಧ ಲೇಪನಗಳನ್ನೆಲ್ಲ ಮೈಗೆ ಸವರಿಕೊಂಡನು. ಭುಜ ಕಿರೀಟಗಳನ್ನು ಧರಿಸಿ, ಕತ್ತಿ, ಢಾಲು, ಗದೆ, ಧನುಸ್ಸು, ಬತ್ತಳಿಕೆ ಮುಂತಾದ ಆಯುಧಗಳನ್ನು ಧರಿಸಿ , ಮದ್ದಾನೆಯಂತೆ ರಣಭೂಮಿಗೆ ಪ್ರವೇಶ ಮಾಡಿದನು.

ಘೃತಮಾರಿಯು ಒಂದು ಕಡೆಯಲ್ಲಿ ಜಪ್ಪಿಸಿ ಕುಳಿತು ಕೊಂಡು, ಆ ದೈತ್ಯರಾಜನು ಅರ್ಭಟಿಸುತ್ತ ಬರುತ್ತಿರುವದನ್ನೂ, ಅವನ ಸುತ್ತಲೂ ನೆರೆದ ಅಪಾರವಾದ ಸೇನಾ ಸಾಗರವನ್ನೂ, ಕುತೂಹಲದಿಂದ ನೀರಿಕ್ಷಿಸ್ತಾ ಇದ್ದಾಳೆ. ಹೀಗಿರುವ ಸಮಯದಲ್ಲಿ ಮಳೆಗಾಲದಲ್ಲಿ ಮುಸುಕಿ ಬರುವ ಕಾರ್ಮೋಡದಂತೆ, ಆನೆ, ಕುದುರೆ, ರಥ ಅಸಂಖ್ಯಾತವಾದ ಕಾಲಾಳುಗಳ ಸಮೇತವಾಗಿ, ಮಲ್ಲ ಚಕ್ರವರ್ತಿಯು ರಣರಂಗಕ್ಕೆ ಬಂದು ನಿಲ್ತಾ ಇದ್ದಾನೆ. ಮತ್ತೂ ಘನ ಘೋರವಾಗಿ ನಿಂತು, ಸಿಂಹದಂತೆ ಗರ್ಜನೆ ಮಾಡ್ತಾ ಇದ್ದಾನೆ. ಆ ಗರ್ಜನೆಯಿಂದ ಭೂಮಿ ಥರಥರ ನಡುಗಿ ಹೋಗ್ತಾ ಇದೆ, ಆಕಾಶದಲ್ಲಿದ್ದ ನಕ್ಷತ್ರಗಳು ಕತ್ತರಿಸಿ ನೆಲಕ್ಕೆ ಬೀಳ್ತಾ ಇವೆ. ಪರ್ವತಗಳೆಲ್ಲಾ ಹುಡಿಹುಡಿಯಾಗಿ ಹಾರಿ ಹೋಗ್ತಾವೆ!.. ದೈತ್ಯ ರಾಜನ ಆ ಗುಡುಗಿನ ಶಬ್ದದ ಮುಂದೆ, ಸಿಡಿಲಿನ ಸಪ್ಪಳ ಕೆಲಸಕ್ಕೆ ಬಾರದಂತಿತ್ತು. ಅವನ ಆ ಗುಡುಗಿನ ಆರ್ಭಟಕ್ಕೆ ಸಪ್ತ ಸಾಗರಗಳು ಅಲ್ಲೋಲ ಕಲ್ಲೋಲವಾಗಿ, ಸಮಸ್ತ ಸಾಗರಗಳೂ ಏಕಾಕಾರವಾಗಿ ಬಿಟ್ಟವು, ವಸುಂಧರೆಯ ಭಾರವನ್ನು ತಡೆದುಕೊಳ್ಳುವ ದಾಗಲಾರದೇ, ಆದಿ ಶೇಷನು, ಒದ್ದಾಡ ತೊಡಗಿದನು, ಆ ಭಯಂಕರವಾದ ಗುಡುಗಿನ ಶಬ್ದ ದಿಂದಾಗಿ, ದೇವತೆಗಳೆಲ್ಲ ಮೂರ್ಛೆಹೋಗಿ ಸತ್ತವರಂತೆ ಬಿದ್ದು ಬಿಟ್ಟರು.

ಈ ಪ್ರಕಾರವಾಗಿ ಪ್ರಭು ಪರಮಾತ್ಮನೊಂದಿಗೆ ತುಮುಲ ಯುದ್ಧ ಮಾಡುವದಕ್ಕಾಗಿ, ಕಾಲ್ಕೆದರಿ ನಿಂತಿರುವ ಆ ಮಲ್ಲಾಸುರನ ವೈಭವವವನ್ನು, ಘೃತಮಾರಿ ಒಂದು ಸಲ ಕಣ್ಣರಳಿಸಿ ನೋಡ್ತಾಳೆ. ಮತ್ತೂ ತನ್ನ ಮುಷ್ಠಿಗಳನ್ನು ಹುರಿಗೊಳಿಸಿ,ಮಲ್ಲಾಸುರನ ದಂಡಿನತ್ತ ಹುರ್ರೆಂತಾ ಧುಮುಕತಾ ಇದ್ದಾಳೆ. ಆ ಅಪಾರವಾದ ಸೈನ್ಯ ಸಾಗರದಲ್ಲಿ ಒಳಹೊಕ್ಕು, ಆನೆಗಳನ್ನು ಎತ್ತೆತ್ತಿ ನೆಲಕ್ಕೆ ಕುಕ್ಕತಾ ಇದ್ದಾಳೆ. ವಾದ್ಯ ಮೇಳಗಳ ಯಾವ ಸಂಭ್ರಮವೂ ಇಲ್ಲದೇ, ಹೆಚ್ಚಿನ ಗದ್ದಲ ಮಾಡಲಾರದೇ, ಕುದುರೆಗಳ ಕಾಲ್ಹಿಡಿದು ಮೇಲೆತ್ತಿ ಬೇರೇ ಕುದುರೆಗಳಿಗೆ ಚಂಡಿನಂತೆ ಅಪ್ಪಳಿಸ್ತಾ ಇದ್ದಾಳೆ.

ತೂರಿದಳು ರಥಗಳನು ಗಗನಕೆ । ಹಾರಿ ಒದ್ದಳು ಚಂಡಿನಂದದಿ।
ಸಾರಥಿಂಗಳನೆಳೆದು ಬಾಯೊಳಗಿಟ್ಟಾಳಾ ಮಾರಿ॥
ಸಾರಿ ಸನಿಹಕೆ ಬಂದ ಸೈನಿಕ । ರಾರನುಳಿಸದೆ ಬಾಯಿಗೆಸೆದಳು।
ಭಾರಿ ಖಡ್ಗಾಯುಧ ಸಮೇತದಲವರ ನುಂಗಿದಳು ।।೮॥

ಹಿರಿದು ನಾಲಿಗೆ ಹೀರಿ ರಕುತವ । ಭರದಿ ಬಾಯಾಡಿಸುತ ಕರಕರ।
ಕೊರೆಯುತಿದ್ದಳು ಕೋರೆ ದಾಡಿಯೊಳವರ ನವಸರಿಸೀ॥
ಹರಿವ ರಕ್ತವ ನೆಕ್ಕಿ ಬಾಯ್ಚುಪ್ಪರಿಸುವಾ ಪರಿ ನೋಡುವಂತಿರೆ।
ಧರೆಗೆ ಮೃತ್ಯಾಂಗನೆಯೆ ಇಳಿದಂತಿತ್ತು ಆ ದೃಶ್ಯಾ ।।೯॥

ನೋಡಿ ಆ ಚಂಡಿಯನು ದೈತ್ಯರು। ಓಡತೊಡಗಲು ಪ್ರಾಣ ಭಯದಿಂ।
ನೀಡುತಲಿ ಧೈರ್ಯವನು ಮಲ್ಲನು ಬಂದನೆದುರಿನಲೀ॥
ಕೇಡುಗೊಳಿಸಿದಿ ನಮ್ಮ ಸೈನ್ಯವ । ಆಡುತಾಡುತ ತಿನ್ನ ತೊಡಗಿಹೆ ।
ನೋಡು ಮಾರಿಯೆ ತಿಂದುದೆಲ್ಲವ ತಿರುಗಿ ಕಕ್ಕಿಸುವೆ ।।೧೦॥

ಶಬ್ದಾರ್ಥ :- ಕೋರೆದಾಡಿ = ಕೋರೆಹಲ್ಲು; ಮೃತ್ಯಾಂಗನೆ = ಮೃತ್ಯುದೇವತೆ ; ಕೇಡುಗೊಳಿಸು = ಹಾನಿಮಾಡು; ಕಕ್ಕಿಸು = ವಾಂತಿಮಾಡಿಸು.

ಭಾವಾರ್ಥ :- ಆ ಘೃತ ಮಾರಿಯು ಬಲಾಢ್ಯವಾದ ರಥಗಳನ್ನೆಲ್ಲಾ ತೂರಿ ತೂರಿ ಚಂಡಿನಂತೆ ಒದೆಯತೊಡಗಿದಳು. ರಥದಲ್ಲಿದ್ದ ಸಾರಥಿಗಳನ್ನೆಲ್ಲಾ ಎಳೆದೆಳೆದು ತನ್ನ ಬಾಯಲ್ಲಿ ತುರುಕಿಕೊಂಡಳು. ಅವಳನ್ನು ಹೊಡೆಯಬೇಕೆಂದು ಸಮೀಪಕ್ಕೆ ಬಂದ ಸೈನಿಕರನ್ನೆಲ್ಲಾ ಆಯುಧಗಳ ಸಮೇತವಾಗಿಯೇ ನುಂಗತೊಡಗಿದಳು. ವಿಶಾಲವಾದ ಬಾಯ್ದೆರೆದು, ನಾಲಿಗೆಯನ್ನು ಹಿರಿದು, ದೈತ್ಯ ಸೇನಾನಿಗಳ ರಕ್ತವನ್ನು ಭರದಿಂದ ಹೀರತೊಡಗಿದಳು. ಕೋರೆ ಹಲ್ಲಿನಿಂದ ಕರಕರ ಶಬ್ದಮಾಡುತ್ತ ಅವಸರದಿಂದ ಬಾಯಾಡಿಸುತ್ತಿದ್ದಳು, ಹೊರ ಬೀಳುತ್ತಿದ್ದ ರಕ್ತವನ್ನು ಅವಸರದಿಂದ ನೆಕ್ಕಿ, ಬಾಯಿ ಚಪ್ಪರಿಸುವ ಅವಳ ಆಗಿನ ಸ್ಥಿತಿಯು ನೋಡುವಂತಿತ್ತು. ಭೂಮಿಗೆ ಮೃತ್ಯು ದೇವತೆಯೇ ಅವತಾರವೆತ್ತಿ ಬಂದಿರುವಳೇನೋ ಎಂಬಂತೆ ಭಾಸವಾಗುತ್ತಿತ್ತು.

ಈ ಪ್ರಕಾರವಾಗಿ ರಣದಲ್ಲಿ ಮೃತ್ಯಾಂಗನೆಯಂತೆ ಕುಳಿತಿರುವ ಆ ತುಪ್ಪದ ಮಾಳವ್ವನನ್ನು ಕಂಡು, ದೈತ್ಯರೆಲ್ಲರೂ ಪ್ರಾಣ ಭಯದಿಂದ ಓಡಿ ಹೋಗತೊಡಗಿದರು. ಆದರೆ, ಅದೇ ವೇಳೆಗೆ ಮಲ್ಲ ಚಕ್ರವರ್ತಿಯು, ಅವರಿಗೆ ಧೈರ್ಯ ನೀಡುತ್ತಾ, ತಾನೇ ಮುಂದೆ ಬಂದನು, ಆತನು ಆ ಘೃತ ಮಾರಿಯನ್ನು ಕುರಿತು, ''ಎಲೈ ಚಂಡಿಯೇ! ನೀನು ಆಡಾಡುತ್ತಲೇ ನಮ್ಮ ಅನೇಕ ಜನ ವೀರ ಸೈನಿಕರನ್ನು ತಿಂದು ಬಿಟ್ಟಿರುವಿ! ನಮ್ಮ ಸೈನ್ಯವನ್ನೆಲ್ಲ ಹಾಳು ಮಾಡಿ ಬಿಟ್ಟಿರುವಿ!!.. ಈಗ ನೋಡು! ನೀನು ಹೀಗೆ ತಿಂದದ್ದನ್ನೆಲ್ಲ ನಾನು ತಿರುಗಿ ವಾಂತಿಮಾಡಿಸಿ ಬಿಡುತ್ತೇನೆ'' ಎಂದು ನುಡಿದನು.

**ಎನುತ ರಕ್ಕಸ ಘೃತದ ಮಾರಿಯ । ಘನತರದ ಘಣೆಗಿಡಲು ಗದೆಯಿಂ।**
**ಕನವರಿಸಿ ಮೇಲೆದ್ದಳಾ ಘೃತ ಮಾರಿ ಕೋಪದಲೀ॥**
**ಚಿನಿನಿ ಚಿಮ್ಮಿತು ರಕುತ ಸೂಸಿಸಿ । ಮನ ಕೃತಾಂತಕವಾಯ್ತು ರೋಷದಿ ।**
**ಘನ ತರದ ಗದೆ ಸೆಳೆದು ಕುಕ್ಕಿದಳವನ ಖಡುಗದಲೀ ॥೧೧॥**

ಮತ್ತ ದನುಜನ ಭುಜಕೆ ಖಡುಗವು। ಬಿತ್ತು ಬಹು ರಭಸದಲಿ ತುಂಡಿಸೆ ।
ಉತ್ತರರೋತ್ತರ ರಕ್ತ ಹರಿಯಿತು ಭವ್ಯ ಮಡುವಾಗಿ ॥
ನೆತ್ತರದ ಆ ಮಡುವು ಇಂದಿಗು। ಉತ್ತಮೋತ್ತಮ ಫಲವನೀಯುವ।
ಸತ್ಯ ತೀರ್ಥವಾದಾಯ್ತು ಶೋಣಿತ ತೀರ್ಥ ಪೆಸರಿನಲಿ ॥೧೨॥

ಮತ್ತೆ ಹೊಸಭುಜ ಚಿಗಿಯಿತಾಗಳೆ। ಉತ್ತಮಾಯುಧ ಕಟಕ ಸಹಿತದಿ।
ಕತ್ತಿ ತೀರುಗಿಸುತೆದ್ದನಾ ದೈತ್ಯೇಂದ್ರ ಹೂಂಕರಿಸೀ॥
ಹತ್ತಿದಳ್ ಗಗನಕ್ಕೆ ಮಾರಿಯು। ಬಿತ್ತಿದಳ್ ಕಲ್ಗುಂಡು ಬಂಡೆಯ।
ಎತ್ತರದ ಮುಗಿಲಿಂದ ಬಿಸುಟಳು ಪಡೆಯು ಸಾವಂತೆ ॥೧೩॥

ಕಲಲ ಕೋಲಾಹಲವದೆದ್ದಿತು । ಹಲರು ಸತ್ತರು ಬೊಬ್ಬೆಯಿಟ್ಟರು।
ಹಲರ ಕೈಕಾಲ್ ಗೋಣು ಮುರಿದವು ಬಂಡೆ ಮಳೆ ತಾಗೀ ॥
ಕಿಲ ಕಿಲಧ್ವನಿ ಗೈದು ಗಗನದಿ । ಮಲೆತು ನಿಂತಾ ಘೃತದ ಮಾರಿಯ ।
ಛಲದಿ ನೋಡುತ ಮಲ್ಲ ಹೊಡೆದನು ಕೋಟಿ ಶರಗಳನು ॥೧೪॥

**ಕೆಲವು ನಟ್ಟವು ಘಾಲದಲಿ ಹಲ। ಕೆಲವು ನಟ್ಟವು ನಾಭಿ ಎದೆಯೊಳು।**
**ಕೆಲವು ಸಾವಿರ ಶರವು ತೊಡೆಭುಜ ಸ್ತನ ದ್ವಯಂಗಳಲೀ॥**
**ಕೆಲವು ಕಣ್ಣಲಿ ಕೆಲವು ಕಿವಿಯಲಿ। ಹಲವು ಸೂಕ್ಷ್ಮಾಸೂಕ್ಷ್ಮ ಸ್ಥಳದಲಿ ।**
**ತಲೆಯೊನೆತ್ತಲು ಬಾರದಂತಿರೆ ಶಿವನ ಸ್ಮರಿಸಿದಳು ॥೧೫॥**

ಶಬ್ದಾರ್ಥ :- ಫಣ = ಹಣೆ; ಘನತರ = ದೊಡ್ಡ; ಕನವರಿಸಿ = ಕಕ್ಕಾವಿಕ್ಕಿಯಾಗಿ; ರಕುತ = ರಕ್ತ; ಕಟಕ = ಖಡೆ;
ಸಾವಂತೆ = ಸಾಯುವಂತೆ; ಮಲೆತು = ಸೊಕ್ಕಿ; ನಾಭಿ = ಹೊಕ್ಕಳು.

ಭಾವಾರ್ಥ :- ಹೀಗೆ ಮಾತಾಡುತ್ತ ಮಲ್ಲಾಸುರನು ತನ್ನ ಬಲಾಢ್ಯವಾದ ಗದೆಯನ್ನೆತ್ತಿ ಘೃತಮಾರಿಯ ವಿಶಾಲವಾದ ಹಣೆಗೆ ಅಪ್ಪಳಿಸಿಬಿಟ್ಟನು. ಆ ಘೋರ ಆಘಾತದಿಂದ ತುಪ್ಪದ ಮಾಳವ್ವನ ಹಣೆಯಲ್ಲಿ ಆಳವಾದ ಒಂದು ಕಂದಕವೇ ಉದ್ಭವಿಸಿ, ಅದರಿಂದ ಧಾರಾಕಾರವಾಗಿ ರಕ್ತವು ಪುಟಿಯತೊಡಗಿತು. ಅದರಿಂದಾಗಿ ಅವಳಿಗೆ ಭಯಂಕರ ಸಿಟ್ಟು ಬಂದಿತು. ಅವಳು ಮೃತ್ಯು ದೇವತೆಯಂತೆ ಕಾಣಿದಸಿಕೊಂಡಳು. ಆ ದೈತ್ಯನ ಬಲವಾದ ಗದೆಯನ್ನು ಅವಳು ಒಂದೇ ಸೆಳೆತದಿಂದ ಜಗ್ಗಿ ಕಸಿದುಕೊಂಡು, ತನ್ನ ಭಯಂಕರವಾದ ಖಡ್ಗದಿಂದ, ಆ ಮಲ್ಲಾಸುರನ ಬಲ ಬುಜಕ್ಕೆ ಇಕ್ಕರಿಸಿಬಿಟ್ಟಳು. ಆ ದೈತ್ಯನ ಬಲದೋಳು ಕತ್ತರಿಸಿ ನೆಲಕ್ಕೆ ಬಿತ್ತು. ಅಲ್ಲಿ ಹರಿದ ರಕ್ತವು ಒಂದು ದೊಡ್ಡ ಮಡುವಾಗಿ ನಿಂತಿತು. ಆ ಮಡುವೇ ಈಗ ಭಕ್ತರಿಗೆಲ್ಲ ಸತ್ವಲಗಳನ್ನು ಕೊಡುವ ಪ್ರತೀತಿ ಹೊಂದಿದ ಶೋಣಿತ ತೀರ್ಥವೆಂದು ಹೆಸರಾಗಿದೆ. ಮೊಂಡ ಭುಜದವನಾದ ಆ ದೈತ್ಯೇಂದ್ರನಿಗೆ, ಬ್ರಹ್ಮದೇವರ ವರ ಪ್ರಭಾವದಿಂದ ತಕ್ಷಣವೇ ಮತ್ತೊಂದು ಹೊಸ ಭುಜವು ಚಿಗಿತು ಕೊಂಡಿತು. ಆ ಭುಜದಲ್ಲಿ ಖಡ್ಗ ಕಟಕ, ಕೇಯೂರಗಳೆಲ್ಲ ಮೊದಲಿಗಿಂತ ವಿಜೃಂಭಿಸಿ ಮೆರೆಯತೊಡಗಿದವು. ದೈತ್ಯನು ಕೋಪಾವೇಶದಿಂದ ಮೊದಲಿಗಿಂತ ಹೆಚ್ಚಾಗಿ ಖಡ್ಗ ತಿರುಗಿಸುತ್ತ ಘೃತಮಾರಿಯನ್ನು ಬೆನ್ನು ಹತ್ತಿದನು.

ತಕ್ಷಣವೇ ಘೃತ ಮಾರಿಯು ಆಕಾಶವನ್ನೇರಿದಳು. ಮತ್ತೂ ದೊಡ್ಡ ದೊಡ್ಡ ಕಲ್ಲು, ಗುಂಡು, ಬಂಡೆಗಲ್ಲುಗಳನ್ನು ಅಲ್ಲಿಂದ ಉರುಳಿಸತೊಡಗಿದಳು. ಆ ಆಘಾತದಿಂದಾಗಿ ಮಲ್ಲ ದೈತ್ಯನ ಪಡೆಗಳಲ್ಲಿಯ ಸೈನಿಕರು ಬಹು ಸಂಖೆಯಲ್ಲಿ ಸಾಯತೊಡಗಿದರು. ಎಲ್ಲ ಕಡೆ ಯಲ್ಲಿಯೂ ಕೋಲಾಹಲವೆದ್ದಿತು. ಕೆಲವರು ಬಂಡೆಗಳ ಬುಡಕ್ಕೆ ಸಿಕ್ಕು ಸತ್ತು ಹೋದರು. ಕೆಲವರು ನೋವಿನಿಂದ ಶಂಖವಾದ್ಯ ಮಾಡ ತೊಡಗಿದರು. ಕೆಲವರು ಕೈ, ಕಾಲು, ಗೋಣುಗಳು ಮುರಿದುಹೋಗಿ ತತ್ತರಿಸಿದರು. ಇದೆಲ್ಲವನ್ನೂ ಆಕಾಶದಲ್ಲಿ ನಿಂತು ನೋಡುತ್ತಿದ್ದ ಘೃತಮಾರಿಯು, ಮೋಜಿನಿಂದ ಕಿಲ ಕಿಲ ನಗುತ್ತಿದ್ದಳು. ಇದನ್ನೆಲ್ಲ

ಲಕ್ಷವಿಟ್ಟು ನೋಡಿದ ಮಲ್ಲದೈತ್ಯನು ತನ್ನ ಧನುಸ್ಸಿಗೆ ಏಕಕಾಲಕ್ಕೆ ಕೋಟಿ ಶರಗಳನ್ನು ಹೂಡಿ, ಸಿಟ್ಟಿನಿಂದ ಘೃತಮಾರಿಗೆ ಪ್ರಹಾರ ಮಾಡಿದನು. ಆ ಕ್ರೂರ ಶರಗಳು ಘೃತಮಾರಿಯ ಹಣೆ, ಎದೆ, ಹೊಕ್ಕಳುಗಳಲ್ಲಿ ಆಳವಾಗಿ ನಟ್ಟವು. ತೊಡೆ, ಭುಜ, ಮೊಲೆ, ಸೂಕ್ಷ್ಮಾತಿಸೂಕ್ಷ್ಮ ಜಾಗೆಗಳಲ್ಲೆಲ್ಲ ನಟ್ಟಿದ್ದಲ್ಲದೇ, ಕಣ್ಣು, ಕಿವಿ, ಮೂಗುಗಳಲ್ಲೆಲ್ಲ ಆಳವಾಗಿ ನಟ್ಟು, ಅವಳಿಗೆ ತಲೆಯೆತ್ತಲು ಬಾರದಂತೆ ಘಾಸಿಗೊಳಿಸಿದವು. ಆಗ ಘೃತಮಾರಿಯು ಉಪಾಯಗಾಣದೇ ಸಹಾಯಕ್ಕಾಗಿ ಶಿವನನ್ನು ಸ್ಮರಣೆ ಮಾಡಿದಳು.

**ಕರೆಯ ಕೇಳುತ ಹರನು ಧಾವಿಸಿ । ಮೆರೆದನಾ ಕ್ಷಣದೊಳಗೆ ಕುವರಿಯ।**
**ಸರಿಸಿ ಸಂಭಾಳಿಸಿದನವಳನು ವರದ ಹಸ್ತದಲೀ॥**
**ಧುರಕೆ ಧಾವಿಸಿ ಮಲ್ಲ ಭೂಪತಿ । ಗೆರಗಿಸಿದನಾ ಶೂಲದಿಂದಲಿ ।**
**ಕರುಣೆಯಿಲ್ಲದೆ ಕಾದಿದರು ದೈತ್ಯೇಂದ್ರ, ಭವಹರರೂ ।೧೬॥**

ಭಾವಾರ್ಥ:- ಘೃತಮಾರಿಯು ಶಿವನನ್ನು ಸ್ಮರಿಸಿದೊಡನೆಯೇ, ಭಕ್ತವತ್ಸಲನಾದ ಶಿವನು ತಕ್ಷಣವೇ ಅಲ್ಲಿ ಪ್ರಕಟನಾದನು. ಬಾಣಗಳಿಂದ ಗಾಸಿಗೊಂಡ ಕುಮಾರಿಯನ್ನು ಹಿಂದೆ ಸರಿಸಿ, ತನ್ನ ವರದ ಹಸ್ತದಿಂದ ಸಂಭಾಳಿಸಿದನು. ಮತ್ತೂ ತಾನೇ ಮಲ್ಲನೊಂದಿಗೆ ಯುದ್ಧಕ್ಕೆ ನಿಲ್ಲುತ್ತ , ಅವನನ್ನು ತ್ರಿಶೂಲದಿಂದ ಇರಿದನು. ಶಿವ, ಹಾಗೂ ದೈತ್ಯ ಚಕ್ರವರ್ತಿಗಳಿಬ್ಬರೂ ಕರುಣೆಯಿಲ್ಲದೇ ಕಾದಾಡದೊಡಗಿದರು.

**ಇತೀ ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್. ಜೋಶಿ ವಿರಚಿತ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್,**
**ಘೃತಮಾರೀ ಯುದ್ಧ ವರ್ಣನ ನಾಮಕ ವಿಂಶೋಧ್ಯಾಯಃ ॥**

**ಏಳುಕೋಟಿ! ಏಳುಕೋಟಿಗ! ಏಳುಕೋಟಿಗೋ!! ಸಾಂಗಬಲೋ !...**
**ಅಂತು ಅಧ್ಯಾಯ ೨೦ ಕ್ಕಂ, ಪದ ೧೬ ಕ್ಕಂ, ಒಟ್ಟು ಪದ ೩೧೮ ಕ್ಕಂ, ಮಂಗಲ ಮಸ್ತು!.......**

*****

# ಏಕವಿಂಶೋಧ್ಯಾಯಃ ॥ ೨೧ ನೇಯ ಅಧ್ಯಾಯ

## ಮಾರ್ತಾಂಡ ಭೈರವ ಮಲ್ಲಾಸುರ ಯುದ್ಧ ವರ್ಣನ

ಸೂಚನೆ :-

**ಪಾಶುಪತ ಮಂತ್ರಾಸ್ತ್ರದಾವರೆ । ಗೀಶನೊಳು ಕಾದುತ್ತ ಕೊನೆಯೊಳು।**
**ಈಶ ಪದಗಳ ಪಿಡಿದ ಬ್ರಹ್ಮಾನಂದದಲಿ ಬೆರೆದಾ ॥**

ಸೂಚನಾ ಪದ್ಯದ ಅರ್ಥ :- ಶಿವನು ಪಾಶುಪತವೆಂಬ ಮಂತ್ರಾಸ್ತ್ರವನ್ನು ಪ್ರಯೋಗಿಸುವರೆಗೂ, ಮಲ್ಲ ದೈತ್ಯನು ಅವನೊಂದಿಗೆ ಸಮಶಕ್ತಿಯಿಂದ ಹೋರಾಡುತ್ತಿದ್ದು, ಆ ಭೀಕರ ಅಸ್ತ್ರವು ಪ್ರಯೋಗಿಸಲ್ಪಟ್ಟೊಡನೆಯೇ ಸುಜ್ಞಾನಿಯಾಗಿ, ಅವನ ಪಾದ ಕಮಲಗಳಲ್ಲಿ ತಲೆಯಿಟ್ಟನು. ಮತ್ತೂ ಜೀವನ್ಮುಕ್ತಿಯೆಂಬ ಬ್ರಹ್ಮಾನಂದದಲ್ಲಿ ಬೆರೆತನೆಂಬುದನ್ನು ಸೂಚಿಸುತ್ತ, ಕವಿಯು ಮುಂದಿನ ಕಥಾ ಭಾಗವನ್ನು ಈ ರೀತಿಯಾಗಿ ವರ್ಣಿಸಿ ಹೇಳ್ತಾ ಇದ್ದಾನೆ. ಅದೇನೆಂದರೆ-

**ಹರನ ಶೂಲವ ಸರಿಸಿ ತವಕದಿ। ಇರಿದ ದಾನವ ಖಡುಗದಿಂದಲಿ।**
**ಒರೆದ ಶಿವ ನೀನೆನಗೆ ಸಮನಾಗಿಲ್ಲ ಯಾತರಲೂ ॥**
**ಬರಿದೆ ಯಾತಕೆ ಮಾತನಾಡುವಿ। ಕರಿಯ ಚರ್ಮಾಂಬರವ ಧರಿಸುತೆ।**
**ತಿರುಕತನದಿಂ ಚರಿಸಿ ಕಾಲವ ಕಳೆವೆ ಮಸಣದಲಿ ॥೧॥**

**ಸಮರದಳ ನಿನಗಿಲ್ಲ ಭೂತದ। ಸಮತೆ ಸೇರ್ವದು ನಿನಗೆ ಶಕ್ತಿಯ।**
**ಸಮನು ನೀನೆನಗಲ್ಲ ವಾಸಿಪ ಮನೆಯು ನಿನಗಿಲ್ಲ ॥**
**ಉಮೆಯ ರಮಣನೆಗಮಿಸು ಭಿಕ್ಷಗೆ। ಸಮರವಿದು ಸರಿಯಲ್ಲ ವೆನ್ನೊಳು।**
**ಅಮಮ ಸಿಂಹಕೆ ಸರಿಯೆ ಶುನಕವು ಪೋಗು ಕೆಡಬೇಡ ॥೨॥**

ಶಬ್ದಾರ್ಥ :- ತವಕದಿ = ತೀವ್ರವಾಗಿ; ಒರೆ = ಹೇಳು; ಮಸಣ = ಸ್ಮಶಾನ; ದಳ = ದಂಡು; ಸಮರ = ಯುದ್ಧ
ಶುನಕ = ನಾಯಿ.

ಭಾವಾರ್ಥ :- ಹರನು ಪ್ರಯೋಗಿಸಿದ ತ್ರಿಶೂಲವನ್ನು ಮಲ್ಲದೈತ್ಯನು ಢಾಲಿನಿಂದ ಪ್ರತಿಭಟಿಸಿ, ತನ್ನ ಬಲವಾದ ಖಡ್ಗದಿಂದ ಇರಿಯಲೆತ್ನಿಸುತ್ತ ಮಾರ್ತಾಂಡ ಭೈರವನಿಗೆ ಈ ರೀತಿಯಾಗಿ ಹೇಳ್ತಾ ಇದ್ದಾನೆ....... ''ಎಲೋ ಭೈರವನೇ! ನೀನು ನನಗೆ ಯಾತರಲ್ಲಿಯೂ ಸರಿಸಮಾನನಾಗಿಲ್ಲ, ಆನೆಯ ಚರ್ಮವನ್ನು ನಡುವಿಗೆ ಸುತ್ತಿಕೊಂಡು, ಭಿಕ್ಷೆ ಬೇಡುತ್ತ ತಿರುಕನಂತೆ ಸ್ಮಶಾನವಾಸಿಯಾಗಿ ಕಾಲ ಕಳೆಯುವ ನೀನೆಲ್ಲಿ ? ನಾನೆಲ್ಲಿ??... ನನ್ನೊಂದಿಗೆ ಕಾದಾಡುವದಕ್ಕೆ ನಿನಗೆ ಸರಿಯಾದ ಸುಸಜ್ಜಿತವಾದ ದಂಡು ದರ್ಬಾರಗಳಿಲ್ಲ. ನಿನಗೆ ಭೂತಗಣವೇ ಸರ್ವಸ್ವವಾಗಿರುವದು. ನನ್ನ ಬಲಾಢ್ಯತೆಗೆ ನೀನು ಯಾವ ಕಾಲದಲ್ಲೂ ಸರಿಸಮನಾಗಲಾರಿ, ನಿನಗೆ ವಾಸಿಸುವದಕ್ಕೆ ಒಂದು ಅರಮನೆ ಕೂಡಾ ಇಲ್ಲದೇ ಸ್ಮಶಾನದಲ್ಲಿ ಕಾಲಕಳೆಯುತ್ತಿರುವಿ. ಇಂಥ ದರಿದ್ರನಾದ ಉಮಾಪತಿಯೇ! ನೀನು ಯುದ್ಧಮಾಡುವದನ್ನು ಬಿಟ್ಟು ಭಿಕ್ಷೆಗೆ ಹೋಗುವದೇ ಲೇಸು! ನೀನು ನನ್ನೊಂದಿಗೆ ಕಾದಾಟಕ್ಕಿಳಿಯುವದು, ಸಿಂಹ ಹಾಗೂ ನಾಯಿಗಳ ಕಾದಾಟವೆನಿಸಬಾರದು! ಅದಕ್ಕಾಗಿ ನೀನೀಗ ಮರ್ಯಾದೆಯಿಂದ ತಿರುಗಿ ಹೋಗಿ ಬಿಡು! ಇಲ್ಲವಾದರೆ ವ್ಯರ್ಥವಾಗಿ ಸತ್ತು ಹೋಗುವಿ!'' ಎಂದು ಮಾರ್ತಾಂಡ ಭೈರವನಿಗೆ ಎಚ್ಚರಿಕೆ ನೀಡ್ತಾ ಇದ್ದಾನೆ. ವೀರ ಮಲ್ಲಾಸುರ!....

ನಿನಗೆ ಗಂಧಾಕ್ಷತೆಗಳೊಪ್ಪವು। ನಿನಗೆ ನಾನಾ ಭರಣ ಸೇರವು ।
ನಿನಗೆ ಪೀತಾಂಬರವು ಸೇರದು ನಿನ್ನ ಇರುವೆಂತು॥
ನಿನಗೆ ರುದ್ರಾಕ್ಷಿಗಳು ಸೇರ್ವವು। ನಿನಗೆ ಮಸಣದ ಭಸ್ಮ ಲೇಪನ।
ನಿನಗೆ ನಾಗಾಭರಣ ಸೇರ್ವವು ಎನಿತು ವೈಚಿತ್ರ್ಯ ।೩॥

ನಿನಗೆ ಈರ್ವರೆ ಪತ್ನಿಗಳ್ ನಸ। ಗೆನಿತು ಹೆಂಡಿರೋ ಲೆಕ್ಕವಿಲ್ಲವು।
ಮನವ ಮೋಹಿಪ ಸುಂದರಾಂಗಿಯರಿರುವರವರೆಲ್ಲ॥
ನಿನಗೆ ಮಂತ್ರಿಗಳಿಲ್ಲ ತಂತ್ರದ। ಘನತೆ ನಿನಗರಿವಿಲ್ಲ ಯನ್ನಯ ।
ಮನಕೆ ಸೇರದು ನೀನು ಸರಿಸಮನಲ್ಲ ತನಗೆಂದಾ ।೪॥

ಹರನೆ ನೀನೇಕಾಕಿ ನಿನ್ನಯ। ಸುರರ ಕರೆ ಸಮರಕ್ಕೆಯನ್ನಯ।
ಪರಿಯ ಪರಕಿಸು ಹೇಡಿತನವೆನಗಿಲ್ಲ ಕದನದಲಿ॥
ಕರಿಯ ರೋಷಕೆ ಸಿಂಗ ಜರಿವುದೆ। ಭರದಗಾಳಿಗೆ ಗಿರಿಯು ಜರಿವುದೆ ।
ಸುರಿವ ಮಳೆಗಂಜುವದೆ ಸಾಗರ ವೆಂದನಾ ದೈತ್ಯ ।೫॥

**ಕೂಡೆ ಶಿವ ತಾ ನಕ್ಕು ನುಡಿದನು। ಮೂಢ ಕೇಳೆಲೊ ಸಿಂಗದುಪಟಳ।**
**ಕಾಡಲಾರದು ಗಂಡ ಭೈರುಂಡಕ್ಕೆ ತಿಳಿಯೆನುತಾ ॥**
**ಹೂಡಿ ಹೊಡೆದನು ಹರಿತ ಶರಗಳ। ಕೋಡಿ ಹರಿದಂತಾಯ್ತು ರಕುತವು ।**
**ಬಾಡಿತಾತನ ಶೌರ್ಯ ದೇಹದಿ ಗಾಯ ಹಲವಾಗಿ ।೬॥**

ಶಬ್ದಾರ್ಥ :- ಪರಕಿಸು = ಪರೀಕ್ಷಿಸು; ಉಪಟಳ = ಉಪದ್ರ ; ಗಂಡಭೇರುಂಡ = ಜೋಡು; ತಲೆಯ ಶರಭಪಕ್ಷಿ (ಇದು ಸಿಂಹದ ಬೇಟೆಯಾಡುವದು)

ಭಾವಾರ್ಥ :- ಶಿವನೇ! ನೀನು ಸುಗಂಧಮಯವಾದ ಗಂಧ ಅಕ್ಷತೆಗಳನ್ನು ಧರಿಸುವದಿಲ್ಲ, ನಿನಗೆ ನಾನಾತರದ ವಸ್ತ್ರ ಆಭರಣಗಳು ಸೇರುವದಿಲ್ಲ. ನಿನಗೆ ಬಹು ಬೆಲೆಯುಳ್ಳ ಪೀತಾಂಬರವು ಬೇಕಾಗಿಲ್ಲ. ಅಂದ ಮೇಲೆ ನಿನ್ನದೆಂಥ ದರಿದ್ರ ವ್ಯಕ್ತಿತ್ವ?... ನಿನಗೆ ರುದ್ರಾಕ್ಷಿಗಳೆಂದರೆ ಬಹು ಪ್ರೀತಿ; ನಿನ್ನ ಲೇಪನಕ್ಕೆ ಸ್ಮಶಾನದ ಹೆಣ ಸುಟ್ಟು ಬೂದಿಯೇ ಬೇಕು! ನಿನ್ನ ಅಲಂಕಾರಕ್ಕೆ ನಾಗ ಸರ್ಪಗಳೇ ಉಚಿತವಾಗಿವೆ. ಅಂದ ಮೇಲೆ ನಿನ್ನದೆಂಥ ವಿಚಿತ್ರ ವರ್ತನೆ?.. ಎಲೋ ಮಾರ್ತಾಂಡ ಭೈರವಾ! ನಿನಗೆ ಕೇವಲ ಇಬ್ಬರು ಪತ್ನಿಯರಿರುವರು; ಆದರೆ ನನಗಾದರೋ ಹೆಂಡಿರೆಷ್ಟೆಂಬ ಲೆಕ್ಕಸಹಿತ ಸಿಗದಾಗಿದೆ. ಅವರೆಲ್ಲರೂ ಮನ ಮೋಹಿಸುವ ಅಪ್ಸರೆಯರಂತಿದ್ದಾರೆ. ನಿನಗೆ ಮಂತ್ರಿ ತಂತ್ರಿಗಳಿಲ್ಲ; ತಂತ್ರಗಳ ಘನತೆಯೂ ನಿನಗೆ ಗೊತ್ತಿಲ್ಲ! ಒಟ್ಟಾರೆ ನಿನ್ನ ವ್ಯಕ್ತಿತ್ವವೇ ನನಗೆ ಸರಿ ಕಾಣುವದಿಲ್ಲ. ನೀನು ಯಾತರಲ್ಲಿಯೂ ನನಗೆ ಸರಿಸಮನಾಗಿ ಕಾಣುತ್ತಿಲ್ಲ, ಎಲೋ ಚಂದ್ರ ಶೇಖರಾ! ನೀನೀಗ ಏಕಾಕಿಯಾಗಿರುವಿ! ನೀನೊಬ್ಬನೇ ನನ್ನೊಂದಿಗೆ ಯುದ್ಧ ಮಾಡಿದರೆ ನಿನ್ನ ಗತಿಯೇನು? ಅದಕ್ಕಾಗಿ ನಿನ್ನ ಬೆಂಬಲಕ್ಕಾಗಿ ಮೂವತ್ಮೂರು ಕೋಟಿ ದೇವತೆಗಳನ್ನು ಆಹ್ವಾನಿಸು! ನೀವೆಲ್ಲರೂ ಸೇರಿ ನನ್ನ ಸಾಮರ್ಥ್ಯವು ಸಮರದಲ್ಲಿ ಹೇಗಿದೆ ಎಂಬುದನ್ನು ಪರೀಕ್ಷೆ ಮಾಡಿಕೊಳ್ಳಿರಿ! ಕದನದಲ್ಲಿ ನಾನು ಯಾವ ಕಾಲಕ್ಕೂ ಹೇಡಿತನ ತೋರಲಾರೆ! ಆನೆಯ ಆರ್ಭಟದ ಕೂಗಿಗೆ ಸಿಂಹವು ಎಂದಾದರೂ ಅಂಜಬಹುದೇ? ಬಿರುಗಾಳಿಗೆ ಪರ್ವತವು ಅಲುಗಾಡಬಹುದೇ?? ಭಯಂಕರವಾದ ಮಳೆಗೆ ಸಮುದ್ರವು ಬೆದರ ಬಹುದೇ?? ಎಂದು ದೈತ್ಯ ಮಲ್ಲಾಸುರನು ಆಢ್ಯತೆಯಿಂದ ಮಾತನಾಡಿದನು. ಆಗ ಶಿವ ಪರಮಾತ್ಮನು ಆ ದೈತ್ಯನನ್ನು ನೋಡಿ

ನಗುತ್ತಾ ಎಲೋ ಮೂರ್ಖ ಶಿಖಾಮಣಿಯಾದ ಮಲ್ಲಾಸುರನೇ ಕೇಳು! ನಿನ್ನ ವ್ಯಕ್ತಿತ್ವವು ಸಿಂಹದಂತಿರಬಹುದು! ಆದರೆ ಸಿಂಹವನ್ನೇ ಬೇಟೆಯಾಡುವ ಗಂಡಭೇರುಂಡ ಪಕ್ಷಿಗೆ, ಸಿಂಹದ ಆಂಜಿಕೆ ತೋರಿಸುವಿಯಾ?... ಎಂದು ನುಡಿಯುತ್ತ, ಹರಿತವಾದ ಬಾಣಗಳ ಮಳೆಯನ್ನು ಆ ಮಲ್ಲಾಸುರನ ಮೇಲೆ ಪ್ರಯೋಗ ಮಾಡ್ತಾ ಇದ್ದಾನೆ. ಆಗ ಆ ಶರಗಳ ಆಘಾತದಿಂದ ರಾಕ್ಷಸನ ದೇಹದಲ್ಲಿ ಅನೇಕ ಗಾಯಗಳುಂಟಾಗಿ, ರಕ್ತವು ಕೋಡಿಯೋಪಾದಿಯಲ್ಲಿ ಧಾರಾಕಾರವಾಗಿ ಹರೀತಾ ಇದೆ! ಲೆಕ್ಕವಿಲ್ಲದಷ್ಟು ಗಾಯಗಳು ದೈತ್ಯನ ದೇಹದಲ್ಲುಂಟಾಗಿ, ಆತನ ದೇಹವು ಶಕ್ತಿ ಕುಂಠಿತವಾಗ್ತಾ ಇದೆ. ಎಂದು ಕವಿಯು ವರ್ಣನೆ ಮಾಡ್ತಾ ಇದ್ದಾನೆ.

ಕೂಡೆ ಖತಿಯಲಿ ಸಿಂಹಗರ್ಜನೆ। ಮಾಡಿ ರಾಕ್ಷಸ ಮಾಯ ವೇಷದಿ।
ರೂಢಿಯಲಿ ತಾ ಬಂದ ಮದಗಜವಾಗಿ ಕಾಳಗಕೆ॥
ನೋಡಿ ಪರಶಿವ ಡಮರು ಶಬ್ದವ। ಮಾಡಿ ಖಟ್ವಾಂಗಲಿ ತಾಡಿಸೆ।
ಬಾಡಿ ನೆಗೆದನು ಮೂರು ನೆಗೆತವ ಮತ್ತೆ ಘೀಳಿಡಿಸಿ ॥೭॥

ನೆಗೆದು ಪುಟಿ ಚಂಡಂತೆ ಬರುತಿರ । ಲಗಧರನ ಸಖ ಕಂಡು ಭಲೆಭಲೆ।
ವಿಗಡ ರಕ್ಕಸನೆನುತ ಹೊಗಳಿದ ಹರುಷ ಸೂಚಿಸುತೆ ।
ಜಿಗಿದು ವೋಡಿದರಬಬ ಸುರಗಣ । ನೆಗೆದು ಬಿದ್ದವು ಚುಕ್ಕೆ ನಿಕರವು।
ಗಗನ ಸಾರ್ದವು ಜಲಧಿ ತೆರೆಗಳು ದೈತ್ಯನಾರ್ಭಟಕೆ ॥೮॥

ಬರಸಿಡಿಲ ದನಿಯಂತೆ ಗರ್ಜಿಸೆ ।ಗಿರಿನಿಕರತಾ ನಡುಗಿ ತಕ್ಕಟ।
ಶರಧಿ ಜರಿದುದು ಮಳಲತೋರುತ ವಿತಳಲೋಕಕ್ಕೆ ॥
ಬರುವ ರಭಸದ ನಿನದ ಕೇಳುತ। ಪರಮ ಮಂಗಳಗೌರಿ ನಡುಗುತ।
ಹರಹರಾಯಂದೆನುತ ಬಿದ್ದಳು ಮೂರ್ಛಗತಳಾಗಿ ।೯॥

ಮತ್ತೆ ಶಿವನಾ ಡಮರು ಬಾರಿಸಿ।ಮತ್ತ ದೈತ್ಯನ ಮೇಲೆ ಕೋಪದಿ।
ಎತ್ತಿ ಹರಿತದ ಖಡ್ಗದಿಂದಲಿ ವಾಮ ಭಾಗಕ್ಕೆ ॥
ಮತ್ತೆ ಪ್ರಹರಿಸೆ ಸಿಂಹನಾದದಿ । ಮತ್ತ ನಾಗುತ ಬರಲು ಪರಶಿವ ।
ಎತ್ತಿ ಶೂಲದಿ ತಿವಿದ ದೈತ್ಯನ ಉದರತಾಣಕ್ಕೆ ।೧೦॥

ಶಬ್ದಾರ್ಥ :- ಕೂಡೆ = ಕೂಡಲೇ; ಡಮರು = ಬುಡಬುಡಿಕೆ; ಖಟ್ವಾಂಗ = ಮಂಚದಕಾಲು; ತಾಡಿಸು = ಹೊಡೆ; ನೆಗೆತ = ದಿಂಡರಿಕೆ; ಘೀಳಿಡು = ಆನೆಯ ಒದರುವಿಕೆ; ಅಗಧರನ ಸಖ = ಶಿವ; ವಿಗಡ = ಹುಂಬ; ಸುರಗಣ = ದೇವತೆಗಳ ಗುಂಪು; ಸಾರ್ದವು = ಹೋದವು; ಜಲಧಿ = ಸಮುದ್ರ; ಮಳಲು = ಉಸುಕು; ನಿನದ = ಸ್ವರ; ಮೂರ್ಛೆಗತಳಾಗಿ = ಎಚ್ಚರದಪ್ಪಿ; ಮತ್ತ = ಸೊಕ್ಕಿದ ವಾಮಭಾಗ = ಎಡ ಭಾಗ; ಉದರತಾಣ = ಹೊಟ್ಟೆಯಭಾಗ;

ಭಾವಾರ್ಥ :- ಕೂಡಲೇ ಮಲ್ಲಾಸುರನು ಸಿಂದಂತೆ ಗರ್ಜಿಸಿದನು. ಮತ್ತೂ ಆ ಮಾಯಾವಿಯು ಬೆಟ್ಟದೆತ್ತರದ ಮದ್ದಾನೆಯಾಗಿ ಕಾಳಗಕ್ಕೆ ನಿಂತನು, ಅದನ್ನು ನೋಡಿದ ಪರಶಿವನು, ಭಯಂಕರವಾಗಿ ಬುಡಬುಡಿಕೆಯನ್ನು ಬಾರಿಸಿ, ಮಂಚದ ಕಾಲಿನಂಥ ಆಯುಧ ದಿಂದ ಆ ಮದ್ದಾನೆಯ ಕುಂಭ ಸ್ಥಳಕ್ಕೆ

ಅಪ್ಪಳಿಸಿದನು. ಕೂಡಲೇ ಗಜರೂಪಿಯಾದ ದೈತ್ಯನು ಕಕ್ಕಾವಿಕ್ಕಿಯಾಗಿ, ಮೂರು ದಿಂಡರಿಕೆಗಳನ್ನು ಹಾಕಿ, ಮತ್ತೆ ಜಗಿದು ನಿಂತು, ಆನೆಯಂತೆ ಘೀಳಿಟ್ಟನು. ಮತ್ತೆ ಶಿವನೆದುರಿಗೆ ಅರ್ಭಟಿಸುತ್ತ ಬರುತ್ತಿರುವದನ್ನು ಗಮನಿಸಿದ ಶಿವನು ಆ ರಾಕ್ಷಸನ ಶೌರ್ಯಕ್ಕೆ ಬೆರಗಾಗಿ ''ಭಲೆ ಭಲೆ'' ಎಂದು ಆತನನ್ನು ಹೊಗಳಿದನು. ಈ ದೈತ್ಯನ ಈ ತೆರದ ಆರ್ಭಟವನ್ನು ಕಂಡ ದೇವತೆಗಳು ಜಗಿದು ದಿಕ್ಕಾಪಾಲಾಗಿ ಓಡತೊಡಗಿದರು. ಆ ಕಾಶದಲ್ಲಿದ್ದ ಎಷ್ಟೋ ನಕ್ಷತ್ರಗಳು, ಆ ರಾಕ್ಷಸನ ಗರ್ಜನೆಯಿಂದ ನೆಲಕ್ಕುದುರಿ ಬಿದ್ದವು. ಸಪ್ತಸಾಗರಗಳತೆರೆಗಳು ಆಕಾಶದಷ್ಟು ಎತ್ತರಕ್ಕೆ ಉಲ್ಬಣಿಸಿ, ತಳದಲ್ಲಿದ್ದ ಉಸುಕು ಗೋಚರಿಸ ತೊಡಗಿತು. ಮಲ್ಲ ದೈತ್ಯನು ಸಿಡಿಲ ಧ್ವನಿಯಂತೆ ಗುಡುಗಿದಾಗ, ಸಮುದ್ರವು ಪಾತಾಳಲೋಕಕ್ಕೆ ಸರಿದಂತಾಯಿತು, ಆ ಭೀಕರ ಸ್ವರವನ್ನು ಕೇಳುತ್ತಲೇ ಕೈಲಾಸದಲ್ಲಿದ್ದ ಗೌರಿಯು ಗದಗದ ನಡುಗಿ ಶಿವನನ್ನು ನೆನೆಸುತ್ತ ಮೂರ್ಛಿತಳಾಗಿ ಬಿದ್ದು ಬಿಟ್ಟಳು.

ನಂತರ ಶಿವನು ಮತ್ತೆ ಭೀಕರವಾಗಿ ಬುಡುಬುಡುಕೆ ಬಾರಿಸಿ, ಆ ಉನ್ಮತ್ತ ದೈತ್ಯನಿಗೆ ಕೋಪದಿಂದ ಹರಿತವಾದ ಖಡ್ಗದಿಂದ ಎಡ ಭಾಗಕ್ಕೆ ಇರಿದನು. ಅಷ್ಟಾದರೂ ದೈತ್ಯನು ತನ್ನ ಛಲ ಬಿಡದೇ ಮತ್ತೆ ಮತ್ತೆ ಏರಿ ಬರಲು, ಶಿವನು ಸಿಟ್ಟಿನಿಂದ ಆ ದೈತ್ಯನ ಹೊಟ್ಟೆಗೆ ತ್ರಿಶೂಲದಿಂದ ತಿವಿದನು.

ಎಷ್ಟು ಆಯುಧದಿಂದ ತಿವಿದರು । ನಷ್ಟವಾಗದ ದೈತ್ಯ ದೇಹವ ।
ದೆಷ್ಟು ಗಟ್ಟಿಗನೆನುತ ಯೋಚಿಸಿ ಮತ್ತೆ ಬಾಣಗಳ ॥
ಸೃಷ್ಟಿಸಿದ ಶಿವ ಖಳನು ಬೆದರದೆ । ದೃಷ್ಟಿ ಚದುರಿಸದಂತೆ ನೋಡುತ ।
ಸೃಷ್ಟಿ ಸಂಹಾರಕನ ಶರಗಳ ತರಿದು ಹಾಕಿದನು ॥೧೧॥

ಪರಶಿವನು ಕೆರಳುತ್ತೆ ದೈತ್ಯನ। ಶಿರವ ಹರಿಸಲು ಮುನಿಪಗಸ್ತ್ಯರ।
ಸರಳ ಮಂತ್ರಿಸಿ ಬಿಡಲು ಕೆಂಗಿಡಿ ಸೂಸಿ ಬರುತಿರಲು ॥
ಶರಧಿ ಬತ್ತಿತು ಜಲಚರಂಗಳು। ಮರಣ ಮಾರ್ಗವ ಧರಿಸಿ ಬಿದ್ದವು।
ತರಣಿ ನಡುಗಿದ ವಿಲಯ ಕಾಲವೆ ಬಂದಿತೆಂದೆನುತಾ ॥೧೨॥

ಉರಿ ಹೊಗೆಯು ತುಂಬಿದುದು ದಿಸೆ ದಿಸೆ । ತುರಗ ದಳ ಕರಿವಿಟ್ಟವಾಗಳೆ।
ಕರಿಗಳಸು ನೀಗಿದವು ಕಕ್ಕಳಿಸುತ್ತೆ ವಹ್ನಿಯಲಿ ॥
ಶರದ ಉಷ್ಣತೆಯಿಂದ ರಥಗಳು । ಕರಕು ವರೆದವು ಖಳನ ಸೈನ್ಯವು।
ನರಕ ಯಾತನೆ ಹೊಂದಿ ತತ್ತರಿಸಿತ್ತು ರಣದೊಳಗೆ ॥೧೩॥

ಒಡನೆ ಖಳ ವರುಣಾಸ್ತ್ರ ಬಿಡೆ ತಂ। ಪಡರಿತಾಗಳೆ ಜಗವು ಜಲಮಯ ।
ಪಡೆದು ಧಾರಾಕಾರ ಮಳೆ ಸುರಿದಿತ್ತು ಕಣದೊಳಗೆ ॥
ಮೃಡನು ನೋಡುತೆ ದೈತ್ಯನಸ್ತ್ರಕೆ। ಒಡನೆ ಪ್ರತಿಕಾರವನು ಹೂಡುತೆ ।
ಕಡೆಗೆ ಪಾಶುಪತಾಸ್ತ್ರಹೂಡುಲು ಮನವ ಮಾಡಿದನು ॥೧೪॥

ತೂರುತೆಲ್ಲೆಲ್ಲಿಂದೊ ಜಪ್ಪಿಸಿ। ಸಾರಮೇಯಗಳೋಡಿ ಬಂದವು।
ಹಾರಿ ಹರಿದವುದೈತ್ಯ ಜಂಘೆಯ ಘೋರ ಘಾತದಲೀ ॥
ಕಾರಿದವು ಕೆಂಗಿಡಿಯ ಕಣ್ಣಲಿ। ತೀರಿತೆಮ್ಮಯ ಛಲವು ಎನ್ನುತ ।
ಮಾರ ಹರ ಕೃಪೆಹೊಗಳಿದವು ಆ ವೇದ ನಾಯಿಗಳು ॥೧೫॥

ಶಬ್ದಾರ್ಥ :- ಸೃಷ್ಟಿಸಂಹಾರಕ = ಶಿವ; ಕೆರಳು = ಸಿಟ್ಟಿಗೇಳು; ಅಗಸ್ತ್ಯ = ಒಬ್ಬಮುನಿ; ಸರಳು = ಬಾಣ; ಜಲಚರಂಗಳು = ನೀರಿನಲ್ಲಿ ಬದುಕುವ ಪ್ರಾಣಿಗಳು; ತರಣಿ = ಸೂರ್ಯ; ವಿಲಯ = ಮಹಾಪ್ರಳಯ; ಕರಿವಿಡು = ಕಪ್ಪಾಗು; ಅಸು = ಪ್ರಾಣ; ಕಕ್ಕಳಿಸುತ್ತ = ಕೊರಗುತ್ತ; ವಹ್ನಿ = ಬೆಂಕಿ; ಕರಕುವರೆ = ಕಪ್ಪಾಗು; ತಂಪಡರು = ತಂಪಾಗು;

ಭಾವಾರ್ಥ.:- ಶಿವನು ಎಷ್ಟೇ ಆಯುಧಗಳಿಂದ ತಿವಿದರೂ ನಾಶವಾಗದ ಮಲ್ಲದೈತ್ಯನ ಗಟ್ಟಿ ಶರೀರವನ್ನು ಕಂಡು ಬೆರಗಾದನು. ''ಈ ಮಲ್ಲ ದೈತ್ಯನ ದೇಹ ಅದೆಷ್ಟು ಬಲಶಾಲಿಯಾಗಿದೆಯಲ್ಲಾ?'' ಎಂದು ಯೋಚಿಸುತ್ತ, ಹೊಸ ಹೊಸ ಬಾಣಗಳನ್ನು ಸೃಷ್ಟಿಸಿ , ಪ್ರಯೋಗ ಮಾಡಿದನು. ಆದರೂ ಮಲ್ಲದೈತ್ಯನು ಧೈರ್ಯಗೆಡದೆ ದೃಷ್ಟಿ ಅಲುಗಿಸದಂತೆ ನೋಡುತ್ತ ಸೃಷ್ಟಿಸಂಹಾರಕನಾದ ಆ ಶಿವನು ಬಿಟ್ಟ ಬಾಣಗಳನ್ನೆಲ್ಲ ಕತ್ತರಿಸಿ ಹಾಕತೊಡಗಿದನು. ಕೊನೆಗೆ ಬೇಸತ್ತ ಸಾಂಬನು, ಅಗಸ್ತ್ಯ ಮುನಿಗಳ ಮಂತ್ರೋಚ್ಚಾರ ಮಾಡಿ, ಮಹಾಶರವೊಂದನ್ನು ಪ್ರಯೋಗಿಸಿದನು. ಆ ಅದ್ಭುತವಾದ ಅಸ್ತ್ರದ ಆರ್ಭಟಕ್ಕೆ, ಹಾಗೂ ಅದು ಉಗಳುತ್ತ ಬರುವ ಕಿಡಿಗಳಿಗೆ, ಸಪ್ತ ಶರಧಿಗಳು ಬತ್ತಿದಂತಾದವು. ನೀರಿನೊಳಗಿದ್ದ ಪ್ರಾಣಿಗಳು ಮರಣವಪ್ಪಿದವು, ಸೂರ್ಯನು ಮಹಾಪ್ರಳಯ ಕಾಲವೇ ಬಂದೊದಗಿತೇನೋ ಎಂದು ಗಾಬರಿಗೊಂಡನು. ಆ ಅಸ್ತ್ರದ ಉರಿ, ಹೊಗೆಗಳಿಂದ ದಶದಿಕ್ಕುಗಳು ತುಂಬಿ ಹೋದವು. ಅಸ್ತ್ರದ ಜಳಕ್ಕೆ ದಂಡಿನಲ್ಲಿದ್ದ ಕುದುರೆಗಳೆಲ್ಲ ಸುಟ್ಟು ಕರಕಾಗಿ ಹೋದವು. ಆನೆಗಳು ಆ ಬೇಗೆಯಿಂದ ವದ್ದಾಡಿ ಬೆಂಕಿಯಿಲ್ಲಿ ಬಿದ್ದು ಸತ್ತು ಹೋದವು. ರಾಕ್ಷಸನ ಸೈನ್ಯವೆಲ್ಲ ನರಕಯಾತನೆಯನ್ನನು ಭವಿಸುತ್ತ ಬಾಧೆ ಪಡತೊಡಗಿತು. ಶಿವನು ಅದನ್ನೆಲ್ಲ ನೋಡಿ, ದೈತ್ಯನ ಮೇಲೆ ಅನೇಕ ಅಸ್ತ್ರಗಳನ್ನು ಪ್ರಯೋಗಿಸಿದರೂ, ಮಲ್ಲಾಸುರನು ಅವುಗಳಿಗೆಲ್ಲ ಪ್ರತಿಕಾರಾಸ್ತ್ರಗಳನ್ನು ಬಿಟ್ಟು ನಿವಾರಿಸತೊಡಗಿದನು. ಕೊನೆಗೆ ಬೇಸತ್ತು ಪರಶಿವನು ಈ ಮಹಾದೈತ್ಯನ ಮೇಲೆ ಪಾಶುಪತಾಸ್ತ್ರವನ್ನೇ ಪ್ರಯೋಗಿಸುವ ನಿರ್ಧಾರಕ್ಕೆ ಬಂದನು.

**ಭಾರಿ ಬೊಗುಳುತ ತೂರಿ ಕಚ್ಚಿದ । ಸಾರಮೇಯಗಳನ್ನು ಒದೆಯಲು।**
**ಹಾರಿದವು ಗಂಟಲಕೆ ಹೀರುತೆ ರಕ್ತ ಮಾಂಸಗಳ ॥**
**ಭಾರಿ ಕೋಲಾ ಹಲದಿ ದೈತ್ಯನು। ತೂರಿ ಒಗೆಯಲು ಶಿವನ ಪದದಲಿ ।**
**ಕಾರಣಿಕನೊಡಗೂಡಿ ಹೋರಾಡಿದವು ಹರುಷದಲಿ ॥೧೬॥**

ಭಾವಾರ್ಥ : ಅಷ್ಟರಲ್ಲಿ ವೇದಗಳೆಂಬ ನಾಯಿಗಳು, ಎಲ್ಲೆಲ್ಲಿಂದೋ ಜಿಗಿದು ಬಂದು, ಕೆಂಗಿಡಿಕಾರುತ್ತ, ದೈತ್ಯನ ತೊಡೆಗಳನ್ನು ಹರಿದವು, ತಮ್ಮ ಛಲ ತೀರಿಸಿದ ಉಪಕಾರಕ್ಕಾಗಿ ಶಿವನನ್ನು ಕೊಂಡಾಡಿದವು. ಭಯಂಕರವಾಗಿ ಬೊಗುಳುತ್ತ, ಹಾರಿ ಕಚ್ಚುತ್ತಿರುವ ಆ ನಾಯಿಗಳನ್ನು ರಾಕ್ಷಸನು ಒದೆಯಹೋದಾಗ, ಅವು ಸಿಟ್ಟಿನಿಂದ ಅವನ ಗಂಟಲಕ್ಕೆ ಹಾರಿ, ಸಿಕ್ಕಷ್ಟು ಮಾಂಸವನ್ನು ಸೆಳೆದುಕೊಂಡುವು. ಮತ್ತೂ ಕಾರಣಿಕ ಪುರುಷನಾದ ಪರಶಿವನ ಜೊತೆಗೂಡಿ, ರಣರಂಗದಲ್ಲಿ ರಾಕ್ಷಸನೊಡನೆ ಹೋರಾಡಿದವು.

ಶಿವನು ಪಾಶು ಪತಾಸ್ತ್ರವೆಸಗಲು। ತವಕಿಸಿತು ಖಳ ಶಕ್ತಿ ಪರ್ವತ।
ತವಕಿ ಮಲ್ಲಾಸುರನು ಹೊರಟಿರೆಕಂಡು ಪಶುಪತಿಯು॥
ತಿವಿದ ಶೂಲದಿ ಬಳಿಕ ರಕ್ಕಸ। ಭವನ ಪೆಟ್ಟನು ತಾಳಲಾರದೆ।
ಕವಿದು ಬಿದ್ದನು ಕಣ್ಣ ಹೊರಳಿಸಿ ಶೂಲಿ ಚರಣದಲಿ ॥೧೭॥

ಶಿವನ ಪದ ಸೋಂಕಿದೊಡೆ ದೈತ್ಯನ । ಭವದ ಕಲ್ಮಷ ವಳಿದು ಪೂರ್ವದ ।
ವಿವರ ತಿಳಿಯುತೆ ಪರಮ ಪಾವಿತ್ರ್ಯಾತ್ಮ ತಾನಾಗಿ ॥
ಕವಿದ ಭಕ್ತಿಯ ಭಾವದಿಂದಲಿ । ಶಿವನ ನಾಮಸ್ಮರಣೆ ಗೈಯ್ಯುತ ।
ಭವವಿದೂರನ ನೆನೆದ ಪುಳಕಾನಂದ ಪೂರಿತದಿ ॥೧೮॥

ಶಬ್ದಾರ್ಥ :- ತವಕಿ = ಅವಸರದಿಂದ; ಭವನ = ಶಿವನ; ಭವ = ಸಂಸಾರ; ಪದ = ಪಾದ; ಕಲ್ಮಷವಳಿದು = ಪಾಪನಾಶವಾಗಿ; ಭವ ವಿದೂರ = ಶಿವ.

ಭಾವಾರ್ಥ :- ಶಿವನು ಪಾಶು ಪತಾಸ್ತ್ರವನ್ನು ಪ್ರಯೋಗಿಸಿದಾಗ ದುಷ್ಟ ಶಕ್ತಿಯು ತಲ್ಲಣಗೊಂಡಿತು. ಮಲ್ಲಾಸುರನು ಪಾಶುಪತಾಸ್ತ್ರದಿಂದ ತಲ್ಲಣಗೊಂಡು, ಪರ್ವತದ ಬದಿಯಿಂದ ಅವಸರವಾಗಿ ಹೊರಟಿರುವಾಗ, ಭೈರವನು ಆತನನ್ನು ಶೂಲದಿಂದ ತಿವಿದು ಬಿಟ್ಟನು. ಶಿವನ ಆ ಪೆಟ್ಟನ್ನು ಸಹಿಸಲಾರದೇ

ಮಲ್ಲಾಸುರನು ಕಣ್ಣು ಹೊರಳಿಸುತ್ತ ಶಿವನ ಪಾದಗಳ ಮೇಲೆಯೇ ಬಿದ್ದು ಬಿಟ್ಟನು, ಪರಮಾತ್ಮನ ಪಾದ ಸ್ಪರ್ಶವಾದೊಡನೆಯೇ, ಮಲ್ಲಾಸುರನಿಗೆ ಜ್ಞಾನೋದಯವಾಯಿತು, ಆತನಿಗೆ ಪೂರ್ವ ಜನ್ಮಗಳ ವೃತ್ತಾಂತವೆಲ್ಲ ತಿಳಿದು ಹೋಯಿತು. ಆತನು ಪವಿತ್ರಾತ್ಮನಾಗಿ ಭಕ್ತಿ ಭಾವದಿಂದ ಶಿವ ಪಾದ ಹಿಡಿದು ಸ್ತೋತ್ರ ಮಾಡತೊಡಗಿದನು. ಆತನ ಮೈಮೇಲೆ ರೋಮಾಂಚನಗಳೆದ್ದವು. ಕಣ್ಣಿನಿಂದ ಆನಂದಾಶ್ರುಗಳುದುರ ತೊಡಗಿದವು. ಅವನು ಭಕ್ತಿಯಿಂದ ಪರಮಾತ್ಮನನ್ನು ಸ್ತುತಿಸ ತೊಡಗಿದನು.

ಇತೀ ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್. ಜೋಶಿ ವಿರಚಿತ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್,
ಮಾರ್ತಾಂಡ ಭೈರವ ಮಲ್ಲಾಸುರ ಯುದ್ಧ ವರ್ಣನೋ ನಾಮಕ ಏಕ ವಿಂಶೋಧ್ಯಾಯಃ ॥
ಅಂತು ಅಧ್ಯಾಯ ೨೧ ಕ್ಕಂ, ಪದ ೧೮೮ ಕ್ಕಂ, ಒಟ್ಟು ಪದ ೩೭೫೪ ಕ್ಕಂ, ಮಂಗಲ ಮಸ್ತು!.......

ಏಳುಕೋಟಿ! ಏಳುಕೋಟಿಗ! ಏಳುಕೋಟಿಗೋ!! ಸಾಂಗಬಲೋ !...



## ದ್ವಾವಿಂಶೋಧ್ಯಾಯಃ ೨೨ ನೇಯ ಅಧ್ಯಾಯ

## ಮಲ್ಲಾಸುರ ಕೃತ ಮಲ್ಲಾರಿ ಸ್ತೋತ್ರ

ಸೂಚನೆ :-

**ನೊಂದ ಮಲ್ಲಾಸುರನು ಭಕ್ತಿಯ। ಲಂದು ಪರಮೇಶ್ವರನ ನುತಿಸಲು।**
**ಬಂಧ ಮೋಚನಗೊಳಿಸಿ ಮೋಕ್ಷವನಿತ್ತ ಪುರಹರನು॥**

ಸೂಚನಾಪದ್ಯದ ಅರ್ಥ :- ''ನೋವನ್ನುಂಡ ಮಲ್ಲಾಸುರನು, ಭಕ್ತಿಭಾವದಿಂದ ಜ್ಞಾನೋದಯ ಹೊಂದಿ, ಪರಮಾತ್ಮನನ್ನು ಪರಿಪರಿಯಿಂದ ಸ್ತೋತ್ರ ಮಾಡಿದಾಗ, ಆತನ ಭಕ್ತಿಗೊಲಿದ ಪರಮೇಶ್ವರನು, ಅವನಿಗೆ ಭವ ಬಂಧನದ ಸಂಕೋಲೆಗಳನ್ನು ಕಳಚಿಸಿ, ಅಮೋಘವಾದ ಮುಕ್ತಿಯನ್ನು ದಯಪಾಲಿಸಿದನೆಂಬುದನ್ನು'' ಸೂಚಿಸುತ್ತ, ಕವಿಯು ಮುಂದಿನ ಕಥಾ ಭಾಗವನ್ನು ಈ ರೀತಿಯಾಗಿ ಹೇಳ್ತಾ ಇದ್ದಾನೆ. ......

**ಇಳೆಗೆ ಒರಗಲು ಮನದಹಂಕೃತಿ । ಅಳಿದು ಪರಮೇಶ್ವರನ ಚರಣದ।**
**ಲೊಲಿದು ಕಂಬನಿದುಂಬಿ ತುಳುಕುತ ಭಕ್ತಿ ಭಾವದಲಿ ॥**
**ಜಲರು ಹಾಸನ ವಿಷ್ಣು ಸುರಗಣ। ರೊಲಿದು ನುತಿಪರು ವೇದ ವಂದ್ಯನೆ।**
**ಸಲಿಸು ಮುಕುತಿಯ ಭವ ವಿಮೋಚನನೆನುತ ಕೊಂಡಾಡಿ ॥೧॥**

**ನಿನ್ನ ಸ್ಮರಣೆಯ ಮಾಡಿದವನಿಗೆ । ಉನ್ನತೋನ್ನತ ಪದವಿ ಬಪ್ಪುದು।**
**ಇನ್ನು ಸನಕಾದಿಗಳು ಧನ್ಯರು ನಿನ್ನ ಸೇವಿಸಿದ ॥**
**ಘನ್ನ ಮಹಿಮನೆ ಸರ್ಪಭೂಷಣ। ಮನ್ನಿಸೆನ್ನನು ನಿನ್ನ ಕರುಣಾ।**
**ಸನ್ನುತಾಮಳ ವಿಮಲ ಮುಕುತಿಯನೆಂದನಾ ಮಲ್ಲ ॥೨॥**

ಹಿಂದೆ ಮಾಡಿದ ತಪ್ಪು ತಡೆಗಳ । ತಂದೆ ನೀನೆನಿಸುತ್ತ ಕ್ಷಮಿಪುದು ।
ಇಂದು ಧರ ತವ ಪಾದ ಪದ್ಮದ ಸುಖವ ನೀಡೆನಗೆ॥
ಕಂದನಾಕೆಡು ಗೆಲಸವಮ್ಮನು। ಹೊಂದಿ ಕ್ಷಮಿಸುವ ತೆರದೊಳೆನ್ನನು।
ತಂದೆತಾಯ್ ಸರ್ವಸ್ವ ನೀನೆನಿಸುತ್ತ ಪೊರೆಯುವದು ।೩॥

ಮಂದಮತಿ ನಾ ನಿನ್ನ ತಿಳಿಯದೆ । ಎಂದಿಗೆಂದಿಗು ವೈರ ಸಾಧಿಸಿ ।
ಬಂದೆ ನೈ ದೈತ್ಯೇಂದ್ರನಾಗುತ ಜನುಮ ಜನುಮದಲಿ ॥
ಬಂಧ ಮೋಕ್ಷಗಳೊಡೆಯ ನೀನೆ। ಎಂದು ಹೊಳೆಯದೆ ಮೋಸ ಹೋದೆನು।
ಬಂಧನವ ಬಿಡಿಸಯ್ಯ ಶಿವ ಶಿವ ಪಾಹಿ ಪರಮೇಶಾ ।೪॥

ಮಾಯೆ ನಿರ್ವಿದ್ಯೆಗಳ ಸಂಗಮ । ವಾಯಿತೈ ವಿಧ ವಿಧದ ಜೀವರು।
ಮಾಯೆ ವಿದ್ಯಾ ರೂಪವೇ ನೀ ನಿರುವಿ ಪರಮಾತ್ಮಾ॥
ಆಯವಿಲ್ಲದ ಆಸೆ ಬುದ್ಧಿಯು। ಕಾಯವೇ ನಾನೆಂಬಹಂಕೃತಿ।
ಮಾಯೆಯಿಂದೊಡಗೂಡಿ ಸೇರಿದವೆಲ್ಲ ಜೀವರೊಳು ।೫॥

ಶಬ್ದಾರ್ಥ :- ಅಹಂಕೃತಿ = ಅಹಂಕಾರ; ಜಲರುಹಾಸನ = ಬ್ರಹ್ಮ; ಸಲಿಸು = ಕೊಡು; ಸನ್ನುತಾಮಳ = ಶ್ರೇಷ್ಠ ಮತ್ತೂ ಪವಿತ್ರವಾದ; ಹೊಳೆಯದೆ = ತಿಳಿಯದೆ; ನಿರ್ವಿದ್ಯೆ = ಅವಿದ್ಯಾ; ಸಂಗಮ = ಕೂಡುವಿಕೆ; ಜೀವರು = ಜೀವಿಗಳು.

ಭಾವಾರ್ಥ :- ಮಲ್ಲ ದೈತ್ಯನ ದೇಹವು ಭೂಮಿಗೆ ಬಿದ್ದೊಡನೆಯೇ, ಆತನ ಮನದಲ್ಲಿದ್ದ ಅಹಂಕಾರವು ಅಳಿದು ಹೋಯಿತು. ಆತನು ಮಾರ್ತಾಂಡ ಭೈರವನ ಪಾದ ಕಮಲಗಳಲ್ಲಿ ತಲೆಯಿಟ್ಟು ಭಕ್ತಿ ಭಾವದಿಂದ ಆನಂದಾಶ್ರುಗಳನ್ನು ದುರಿಸುತ್ತ ಈ ರೀತಿಯಾಗಿ ಸ್ತೋತ್ರ ಮಾಡತೊಡಗಿದನು. ''ಪ್ರಭೂ! ಪರಮಾತ್ಮಾ! ನೀನು ಬ್ರಹ್ಮ ವಿಷ್ಣು ಸುರಗಣಗಳಿಂದ ಪೂಜೆ ಮಾಡಿಸಿಕೊಳ್ಳುವವನೂ, ವೇದ ವಂದ್ಯನೂ, ಆಗಿರುವಿ, ದಯಮಾಡಿ ನನಗೂ ಸರ್ವಶ್ರೇಷ್ಠವಾದ ಮುಕ್ತಿ ಪದವನ್ನಿತ್ತು, ನನ್ನನ್ನುದ್ಧಾರಗೊಳಿಸು! ಈ ಭವ ಸಾಗರದಿಂದ ಪಾರುಗಾಣಿಸು'' ಎಂದು ಪರಿಪರಿಯಿಂದ ಸ್ತುತಿಸತೊಡಗಿದನು.

ಪರಮಾತ್ಮಾ! ನಿನ್ನ ಸ್ಮರಣೆ ಮಾಡಿದವರಿಗೆ ನೀನು ಉನ್ನತೋನ್ನತ ಪದವಿಗಳನ್ನು ಕೊಡುತ್ತಲೇ ಬಂದಿರುವಿ! ಇನ್ನು ನಿನ್ನನ್ನು ಸೇವಿಸಿದ ಸನಕಾದಿ ಮಹಾತ್ಮರಂತೂ ಪುಣ್ಯವಂತರೇ ಸರಿ!.... ಘನವಾದ ಮಹಿಮೆಯುಳ್ಳವನೇ! ಸರ್ಪಭೂಷಣನೇ! ಕರುಣಾ ಭಾವದಿಂದ ನನ್ನ ತಪ್ಪನ್ನೆಲ್ಲ ಕ್ಷಮಿಸಿ ಬಿಡು! ಶ್ರೇಷ್ಠವಾದ ಮುಕ್ತಿಯನ್ನು ನನಗಿತ್ತು ಉದ್ಧಾರಗೊಳಿಸು! ನಾನು ಈ ಹಿಂದಿನ ಜನ್ಮಗಳಲ್ಲಿ ಮಾಡಿದ ತಪ್ಪು ತಡೆಗಳನ್ನೆಲ್ಲ, ಮಕ್ಕಳ ತಪ್ಪನ್ನು ತಂದೆ ಕ್ಷಮಿಸುವಂತೆ, ನೀನು ಕ್ಷಮಿಸಿ ಕಾಪಾಡು! ನಿನ್ನ ಪಾದ ಕಮಲಗಳಲ್ಲಿ ಸ್ಥಿರವಾಗಿ ನೆಲೆಸುವ ಸುಖವನ್ನು ನನಗೆ ನೀಡು! ತಾಯಿಯಾದವಳು ತನ್ನ ಮಕ್ಕಳು ಏನೇ ತಪ್ಪು ಮಾಡಿದ್ದರೂ, ಅದನ್ನೆಲ್ಲ ಔದಾರ್ಯದಿಂದ ಹೊಟ್ಟೆಯಲ್ಲಿ ಹಾಕಿಕೊಳ್ಳುವಂತೆ, ನೀನೇ ತಾಯಿಯಾಗಿ, ತಂದೆಯಾಗಿ, ನನ್ನ ಪಾಲಿನ ಸರ್ವಸ್ವವೇ ನೀನಾಗಿ ನನ್ನನ್ನುದ್ಧಾರಗೊಳಿಸು!...

ಪರಮಾತ್ಮಾ ! ನಾನು ಬುದ್ಧಿ ಹೀನನಾಗಿದ್ದೇನೆ!.... ನನ್ನಂಥ ಪಾಪಾತ್ಮ ಇನ್ನೊಬ್ಬನಿಲ್ಲ. ನಿನ್ನ ಹೃದಯ ವೈಶಾಲ್ಯತೆಯನ್ನು ಎಂದೆಂದಿಗೂ ನನಗೆ ಅರ್ಥಮಾಡಿಕೊಳ್ಳುವದು ಸಾಧ್ಯವಾಗಲಿಲ್ಲ. ಜನ್ಮ ಜನ್ಮಾಂತರಗಳಿಂದಲೂ ದೈತ್ಯಕುಲದಲ್ಲಿ ಜನಿಸಿ, ನಿನಗೆ ವಿರೋಧಿಯಾದ ದೈತ್ಯೇಂದ್ರನೆನಿಸುತ್ತಲೇ ಹುಟ್ಟಿ ಬಂದೆ. ಮಾನವನ ಹುಟ್ಟು ಸಾವುಗಳ ಭವಬಂಧನಕ್ಕೆ ನೀನೇ ಕಾರಣನೆಂಬುದನ್ನು ತಿಳಿದುಕೊಳ್ಳಲಾಗದೇ, ನಾನು ಇಲ್ಲಿಯ ವರೆಗೆ ಮೋಸ ಹೋಗಿಬಿಟ್ಟೆ, ಇನ್ನಾದರೂ ನನ್ನ ಭವ ಬಂಧನವನ್ನು ಬಿಡಿಸಿ, ನನ್ನನ್ನು ಮುಕ್ತಗೊಳಿಸು ತಂದೇ! ನೀನೇ ನನ್ನನ್ನು ಉದ್ಧಾರಗೊಳಿಸಬೇಕು! '' ಎಂದು ಪರಿಪರಿಯಾಗಿ ಬಿನ್ನಯಿಸಿ ಕೇಳಿಕೊಳ್ತಾ ಇದ್ದಾನೆ ಪಶ್ಚಾತ್ತಾಪದಿಂದ ಪರಿಶುದ್ಧನಾದ ಭಕ್ತ ಮಲ್ಲಾಸುರ.

ಮತ್ತೂ ಏನು ಹೇಳ್ತಾನೇ ಅಂದ್ರೆ.... ಪರಮಾತ್ಮಾ!... ಮಾಯಾ ಅವಿದ್ಯೆಗಳ ಸಂಗಮದಿಂದಾಗಿ, ಸಕಲ ಜೀವಾತ್ಮರು ಉದ್ಭೂತರಾದರು. ಮಾಯೆಯ ವಿದ್ಯಾರೂಪವೇ ನೀನಾಗಿರುವಿ! ಅಳತೆಯಿಲ್ಲದ ಆಶಾ ಬುದ್ಧಿ, ದೇಹವೇ ನಾನೆಂಬ ಅಹಂಕಾರ, ಹರ್ಷ, ಕ್ರೋಧ, ದಂಭ, ವೀರ್ಯ, ಕ್ರಿಯಾ, ಶಕ್ತಿ, ಶೌರ್ಯ ಜ್ಞಾನ, ವಿದ್ಯೆ, ಭಕ್ತಿ, ಮೋಹ, ಕಾಮ, ಧರ್ಮ, ಮುಂತಾದ ಭಾವಗಳಿಂದ ನೀನೇ ಜೀವಾತ್ಮವಾಗಿ, ಸಕಲ ಜೀವಿಗಳಲ್ಲಿಯೂ, ಚರಾಚರ ವಸ್ತುಗಳಲ್ಲಿಯೂ, ವ್ಯಾಪಿಸಿಕೊಂಡಿರುವಿ.

ನಿನ್ನ ಲೀಲೆಯ ಆಳ ತಿಳಿಯದು । ನಿನ್ನ ಲೀಲೆಯ ತಂತ್ರ ತಿಳಿಯದು ।
ನಿನ್ನ ಲೀಲಾ ತಂತ್ರ ತಿಳಿದವ ನೀನೆ ಆಗುವನು ॥
ನಿನ್ನ ಮಾಯೆಯು ಜಯಿಸಲಸದಳ ।ನಿನ್ನ ರೂಪವು ಜ್ಞಾನ ಗೋಚರ।
ನಿನ್ನ ಆರಾಧನೆಯೆ ಮುಕುತಿಗೆ ಯೋಗ್ಯವಾಗಿಹುದು ।೬॥

ಶುಲಭವಾಗಿದೆ ನಿನ್ನ ಧ್ಯಾನವು । ಶುಲಭವಾಗಿದೆ ಭಕ್ತಿ ಪಂಥವು।
ಶುಲಭದಲೆ ನೀ ದೊರೆವೆ ಭಕುತರಿಗೊಲಿದು ಪದ ಕೊಡುವೆ ॥
ಉಳಿದ ಯೋಗಾದಿಗಳು ಕರ್ಮದ । ಲೊಲಿವಿಯಾದರು ಪಥವು ಕಠಿಣವು ।
ಶುಲಭವಿದೆ ಸದ್ಭಕ್ತಿ ಮಾರ್ಗವು ಹಾಲಿನಂತಿಹುದು ।೭॥

ತಿಳಿದು ನೋಡಿದರೆಲ್ಲ ನೀನೆಹೆ। ಬಲಿ ಪಶುಗಳಾಗಿಹರು ಜೀವರು ।
ಎಲೆ ಶಿವನೆ ನಿನ್ನಾಟದಲಿ ನಮಗೆಲ್ಲಿ ಸ್ವಾತಂತ್ರ್ಯ ॥
ಆಳಿಸುವವನೀ ನಗಿಸುವವ ನೀ ॥ ತಿಳಿಸಿ ಧರ್ಮಾದಿ ನಡಿಸುವವ ನೀ।
ಇಳೆಯೆ ನಿನ್ನಯ ನಾಟ್ಯರಂಗದ ಮಂದಿರಾಗಿಹುದು ।೮॥

ಶಬ್ದಾರ್ಥ :- ಜ್ಞಾನಗೋಚರ = ಜ್ಞಾನದಿಂದ ಮಾತ್ರ ನೋಡಲು ಸಾಧ್ಯವಾಗುವ; ಅಸದಳ = ಅಸಾಧ್ಯ; ಪಂಥ = ಮಾರ್ಗ;
ಪದ = ಪದವಿ; ಬಲಿಪಶು = ಯಜ್ಞಾಹುತಿಗಾಗಿ ಮೀಸಲಿಟ್ಟ ಪ್ರಾಣಿ.

ಭಾವಾರ್ಥ :- ಪರಮಾತ್ಮಾ! ನಿನ್ನ ಲೀಲೆಯ ಆಳ, ನಿನ್ನಲೀಲೆಯ ತಂತ್ರಗಳು ಜೀವಿಗಳಿಗೆ ತಿಳಿಯುವದು ಅಸಾಧ್ಯವಾಗಿದೆ, ಒಂದು ವೇಳೆ ಯಾರಾದರೂ ನಿನ್ನ ಲೀಲೆಯ ಆಳ-ತಂತ್ರಗಳನ್ನು ಅರಿತದ್ದಾದರೆ, ಆ ಜೀವಿಯೇ ಪರಮಾತ್ಮ ನೆನಿಸಿ ಬಿಡುವನು. ಹೀಗೆ ನಿನ್ನ ಮಾಯೆಯು ಜಯಿಸಲಸಾಧ್ಯವಾದದ್ದೂ, ಜ್ಞಾನದೃಷ್ಟಿಯಿಂದ ಮಾತ್ರ ಗೋಚರಿಸುವಂಥದ್ದೂ, ಆಗಿರುತ್ತದೆ. ನಿನ್ನನ್ನು ಆರಾಧಿಸುವದೇ ಮುಕ್ತಿ ಹೊಂದುವದಕ್ಕೆ ಯೋಗ್ಯವಾಗಿದೆ. ಯಾಕೆಂದರೆ, ನಿನ್ನ ಸ್ಮರಣೆ ಮಾಡುವದು ಬಹು ಶುಲಭವಾಗಿದೆ. ಭಕ್ತಿ ಪಂಥವು ಉಳಿದ ಮಾರ್ಗಗಳಿಗಿಂತ ಬಹು ಶುಲಭವೂ, ಅಪಾಯಕಾರಿ ಅಲ್ಲದ್ದೂ, ಆಗಿರುತ್ತದೆ. ಆ ಮಾರ್ಗದಲ್ಲಿ ನಡೆದ ಸದ್ಭಕ್ತರಿಗೆ ನೀನು ಶುಲಭವಾಗಿ ಒಲಿದು ಸತ್ಫಲಗಳನ್ನು ಕೊಟ್ಟೇ ಕೊಡುವಿ. ನಿನ್ನನ್ನು ಒಲಿಸಿಕೊಳ್ಳುವದಕ್ಕೆ ಜ್ಞಾನ ಮಾರ್ಗ, ಕರ್ಮಮಾರ್ಗ, ಯೋಗ ಮಾರ್ಗಗಳಿಂದ ಸಾಧ್ಯವಾಗಬಹುದಾದರೂ, ಆ ಮಾರ್ಗಗಳು ಪ್ರಾಪಂಚಿಕರಿಗೆ ಆಚರಿಸಲು ಕಠಿಣವೆನಿಸುತ್ತವೆ. ಭಕ್ತಿ ಮಾರ್ಗಮಾತ್ರ, ನಿನ್ನನ್ನೊಲಿಸಿಕೊಳ್ಳಲು ನಿರಪಾಯಕಾರಿಯೂ, ಶುಲಭವೂ ಆಗಿದೆ.

ಪರಮಾತ್ಮಾ ಽ!..... ವಿಚಾರಮಾಡಿ ನೋಡಿದರೆ, ಈ ಜಗತ್ತಿನಲ್ಲೆಲ್ಲ ನೀನೇ ತುಂಬಿ ಕೊಂಡಿರುವಿ. ಆದರೆ, ನಿನ್ನ ರೂಪವೇ ಆಗಿರುವ ಜೀವಿಗಳು ಮಾತ್ರ ಬಲಿಪಶುಗಳಂತಿದ್ದಾರೆ. ಮಹತೋ ಮಹಿಮನಾದ ನಿನ್ನ ಲೀಲಾ ನಾಟಕದಲ್ಲಿ ಜೀವಿಗಳಿಗೆ ಸ್ವಾತಂತ್ರ್ಯವೆಂಬುದಾದರೂ ಎಲ್ಲಿದೆ? ಅಪಾರ ದುಃಖವಿತ್ತು ಅಳಿಸುವವನೂ ನೀನೇ; ಆಲ್ಹಾದ ಕೊಟ್ಟು ನಗಿಸುವವನೂ ನೀನೇ ; ಸುಜ್ಞಾನ ಕೊಟ್ಟು ಧರ್ಮದಂತೆ ನಡಿಸುವವನೂ ನೀನೇ; ಒಟ್ಟಾರೆ ಈ ಭೂಮಿಯೆಲ್ಲವೂ ನಿನ್ನ ನಾಟಕದ ರಂಗಮಂದಿರವಾಗಿದೆ.

**ಖಳನ ಪಾತ್ರನಗಿತ್ತವನು ನೀ । ಉಳಿದ ಪಾತ್ರವ ಹಂಚಿದವನೀ ।**
**ಖಳನು ಇವನೆಂದೆನಿಸಿ ಏತಕೆ ಹರಲಿ ಮಾಡುವಿಯೊ ॥**
**ನಳಿನ ನಾಭನ ಸಖನೆ ನೀನಿತ್ । ಇಳೆಯ ಪಾತ್ರಕೆ ರಂಗುಮೆರೆಸಿದೆ ।**
**ತುಳಿವರೆ ಯನ್ನೊಡೆಯ ಶಿರವನು ಪಾದದಲಿ ಧರಿಸು ॥೯॥**

ಶಬ್ದಾರ್ಥ:- ಖಳ = ದುಷ್ಟ ; ಇಳೆಯ = ಭೂಮಿಯ; ನಳಿನನಾಭನ ಸಖ = ಶಿವ.

ಭಾವಾರ್ಥ :- ''ಪರಮಾತ್ಮಾ! ನನ್ನಗೆ ದುಷ್ಟಪಾತ್ರವನ್ನು ಕೊಟ್ಟವನೂ ನೀನೆ!... ಉಳಿದ ಎಲ್ಲ ಪಾತ್ರಗಳನ್ನು ಹಂಚಿದವನೂ ನೀನೆ!.. ಹೀಗಿದ್ದೂ, ಇವನೇ ಕೆಟ್ಟವನೆಂದು ನನ್ನನ್ನೇತಕ್ಕೆ ಹರಲಿ ಮಾಡುತ್ತಿರುವಿ? ಪರಮಾತ್ಮ! ನಿನ್ನ ರಂಗ ಮಂದಿರವಾದ ಈ ಭೂಮಿಯಲ್ಲಿ ನೀನು ನನಗೆ ಕೊಟ್ಟ ಪಾತ್ರವನ್ನು ನಾನು ಸಮರ್ಥವಾಗಿ ಸರಿದೂಗಿಸಿದ್ದೇನೆ. ನೀನು ಕೊಟ್ಟ ಪಾತ್ರಕ್ಕೆ ಮೆರಗು ತಂದಿದ್ದೇನೆ. ಹೀಗಿರುವಾಗ ನನ್ನನ್ನು ಪದ ತಲದಲ್ಲಿ ತುಳಿಯುವದು ಯೋಗ್ಯವಲ್ಲ ಪ್ರಭೂ! ನನ್ನ ಸಿರಸ್ಸನ್ನು ದಯವಿಟ್ಟು ಕಮಲದಂತೆ ನಿನ್ನ ಪವಿತ್ರಪಾದಗಳ ಮೇಲೆ ಧರಿಸಿ, ನನ್ನನ್ನುದ್ಧಾರಗೊಳಿಸು.'' ಅಂತಾ ಪ್ರಾರ್ಥನೆ ಮಾಡಿಕೊಳ್ತಾ ಇದ್ದಾನೆ ಮಲ್ಲಾಸುರ ಮತ್ತೂ ಏನು ಹೇಳ್ತಾನೇ ಅಂದ್ರೆ....

**ಎಲ್ಲಿ ಸ್ವಾತಂತ್ರ್ಯವಿದೆ ಈ ಧರೆ।ಯಲ್ಲಿ ಜೀವಾತ್ಮರಿಗೆ ಕರ್ಮಗ।**
**ಳೆಲ್ಲವನು ಪ್ರೇರೇಪಿಸುವ ನೀ ಸೂತ್ರಧರನಿರಲು ॥**
**ಎಲ್ಲ ಪಾಪ ಸುಪುಣ್ಯ ಕರ್ಮಗ । ಳಲ್ಲಿ ಪ್ರೇರಕ ನೀನೆ ಆಗಿಹೆ ।**
**ಎಲ್ಲವನು ನಾಮಾಡಿದೆನುವರು ಜಗದಿ ಜೀವಿಗಳು ॥೧೦॥**

**ಜಗವಿದೆಲ್ಲವ ಸೃಜಿಪೆ ನೀನೇ । ಸೊಗಸಿನಲಿ ರಕ್ಷಿಪನು ನೀನೆ ।**
**ಬಗಿದು ಸಂಹರಿಸುವನು ನೀನೇ ಕಾಲ ಕಾಲದಲಿ ॥**
**ಜಗದ ಸಚರಾಚರದ ಪ್ರಾಣಿಗ । ಳೊಗುಮಿಗೆಯ ಜೀವಾತ್ಮನೆನಿಸುತ ।**
**ಬಗೆ ಬಗೆಯ ರೂಪಂಗಳಲ್ಲಿಯು ನೀನೆ ತುಂಬಿರುವಿ ॥೧೧॥**

ಶಬ್ದಾರ್ಥ :- ಪ್ರೇರೇಪಿಸುವ = ಚಾಲನೆಕೊಡುವ; ಸೂತ್ರಧರ = ಆಡಿಸುವವ; ಪ್ರೇರಕ = ಪ್ರೇರೇಪಿಸುವವ; ಸೃಜಿಪೆ = ಸೃಷ್ಟಿಸುವೆ; ಸಚರಾಚರ = ಸ್ಥಾವರ-ಜಂಗಮ; ಒಗುವಿಗೆ = ಮಹತ್ವದ; ರೂಪಂಗಳಲ್ಲಿ = ರೂಪಗಳಲ್ಲಿ.

ಭಾವಾರ್ಥ :- ಪರಮಾತ್ಮಾ! ವಿಚಾರಮಾಡಿ ನೋಡಿದರೆ ಈ ಜಗತ್ತಿನಲ್ಲಿ ಹುಟ್ಟಿಬಂದ ಜೀವಾತ್ಮರಿಗೆ , ಸ್ವಾತಂತ್ರ್ಯವೆಂಬುದೇ ಇಲ್ಲ. ಯಾಕೆಂದರೆ ಅವರು ಒಳ್ಳೇದನ್ನೇಮಾಡಲಿ, ಕೆಟ್ಟದ್ದನ್ನೇ ಮಾಡಲೀ, ಅದಕ್ಕೆ ಪ್ರೇರಕನೇ ನೀನಾಗಿರುತ್ತೀ! ನೀನು ಸೂತ್ರವಾಡಿಸಿದಂತೆ ಜಗತ್ತಿನ ಜೀವಿಗಳು ಕುಣಿಯುವರು. ಆದರ ಅರ್ಥಮಾಡಿಕೊಳ್ಳಲಾರದೆ, ಜಗತ್ತಿನ ಜೀವಿಗಳೆಲ್ಲ "ಇದನ್ನು ನಾನೇ ಮಾಡಿದೆ; ಇದನ್ನು ನಾನೇ ನೋಡಿದೆ; ಎಂದು ಅಹಂಕಾರದಿಂದ ನುಡಿಯುವರು. ಈ ಜಗತ್ತನ್ನು ಸೃಷ್ಟಿಸುವವನೂ ನೀನೇ ಆಗಿರುವಿ, ಹದವರಿತು ಅದಕ್ಕೆ ಪಾಲನೆ ಪೋಷಣೆ ಮಾಡುವವನೂ ನೀನೇ ಆಗಿರುವಿ, ಅಂತ್ಯದಲ್ಲಿ ಅದನ್ನು ಕಾಲಕಾಲಕ್ಕೆ ನಾಶಮಾಡುವ ಪ್ರಲಯರುದ್ರನೂ ನೀನೇ ಆಗಿರುವಿ, ಈ ಜಗತ್ತಿನ ಸ್ಥಾವರ ಜಂಗಮ ಜೀವಿಗಳಲ್ಲೆಲ್ಲ ಮಹತ್ವದ ಜೀವಾತ್ಮನೆನಿಸಿ ನೀನು ಒಳಗೇ ಇರುತ್ತಿ! ಜಗತ್ತಿನಲ್ಲಿ ಕಂಡು ಬರುವ ಆನೆ, ಕುದುರೆ, ಕತ್ತೆ, ನಾಯಿ-ಮಂಗ, ಮನುಷ್ಯ ಮುಂತಾದ ಅನೇಕ ರೂಪಗಳಲ್ಲಿ ನೀನೇ ತುಂಬಿಕೊಂಡು ಗೋಚರಿಸುತ್ತಿರುವಿ, ಸತ್ಯವಾಗಿ ಈ ಜಗತ್ತೆಲ್ಲ ಶಿವಮಯವೇ ಆಗಿದೆ.

ಜೀವ ಜಾಲದೊಳೆಲ್ಲ ನೀನೇ । ತೀವಿ ಕೊಂಡಿಹೆ ಸಕಳ ಜೀವರ ।
ಜೀವ ಕಂಟದ ಭ್ರಮೆಯ ರೂಪದಿ ನೀನು ಕಂಗೊಳಿಪೆ ॥
ಕಾವಿ ಈ ಜೀವರನು ನೀನೇ। ಆವದಕು ಸಾಕ್ಷ್ಯಾಗಿ ನೀರಿನ ।
ತಾವರೆಯ ತೆರದಂತೆ ನೀನೆಹೆ ನಿತ್ಯ ನಿರ್ಲಿಪ್ತ ॥೧೨॥

ನೀನೆ ಕೋಪದ ರೂಪನಾಗಿಹಿ। ನೀನೆ ಜಂಭದ ರೂಪ ತಾಳುವಿ।
ನೀನೆ ಧೀರರ ಶೌರ್ಯ ಸಾಹಸ ರೂಪನೆನಿಸಿರುವಿ ॥
ನೀನೆ ಜ್ಞಾನಿಯ ಜ್ಞಾನ ರೂಪನು। ನೀನೆ ಭಕ್ತರ ಭಕ್ತಿ ರೂಪನು।
ನೀನೆ ಯೋಗೀಶ್ವರನು ಚಿತ್ಸುಖ ಜೀವ ಪರಮಾತ್ಮ ॥೧೩॥

ನಮಿಪೆ ನಿನ್ನಾನಂತ ರೂಪಕೆ । ನಮಿಸುವೆನು ಸೂಕ್ಷ್ಮಾತಿ ಸೂಕ್ಷ್ಮಗೆ ।
ನಮಿಪೆ ಮಹತೋಮಹಿಮ ನಾಗುತ ತೋರಿ ಮೆರೆದವಗೆ ॥
ನಮಿಸುವೆನು ಬ್ರಹ್ಮಾಂಡ ರೂಪಗೆ। ನಮಿಸುವೆನು ಬ್ರಹ್ಮಾಂಡ ಪಾಲಗೆ।
ನಮಿಸುವೆನು ಮಾರ್ತಾಂಡ ಭೈರವ ಏಳು ಕೋಟಿಗಗೆ ॥೧೪॥

ಎಂದು ಪರಮೇಶ್ವರನ ಪದಗಳ । ನಂದು ತೋಯಿಸೆ ಭಕ್ತಿ ಭಾಷ್ಪದಿ।
ಇಂದುಧರ ಮುದಗೊಂಡು ಎತ್ತಿದನವನ ಸಂತೈಸಿ॥
ಕಂದ ಮಲ್ಲನೆ ಮೆಚ್ಚಿದೆನು ನಾಂ । ಇಂದು ರಣದಲಿ ತೋರ್ದ ಶೌರ್ಯಕೆ।
ಚೆಂದದೀ ಸ್ತುತಿ ಕೇಳಿ ಮನವಾನಂದ ಮಯವಾಯ್ತು ॥೧೫॥

ಶಬ್ದಾರ್ಥ :- ಜಾಲ = ಸರಪಣಿ (ಬಲೆ) ಭ್ರಮೆ = ಹುಚ್ಚು; ಕಾವಿ = ಕಾಯುವಿ; ಸಾಕ್ಷ್ಯಾಗಿ = ಸಾಕ್ಷೀಭೂತನಾಗಿ; ತೀವಿಕೊಂಡಿಹೆ = ತುಂಬಿಕೊಂಡಿಹೆ; ತಾವರೆ = ಕಮಲ; ನಿತ್ಯ ನಿರ್ಲಿಪ್ತ = ಯಾವದನ್ನೂ ಅಂಟಿಸಿಕೊಳ್ಳದವ. ಜಂಭ - ಢಂಬಾಚಾರ; ಕೋಪ = ಸಿಟ್ಟು; ಸೂಕ್ಷ್ಮಾತಿ ಸೂಕ್ಷ್ಮ = ಕಣ್ಣಿಗೆ ಕಾಣಿಸದಷ್ಟು ಚಿಕ್ಕದಾದ ; ಮಹತೋಮಹಿಮ = ವರ್ಣಿಸಲಾಗದಷ್ಟು ದೊಡ್ಡ; ಭಾಷ್ಪ = ಆನಂದಾಶ್ರು; ಮುದಗೊಂಡು = ಸಂತೋಷಪಟ್ಟು; ನಾಂ = ನಾನು.

ಭಾವಾರ್ಥ :- ಪರಮಾತ್ಮಾ!.. ಈ ಜಗತ್ತಿನ ಜೀವ ಸರಪಳಿಯಲ್ಲೆಲ್ಲ ನೀನೇ ಹಾಸುಹೊಕ್ಕಾಗಿ ತುಂಬಿಕೊಂಡಿರುವಿ ! ಜೀವಾತ್ಮರಿ ಅಂಟಿಕೊಂಡ ಭ್ರಮೆಯ ರೂಪದಲ್ಲಿ ನೀನು ಗೋಚರಿಸುವಿ!... ಈ ಜಗದ ಜೀವಿಗಳನ್ನೆಲ್ಲ ಕೂದಲು ಕೊಂಕದಂತೆ ನೀನೇ ಕಾಯುತ್ತಿರುವಿಯಾದರೂ, ನೀನು ಕೇವಲ ಸಾಕ್ಷಿಭೂತನಾಗಿ ಉಳಿದುಕೊಂಡು, ನೀರಿನಲ್ಲಿಯೇ ಇದ್ದರೂ ತಾವರೆಯ ಎಲೆಗಳಿಗೆ ನೀರು ಸೋಂಕದಿರುವಂತೆ ನಿತ್ಯನೂ, ನಿರ್ಲಿಪ್ತನೂ ಆಗಿರುವಿ. ಜಗತ್ತಿನಲ್ಲಿ ಕೋಪದ ರೂಪದವನೂ ನೀನೇ ಆಗಿರುವಿ; ಜಂಭದ ರೂಪ ದವನೂ ನೀನೇ ಆಗಿರುವಿ, ನೀನೇ ಧೀರರ ಶೌರ್ಯ-ಸಾಹಸಗಳ ರೂಪನೆನಿಸಿರುವಿ,

ಜ್ಞಾನಿಗಳ ಜ್ಞಾನ ರೂಪನೂ, ಭಕ್ತರ ಭಕ್ತಿ ರೂಪನೂ, ಯೋಗೀಶ್ವರನೂ ನೀನೇ ಆಗಿದ್ದು, ಮುಕ್ತಿದಾಯಕ ಪರಮಾತ್ಮನೇ ನೀನಾಗಿರುವಿ !.

"ಪರಮಾತ್ಮಾ! ಸೂಕ್ಷ್ಮದಲ್ಲಿ ಅತಿ ಸೂಕ್ಷ್ಮನೂ, ದೊಡ್ಡದರಲ್ಲಿ ಅತಿ ದೊಡ್ಡವನೂ, ನೀನಾಗಿ ಈ ಜಗತ್ತಿನಲ್ಲೆಲ್ಲ ಗೋಚರಿಸುವಿ! ಆ ನಿನ್ನ ಅನಂತ ರೂಪಗಳಿಗೆ ನಾನು ಭಕ್ತಿಯಿಂದ ನಮಸ್ಕರಿಸುವೆನು, ಬ್ರಹ್ಮಾಂಡ ರೂಪಿಯೇ! ಬ್ರಹ್ಮಾಂಡ ಪರಿಪಾಲಕನೇ! ಮಾರ್ತಾಂಡ ಭೈರವನೇ ಏಳು ಕೋಟಿ ಗಣಗಳಿಂದೊಡಗೂಡಿದವನೇ! ನಿನಗೆ ನನ್ನ ಅನಂತಾನಂತ ನಮಸ್ಕಾರಗಳಿರಲಿ!" ಎಂದು ಅನನ್ಯ ಭಕ್ತಿಯಿಂದ ಸ್ತೋತ್ರ ಮಾಡುತ್ತ, ಮಲ್ಲಾಸುರನು ಮಾರ್ತಾಂಡ ಭೈರವನ ಪಾದ ಕಮಲಗಳನ್ನು ಆನಂದಾಶ್ರುಗಳಿಂದ ತೊಳೆದುಬಿಟ್ಟನು. ಆಗ ಮಾರ್ತಾಂಡ ಭೈರವನು ,ಬಹು ಪ್ರೀತಿಯಿಂದ ಸಂತಸಗೊಂಡು, ಮಲ್ಲಾಸುರನನ್ನು ಮೈದಡವಿ, ಮೇಲೆತ್ತಿದನು. ಮತ್ತೂ ಆತನನ್ನು ಕುರಿತು "ಕಂದಾ! ಮಲ್ಲಾಸುರಾ!... ನೀನು ರಣರಂಗದಲ್ಲಿ ನನ್ನೊಂದಿಗೆ ಕಾದಾಡುವಾಗ, ತೋರಿದ ಶೌರ್ಯ ಸಾಹಸಗಳಿಗೂ, ಈಗ ನನ್ನನ್ನು ಅನನ್ಯ ಭಕ್ತಿಯಿಂದ ಸ್ತೋತ್ರಮಾಡಿದ್ದಕ್ಕೂ , ನಾನು ಮೆಚ್ಚಿಕೊಂಡಿದ್ದೇನೆ. ನಿನ್ನ ಅಂದವಾದ ಸ್ತುತಿಯನ್ನು ಕೇಳಿ, ನಾನು ಸಂಪ್ರೀತನಾಗಿದ್ದೇನೆ. ನನ್ನ ಮನಸ್ಸಿಗೆ ಬಹಳೇ ಆನಂದವಾಗಿದೆ!.. ಆದ ಕಾರಣ ......

**ಬೇಡು ನೀ ವರ ಮನದ ಆಸೆಯ। ನೀಡುವೆನು ಸಂತಸದಿ ಸರ್ವವ ।**
**ಬೇಡ ಸಂದೇಹವದು ಮಮ ಮನ ಸೂರೆಗೊಂಡಿಹುದು ॥**
**ನಾಡು ಹೊಗಳಲಿ ಈ ಗಿರಿಯ ಕಾ। ದಾಡಿದಾ ನೆಲೆ ಶ್ರೇಷ್ಠವೆನಿಸಲಿ।**
**ಬೇಡು ಬೇಕಿನ್ನೇನು ವರ ಹೇಳೆಂದ ಭೈರವನು ॥೧೬॥**

**ನಿನ್ನ ರೂಪವೆ ಎದುರಿನಲ್ಲಿರೆ। ಇನ್ನು ಬೇಡಲದೇನು ಶಂಭುವೆ।**
**ಘನ್ನ ಮಹಿಮಾ ನಿನ್ನ ದಯೆಯಿಂ ಗೆಲಿದೆ ಸರ್ವವನು ॥**
**ಉನ್ನತದ ಸಗ್ಗವನೆ ಗೆದ್ದೆನು । ಉನ್ನತೋನ್ನತ ಸುಖವ ಪಡೆದೆನು।**
**ಇನ್ನು ಮುಕುತಿಯ ಒಡೆಯ ಎದುರಿರೆ ಬೇಡಲಿನ್ನೇನು ॥೧೭॥**

ಕೊಡುವದಾದರೆ ನೀಡು ಮುಕುತಿಯ। ಬಿಡದೆ ಧರಿಸುವದೆನ್ನ ಶಿರವನು।
ಮುಡಿದ ಪಂಕಜದಂತೆ ಶೋಭಿಸುತಿರಲಿ ತವ ಪದದಿ॥
ನುಡಿವ ನಾಲಿಗೆ ಮೊದಲು ನನ್ನನು। ನುಡಿಸಿ ನಿನ್ನಯ ನಾಮ ನೆನೆಯಲಿ।
ಕೊಡುವದೆನಗೀ ವರವ ಪರಶಿವನೆಂದು ಬೇಡಿದನು ॥೧೮॥

ಮರಣ ಕಾಲದಿ ನಾನು ರಚಿಸಿದ । ಉರುತರದ ಈ ಪದ್ಯ ಭಾಗವ।
ನೊರೆದವಗೆ ನಿಜ ಮುಕುತಿ ದೊರೆಯಲಿ ಬೇಡ ಯಮ ಬಾಧೆ ॥
ನೆರೆ ದರಿದ್ರತೆ ರೋಗ ರುಜಿನಗ ।ಳಿರದೆ ಓಡಲಿ ಪಾಪ ಬುದ್ಧಿಯು।
ಬರದಿರಲಿ ಈ ಗ್ರಂಥ ಓದುವಗೆಂದನಾ ಮಲ್ಲ ॥೧೯॥

ಶಬ್ದಾರ್ಥ :- ಸರ್ವವ = ಎಲ್ಲವನ್ನೂ; ಮಮ = ನನ್ನ; ಕಾದಾಡಿದ ನೆಲೆ = ಯುದ್ಧಮಾಡಿದ ಸ್ಥಾನ; ಸಗ್ಗ = ಸ್ವರ್ಗ;
ಉನ್ನತೋನ್ನತ = ಹೆಚ್ಚಿನ; ಪಂಕಜ = ಕಮಲ ಪುಷ್ಪ; ತವ = ನಿನ್ನ; ಉರುತರದ = ಶ್ರೇಷ್ಠ; ಒರೆದವಗೆ = ಹೇಳಿದವನಿಗೆ.

ಭಾವಾರ್ಥ :- ಮಲ್ಲನೇ! ನೀನು ನಿನ್ನ ಮನಸ್ಸಿಗೆ ಇಷ್ಟವಾದ ವರಗಳನ್ನೆಲ್ಲ ಬೇಡು! ನಾನು ನಿಸ್ಸಂದೇಹವಾಗಿ ಅವುಗಳನ್ನೆಲ್ಲ ಪೂರೈಸಿ ಕೊಡುತ್ತೇನೆ. ಯಾಕೆಂದರೆ ನಿನ್ನ ಭಕ್ತಿಯಿಂದ ನಾನು ಸಂಪೂರ್ಣ ಸಂಪ್ರೀತನಾಗಿದ್ದೇನೆ. ನಾವಿಬ್ಬರೂ ಕಾಳಗ ಮಾಡಿದ ಈ ಗಿರಿಯು, ನಾಡಿನಲ್ಲಿ ಪಾವಿತ್ರ್ಯತೆ ಪಡೆಯಲಿ!... ''ನಿನಗೆ ಇನ್ನೇನಾದರೂ ವರ ಬೇಕಿದ್ದರೆ. ಬೇಡಿಕೋ! '' ಎಂಧು ಭೈರವನು ನುಡಿದನು, ಅದಕ್ಕೆ ಉತ್ತರವಾಗಿ ಮಲ್ಲನು, ''ಮಾರ್ತಾಂಡ ಭೈರವಾ! ಶಂಭು ಪರಮಾತ್ಮಾ!.... ನೀನೇ ಎದುರಿಗೆ ಪ್ರತ್ಯಕ್ಷವಾಗಿ ನಿಂತಿರುವಾಗ, ನಿನ್ನಲ್ಲಿ ಬೇಡುವದಿನ್ನೇನಿದೆ? ಯಾಕೆಂದರೆ ಚಿಂತಿತಾರ್ಥವನ್ನೆಲ್ಲ ಅಪೇಕ್ಷಿತರಿಗೆ ಮುಂಚಿತವಾಗಿಯೇ ನೀಡಿ ಬಿಡುವ ಉದಾರಧೇಯದವನು ನೀನಾಗಿರುವಿ!..... ಪರಮಾತ್ಮಾ ! ನಿನ್ನೆ ದಯೆಯಿಂದಲೇ

ನಾನು ಸರ್ವಸ್ವವನ್ನು ಗೆದ್ದೆನು. ಸರ್ವಶ್ರೇಷ್ಠವಾದ ಸ್ವರ್ಗವನ್ನು ಸಹಿತಗೆದ್ದು, ನಾನಾ ತರದ ಭೋಗ ಭಾಗ್ಯಗಳನ್ನು ಅನುಭವಿಸಿದೆನು, ಇನ್ನು ಜೀವನ್ಮುಕ್ತಿಗೆ ಒಡೆಯನಾದ ನೀನೇ ಎದುರಿಗೆ ನಿಂತು ಪ್ರಶ್ನಿಸುವಾಗ, ಇನ್ನೇನು ಕೇಳಲಿ? ನೀನಿನ್ನು ನನಗೆ ನೀಡುವದಾದರೆ - ಮುಕ್ತಿಯೊಂದನ್ನು ಮಾತ್ರ ದಯಪಾಲಿಸಿಬಿಡು! ನನ್ನ ಶಿರಸ್ಸನ್ನು ಸದಾ ಕಾಲ ನಿನ್ನ ಪಾದ ಕಮಲಗಳ ಮೇಲೆ ಎಂದೆಂದೂ ಬಾಡದ ಕಮಲದಂತೆ ಧರಿಸಿ, ನನನ್ನು ಉದ್ಧಾರಗೊಳಿಸು! ಮತ್ತೂ ನಿನ್ನ ಇಲ್ಲಿಯ ಅವತಾರವನ್ನು ಉಚ್ಚರಿಸುವ ಮಾನವನು ಮೊದಲು ನನ್ನ ಹೆಸರನ್ನು ಉಚ್ಚರಿಸಿ, ನಂತರ ನಿನ್ನ ನಾಮೋಚ್ಚರಣೆ ಮಾಡುವದಕ್ಕೆ ಅವಕಾಶ ವಾಗುವಂತಾಗಲಿ! (ಅರ್ಥಾತ್ ಮಲ್ಲ+ಅರಿ=ಮಲ್ಲಾರಿ ಎಂದು ಉಚ್ಚರಿಸುವಂತಾಗಲಿ) ಎಂದು ವರ ಕೇಳಿಕೊಂಡನು. ಅಲ್ಲದೇ, ''ಮರಣ ಕಾಲದಲ್ಲಿ ನಾನು ರಚಿಸಿದ ಭಗವದ್ಭಕ್ತಿ ಭರಿತವಾದ ಈ ಪದ್ಯ ಭಾಗಗಳನ್ನು ಚ್ಚರಿಸುವ ಮಾನವನಿಗೆ, ನೀನು ದಯವಿಟ್ಟು ಮುಕ್ತಿಯನ್ನು ದಯಪಾಲಿಸತಕ್ಕದ್ದು! ಆತನಿಗೆ ಯಾವ ಕಾಲಕ್ಕೂ ಯಮನ ಬಾಧೆಯಾಗಕೂಡದು. ಮತ್ತು ಈ ಚರಿತ್ರೆಯನ್ನೋದುವ, ಹಾಗೂ ಕೇಳುವ ಮಾನವರಿಗೆ ದರಿದ್ರತನವಾಗಲೀ, ರೋಗ ರುಜಿನಗಳಾಗಲೀ, ಇರಕೂಡದು!... ಅಂಥ ಪವಿತ್ರಾತ್ಮರಿಗೆ ಪಾಪ ಬುದ್ಧಿಯ ಯಾವ ಕಾಲಕ್ಕೂ ಹುಟ್ಟದಂತೆ ನೀನು ಅನುಗ್ರಹ ಮಾಡು!'' ... ಎಂದು ಮಲ್ಲಾಸುರನು ಮಾಲಾಸಾಮಾರ್ತಾಂಡ ಭೈರವನಲ್ಲಿ ಭಕ್ತಿಯಿಂದ ಬೇಡಿಕೊಂಡನು.

ದೊರೆಯಲಾತನಿಗಚಲ ಲಕ್ಷ್ಮಿಯು । ಇರಲಿ ಸರಸತಿ ರಸನೆ ತುದಿಯೊಳ ।
ಗಿರಲಿ ಸುಖ ಸಂಪದ ಸುಪುತ್ರರು ಓದಿ ಕೇಳ್ವವಗೆ ॥
ದೊರೆಯಲೀ ತೆರ ಸಕಲ ಭಾಗ್ಯವು। ಹರನೆ ನಿನ್ನೊಲುಮೆಯಲಿ ಲಭಿಸಲಿ।
ಕರೆಸಿ ನೀಡುವದವಗೆ ಮುಕುತಿಯ ಅಂತ್ಯ ಕಾಲದೊಳು ॥೨೦॥

ಆಸುರೀ ಭಕುತಿಯಲಿ ನಿನ್ನನು । ತೋಷಗೊಳಿಸೆ ಪವಾಡ ಮೆರೆವರ ।
ಮೋಸವಿಲ್ಲದೆ ಸಿಡಿಯನೆಳೆಯುವ ಕುದರೆ ಕುಣಿತಗಳ ॥
ಬೀಸಿ ದೀವಟಿಗೆಗಳ ಬೆಳಗುವ । ನೈಶ್ಯ ಚೂರ್ಣವ ಧರಿಸಿದವರಂ।
ಏಸು ಮಾತ್ರಕು ಬಿಡದೆ ಸಲುಹೈ ಏಳುಕೋಟಿಗನೇ ॥ ೨೧॥

**ಎಂದು ಮಲ್ಲನು ನುಡಿಯಲಾಕ್ಷಣ । ಇಂದು ಧರ ತಲೆದೂಗಿ ಭಾಪುರೆ ।**
**ಎಂದು ಬೆಂಜೆಪ್ಪರಿಸಿ ಅಭಯವನಿತ್ತ ಪರಮಾತ್ಮ ॥**
**ಸಂದುವವು ಈ ಎಲ್ಲ ಬೇಡಿಕೆ । ಇಂದಿನಿಂದಲೆ ಸೂಸಿ ಮೆರೆವವು ।**
**ಚಂದ್ರ ಸೂರ್ಯಾದಿಗಳು ಆಗಸದಿರುವ ಪರ್ಯಂತ ॥೨೨॥**

ಶಬ್ದಾರ್ಥ : ಅಚಲ=ಸ್ಥಿರವಾದ ; ಸರಸತಿ= ಸರಸ್ವತಿ ; ಆಸುರೀ = ರಾಕ್ಷಸೀ ; ತೋಷ= ಸಂತೋಷ ;
ಪವಾಡ ಮೆರೆವರ= ಪವಾಡ ಮಾಡುವವರ ; ಸಿಡಿಯನೆಳೆವುದು = ಇದೊಂದು ರೀತಿಯ ಪವಾಡ ; ನೈಶ್ಯ ಚೂರ್ಣ = ಭಂಡಾರ (ಅರಿಷಿಣ)
ಬೆಂಜೆಪ್ಪರಿಸಿ = ಬೆನ್ನು ಚಪ್ಪರಿಸಿ ; ಅಭಯ = ನಿರ್ಭಯ.

ಭಾವಾರ್ಥ - 20 ರಿಂದ 22) ಮತ್ತು ಪರಮಾತ್ಮ ! ನಿನ್ನಲ್ಲಿ ಕೇಳಿಕೊಳ್ಳುವದೇನೆಂದರೆ- ಈ ಚರಿತ್ರೆ ಓದುವವನ, ಕೇಳುವವನ, ಹೇಳುವವನ ಮನೆಗಳಲ್ಲಿ ಲಕ್ಷ್ಮಿಯು ಅಚಲಳಾಗಿ ನೆಲೆಗೊಳ್ಳುವಂತಾಗಬೇಕು. ಆತನ ನಾಲಿಗೆಯ ತುದಿಯಲ್ಲಿ ಸರಸ್ವತಿಯು ಸದಾ ನಲಿದಾಡುವಂತಾಗಬೇಕು !... ಆತನ ಮನೆಯಲ್ಲಿ ಸುಖ-ಸಂಪತ್ತು ದವಸ - ಧಾನ್ಯಗಳ ಕೊರತೆಯಾಗ ಕೂಡದು ! ಅವರ ಮಕ್ಕಳು, ಸುಪುತ್ರರೂ, ಭಾಗ್ಯ ಶಾಲಿಗಳೂ ,ಆಗಿರಬೇಕು . ಪರಮಾತ್ಮಾ ! ಇವೆಲ್ಲವೂ ನಿನ್ನ ಒಲುಮೆಯಿಂದ ಅಂಥ ಭಕ್ತರಿಗೆ ದೊರೆಯುಂತಾಗಲಿ! ಅಲ್ಲದೇ ತಾಮಸ ಭಕ್ತಿಯಿಂದ ನಿನ್ನನ್ನು ಸಂತೋಷಪಡಿಸುವದಕ್ಕಾಗಿ, ಪವಾಡ ನಡಿಸುವವರನ್ನೂ , ಸಿಡಿ ಹಾಯಿಸುವವವರನ್ನೂ, ಕುದುರೇ ಕುಣಿತವೆಸಗಿ ಸೇವೆಮಾಡುವವರನ್ನೂ, ದೀವಟಿಗೆ ಬೆಳಗುವವರನ್ನೂ,ಭಂಡಾರ ಧರಿಸುವವರನ್ನೂ, ಯಾವ ಕಾಲಕ್ಕೂ ನೀನು ಕೈ ಬಿಡಪದೇ ರಕ್ಷಿಸತಕ್ಕದ್ದು!.... ಏಳು ಕೋಟಿಗನಾದ ಮಾರ್ತಾಂಡ ಭೈರವಾ! ಇದೆಲ್ಲವನ್ನು ನೀನು ನಡಿಸಿಕೊಡತಕ್ಕದ್ದೆಂದು ಮಲ್ಲಾಸುರನು ಬಹು ಭಕ್ತಿಯಿಂದ ಕೇಳಿಕೊಂಡನು.

ಮಲ್ಲಾಸುರನ ಈ ವಿನಂತಿಯನ್ನು ಕೇಳಿ ಮಾರ್ತಾಂಡ ಭೈರವನು ಆನಂದದಿಂದ ತಲೆದೂಗಿದನು. ಆತನು ಅಭಿಮಾನದಿಂದ ಮಲ್ಲ ದೈತ್ಯನ ಬೆನ್ನು

ಚಪ್ಪರಿಸಿ'' ಭಾಪು ಭಾಪು ಮಲ್ಲಾಸುರಾ! ನೀನು ಕೇಳಿದ ಪ್ರತಿಯೊಂದು ಬಯಕೆಗಳು ಪರೋಪಕಾರಿಗಳಾಗಿಯೇ ಇವೆ! ಇಂದಿನಿಂದಲೇ ಈ ನಿನ್ನ ಬಯಕೆಗಳೆಲ್ಲ ನನ್ನ ಅನುಜ್ಞೆಯಿಂದ ಈಡೇರುವಂತಾಗಲಿ!... ಚಂದ್ರ-ಸೂರ್ಯರು ಆಕಾದಲ್ಲಿರುವ ಪರ್ಯಂತ ಇದು ನೆರವೇರುತ್ತ ಸಾಗಲಿ!'' ಎಂದು ಆಭಯವನ್ನಿತ್ತನು.

**ಇತೀ ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್. ಜೋಶಿ ವಿರಚಿತ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್,**
**ಮಲ್ಲಾಸುರಕೃತ ಮಲ್ಲಾರಿ ಸ್ತೋತ್ರ, ನಾಮಕ ಯುದ್ಧ ನಾಮಕ ದ್ವಾವಿಂಶೋಧ್ಯಾಯಃ ॥**
**ಅಂತು ಅಧ್ಯಾಯ ೨೨ ಕ್ಕಂ, ಪದ ೨೨ ಕ್ಕಂ, ಒಟ್ಟು ಪದ ೪೬೧ ಕ್ಕಂ, ಮಂಗಲ ಮಸ್ತು!.......**

**ಏಳುಕೋಟಿ! ಏಳುಕೋಟಿಗ! ಏಳುಕೋಟಿಗೋ!! ಸಾಂಗಬಲೋ !...**



# ಅಧ್ಯಾಯ - ೨೩ ಮಲ್ಲಾಸುರ ಭಾರ್ಯಾ - ಸುತೋರ್ಗತಿ

ಸೂಚನೆ:-

**ಮಲ್ಲ ದೈತ್ಯನ ಸತಿಯು ಶಿವಕೃಪೆ। ಯಲ್ಲಿ ಕಂಠದ ಹಾರವಾದಳು।**
**ಖಿಲ್ಲರಾಸುತರೆಲ್ಲ ಗಿರಿಗಳಾದಾಗಿ ಬಿದ್ದಿಹರು॥**

ಸೂಚನಾಪದ್ಯದ ಅರ್ಥ :- ಸದ್ಭಕ್ತ ಮಲ್ಲಾಸುರನ ಸತಿಯು, ಶಿವ ಕೃಪೆಯನ್ನು ಪಡೆದು, ಪತಿಯ ಕೊರಳೊಳಗಿನ ಕಂಠಮಣಿಯಾಗಿ ಮೆರೆದಳೆಂಬ ವಿಷಯವೂ, ಮತ್ತೂ ಗರ್ವಿಷ್ಟರಾದ ಆತನ ಐದೂ ಜನ ಮಕ್ಕಳು ಸೊಕ್ಕಿನಿಂದ ಉರಿದು, ಶಿವನಿಂದ ಶಾಪಗ್ರಸ್ತರಾಗಿ ಪರ್ವತಗಳಾಗಿ ಬಿದ್ದ ರೆಂಬ ವಿಷಯವೂ, ಈ ಅಧ್ಯಾಯದಲ್ಲಿ ಬರುತ್ತದೆಂಬುದನ್ನು ಸೂಚಿಸುತ್ತ ಕವಿಯು ಮುಂದೆ ಹೀಗೆ ಹೇಳ್ತಾನೆ.

**ಪತಿಯ ಮರಣದ ವಾರ್ತೆ ತಿಳಿಯುತ । ಸತಿಯು ಶೋಕದೊಳೋಡಿ ಬಂದಳು।**
**ಗತಿಸಿದಾ ಪತಿ ಮುಖವ ಕಂಡಳು ಶಿವನ ಪದಗಳಲಿ ॥**
**ವ್ಯಥೆಯದಿಲ್ಲದ ನಿತ್ಯ ಶಾಂತಿಯ। ಪತಿಯ ಮುಖ ನೋಡುತ್ತ ಸತಿಮಣಿ।**
**ಖತಿಸಿದಳು ಶಿವ ಪದದೊಳುರುಳುತ ನಮ್ರಭಾವದಲಿ ॥೧॥**

**ಬೇಡುವೆನು ಸೆರಗೊಡ್ಡಿ ಶಿವ ಶಿವ। ನೀಡೆನಗೆ ಪತಿ ಭಿಕ್ಷೆ ಇಲ್ಲವೆ ।**
**ನೀಡು ನನಗೂ ಮುಕುತಿಯನು ಪತಿಯೊಂದಿಗಾನಿರುವೆ ॥**
**ಕಾಡೊಳಿರಲೀ ನಾಡೊಳಿರಲೀ । ಕೂಡಿ ಬಾಳ್ವುದೆ ಸತಿಯ ಧರ್ಮವು ।**
**ನೀಡು ಮುಕುತಿಯನೆನಗು ಆತನ ಕಂಠ ಮಣಿಮಾಡು ॥೨॥**

ಭಾವಾರ್ಥ :- ಮಲ್ಲಾಸುರನು ರಣರಂಗದಲ್ಲಿ ಮಡಿದ ವಾರ್ತೆಯನ್ನು ಕೇಳುತ್ತಲೇ ಮಲ್ಲ ಚಕ್ರವರ್ತಿಯ ಪಟ್ಟದ ರಾಣಿಯು. ಶೋಕಮಾಡುತ್ತ ಓಡಿ ಬಂದಳು. ಮತ್ತೂ ಪರಮಾತ್ಮನ ಪದತಲಗಳಲ್ಲಿ ನಿತ್ಯ ಶಾಂತಿಯಿಂದೊಡಗೂಡಿ, ಪ್ರಕಾಶಮಾನವಾಗಿ ಹೊಳೆಯುತ್ತಿರುವ ಗಂಡನ ಮುಖವನ್ನು ಕಣ್ತುಂಬ ನೋಡಿದಳು. ಸಾಧ್ವಿಯಾದ ಮಲ್ಲಾಸುರನ ಪತ್ನಿಯು. ಶಿವನ ಪಾದಾರವಿಂದಗಳಲ್ಲಿ ಉರುಳಾಡುತ್ತ ಶಿವನಿಗೆ ಹೀಗೆ ಕೇಳಿದಳು ''ಪರಮಾತ್ಮಾ! ನನಗೆ ಪತಿಭಿಕ್ಷೆ ನೀಡಿ ನನ್ನ ಗಂಡನನ್ನು ಜೀವಿತಗೊಳಿಸು! ಇಲ್ಲವೇ ಆತನೊಂದಿಗೆ ನನಗೂ ಮುಕ್ತಿ ನೀಡಿಬಿಡು! ನಾನು ನನ್ನ ಗಂಡನೊಂದಿಗೆ ಇರುತ್ತೇನೆ. ಯಾಕೆಂದರೆ ಗಂಡನು ಕಾಡಿನಲ್ಲಿಯೇ ಇರಲಿ, ನಾಡಿನಲ್ಲಿಯೇ ಇರಲಿ; ಆತನೊಂದಿಗೆ ಸಮರವಾಗಿ ಬಾಳ ಬೇಕಾದದ್ದು. ಸತಿಯಾದ ನನ್ನ ಕರ್ತವ್ಯವಾಗಿದೆ. ಈ ಗಂತೂ ನನ್ನ ಪತಿಯು ನಿನ್ನ ಕೃಪೆಯಿಂದ ನಿತ್ಯ ಮುಕ್ತನಾಗಿ ನಿನ್ನ ಪದ ಪಂಕಜಗಳಲ್ಲಿ ಸೇರಿಕೊಂಡು ಭವ ಬಂಧನದಿಂದ ಮುಕ್ತನಾಗಿ ಬಿಟ್ಟದ್ದಾನೆ. ಆದ ಕಾರಣ ನೀನು ದಯವಿಟ್ಟು. ನನ್ನನ್ನೂ ಜೀವನ್ಮುಕ್ತಿಗೊಳಿಸಿ, ನನ್ನ ಗಂಡನ ಕಂಠದಲ್ಲಿರುವ ಮಣಿಯನ್ನಾಗಿ ಮಾಡಿಬಿಡು!'' ಎಂದು ಅನನ್ಯ ಭಕ್ತಿಯಿಂದಲೂ, ನಮ್ರ ಭಾವದಿಂದಲೂ ಬೇಡಿಕೊಂಡಳು.

**ಪತಿ ಪರಾಯಣೆ ನಿನ್ನ ಬೇಡಿಕೆ । ಹಿತವ ತಂದಿತುಯನ್ನ ಮನಕತಿ।**
**ಗತಿಸು ಮೋಕ್ಷಕೆ ಪತಿಯ ಕಂಠದ ಮಾಲೆ ನೀನಾಗು ॥**
**ಇತರ ಸತಿಪತಿಯರಿಗೆ ಅಗ್ಗದ। ಪಥವದಾಗಲಿ ನಿಮ್ಮ ಜೀವನ।**
**ಎತಿ ಹರಸಿ ಮುಕುತಿಯನು ನೀಡಿದ ಕರುಣಿ ಪರಶಿವನು ।೩॥**

ಶಬ್ದಾರ್ಥ :- ಪತಿಪರಾಯಣೆ = ಪಾತಿವ್ರತ್ಯ ಧರ್ಮದಂತೆ ನಡೆಯುವವಳು; ಅಗ್ಗದ = ಶ್ರೇಷ್ಠವಾದ; ಇತಿ = ಎಂದು.

ಭಾವಾರ್ಥ :- ಅದಕ್ಕೆ ಪರಮಾತ್ಮನು ''ತಾಯೀ! ಪತಿವ್ರತೆಯಾದ ನಿನ್ನ ಬೇಡಿಕೆ ಸ್ತುತ್ಯವಾಗಿದೆ. ಇದನ್ನು ಕೇಳಿ ನನ್ನ ಮನಕ್ಕೆ ಹರುಷವೆನಿಸಿತು. ನೀನು ನಿನ್ನ ಬೇಡಿಕೆಯಂತೆ ಮುಕ್ತಿಹೊಂದಿ ನಿನ್ನ ಗಂಡನ ಕಂಠದಲ್ಲಿಯ ಮಣಿಯಾಗು! ಜಗತ್ತಿನಲ್ಲಿರುವ ಇತರ ಸತಿಪತಿಯರಿಗೆ. ನಿಮ್ಮ ಜೀವನ ಪಥವು ಆದರ್ಶವೆನಿಸಲಿ! '' ಎಂದು ಆಶೀರ್ವದಿಸಿ, ಪರಮಾತ್ಮನು ಆವಳಿಗೂ ಜೀವನ್ಮುಕ್ತಿಯನ್ನು ನೀಡಿದನು.

ಜಂಭ ದ್ವೇಷಗಳನ್ನು ತಾಳುತ । ಶಂಭುವನು ಹಳಿಯುತ್ತ ಕೋಪದಿ।
ಹುಂಬ ರೈಜನ ಮಲ್ಲ ತನುಜರು ಬಂದರಾರಣಕೆ ॥
ಕುಂಭ ಶೂಲನು ಶೂಲಧರನಾ । ಲಂಬ ಬಾಹೂ ಲೋಹದರ್ಗಲ।
ರೆಂಬ ನಾಲ್ವರು ದೇವಗಂಧರ್ವೆಂಬನಿನ್ನೊಬ್ಬ ।೪॥

ಭಲೆಲೆ ಹಲಲಲ ಎಂದು ಆರಚುತ । ಕಲಿಗಳೈವರು ಕವಿದು ಶೂಲಿಯ।
ಇಳಿದು ಬಾ ರಣಕೆಂದು ಆರ್ಭಟಿಸಿದರು ಗರ್ವದಲಿ ॥
ಒಲುಮೆಯಾ ಸದ್ಭಕ್ತನುದರದಿ। ಬೆಳೆದು ಬಂದಿಹಿರಯ್ಯಾ ನಿಮ್ಮನು ।
ಕೊಲುವ ನ್ಯಾಯವ ಮೆಚ್ಚನೈ ಮಮ ಭಕ್ತ ಮಲ್ಲ ವಿಭು ।೫॥

ತಿರುಗಿ ಹೋಃಗಿರಿ ನಿಮ್ಮ ತಾಣಕೆ । ಧರುಮದಿಂದೀ ಧರೆಯನಾಳಿರಿ।
ಗರುವ ವೆಂದಿಗು ಬೇಡ ಹರಿಹರ ಸಾಧು-ಸಂತರಲಿ ॥
ಮರೆಯದೇ ಮಮ ನಾಮ ನೆನೆಯುತ। ಧರೆಯನಾಳಿರಿ ಧರ್ಮ ಮಾರ್ಗದಿ।
ದುರಿತ ದುಃಖಾದಿಗಳು ಬಾರವು ಎಂದು ಹರ ನುಡಿಯೇ ।೬॥

ಭಾವಾರ್ಥ :- ತಂದೆಯ ಮರಣ ವಾರ್ತೆ ತಿಳಿದ ಮಲ್ಲ ದೈತ್ಯನ ಐದು ಜನ ಹುಂಬ ಮಕ್ಕಳು, ಶಂಭುವಿನ ಮೇಲೆ ದ್ವೇಷಾಸೂಯೆಗಳನ್ನು ತಾಳುತ್ತ, ಕೋಪದಿಂದ ರಣಾಂಗಣಕ್ಕೆ ಹೊರಟು ಬಂದರು. ಕುಂಭ ಶೂಲ, ಶೂಲಧರ, ಮಹಾಬಾಹು, ಲೋಹಾರ್ಗಲ, ಮತ್ತೂ ದೇವಗಂಧರ್ವ ರೆಂಬ ಈ ಐದೂ ಜನರು, ಪರಮಾತ್ಮನ ಮೇಲೆ ಸಿಟ್ಟಿಗೆದ್ದು, ''ಭಲೆ! ಹಲಲಲ'' ಎಂದು ಆರ್ಭಟಿಸುತ್ತ ಪರಮಾತ್ಮನನ್ನು ಮುತ್ತಿಕೊಂಡರು. ''ಪರಮಾತ್ಮಾ! ನೀನು ರಣಕ್ಕಿಳಿದು ಬಂದು ನಮ್ಮೊಂದಿಗೆ ಹೋರಾಡು!'' ಎಂದು ಅಬ್ಬರದಿಂದ ಆಹ್ವಾನಿಸಿದರು.

ಆಗ ಪರಮಾತ್ಮನು ಈ ಐದೂ ಜನರು ತನ್ನ ಸದ್ಭಕ್ತನಾದ ಮಲ್ಲಾಸುರನ ಮಕ್ಕಳಾಗಿದ್ದಾರೆ. ಎಂಬುದನ್ನರಿತುಕೊಂಡು, ಅವರನ್ನು ಕುರಿತು, ''ಅಯ್ಯಾ! ನೀವುಗಳು ನನ್ನ ಪರಮಭಕ್ತನಾದ ಮಲ್ಲಾಸುರನ ಮಕ್ಕಳಾಗಿದ್ದೀರಿ! ಯುದ್ಧದಲ್ಲಿ ನಾನು ನಿಮ್ಮನ್ನು ಕೊಂದದ್ದಾದರೆ, ಆ ನನ್ನ ಪರಮ ಭಕ್ತನಾದ ಮಲ್ಲಾಸುರನಿಗೆ ಅನ್ಯಾಯಯವಾದಂತಾಗುವದು. ಆದ ಕಾರಣ ನೀವೀಗ ತಿರುಗಿ ನಿಮ್ಮ ನಿಮ್ಮ ಸ್ಥಾನಗಳಿಗೆ ಹೋಗಿ ಬಿಡಿರಿ!... ಪಟ್ಟಾಭಿಷಿಕ್ತರಾಗಿ, ಧರ್ಮದಿಂದ ರಾಜ್ಯವನ್ನಾಳಿಕೊಂಡು ನಿಶ್ಚಿಂತೆಯಿಂದ ಉಳಿಯಿರಿ! ಹರಿ ಹರರಲ್ಲಾಗಲೀ, ಸಾಧು-ಸಜ್ಜನರಲ್ಲಾಗಲೀ, ಯಾವ ಕಾಲಕ್ಕೂ ಗರ್ವಭಾವ ತಳೆಯಬೇಡಿರಿ !!.... ಸದಾ ಕಾಲ ನನ್ನ ನಾಮಸ್ಮರಣೆ ಮಾಡುತ್ತ ಧರ್ಮದಿಂದ ರಾಜ್ಯಭಾರ ನಡೆಸಿರಿ !... ನಿಮಗೆ ಎಂದೆಂದಿಗೂ ಕುಂದು ಕೊರತೆಗಳು ಬರಲಾರವು!'' ಎಂದು ಹಿತ ನುಡಿಗಳನ್ನು ಭೋಧಿಸಿದನು.

**ಜರಿದರಾ ಉಲಕೋಚಿ ಮಕ್ಕಳು । ಹರನ ಹಿತನುಡಿಗಳನು ಮೆಚ್ಚದೆ ।**
**ಸುರಿಸ ತೊಡಗಿದರಂಬುಗಳನಬ್ಬರದಿ ಶಿವನೆಡೆಗೆ ॥**
**ಉರಿದ ಶಿವ ತಾ ಶಾಪವಿತ್ತನು। ಗಿರಿಗಳಾಗುತ ಧರೆಯಲುರುಳಿರಿ।**
**ತಿರುಗಿ ಏಳದ ತೆರದಿ ಶಾಶ್ವತ ಗೊಳಿರಿ ಯುಗ ಯುಗದಿ ॥೭॥**

**ಎಂದು ಶಾಪವ ನೀಡೆ ತತ್‌ಕ್ಷಣ। ಕುಂದಿ ನೆಲ ಕುರುಳಿದರು ಐವರು।**
**ಎಂದಿಗೆಂದಿಗು ಏಳಲಾರದ ಪರ್ವತಗಳಾಗಿ ॥**
**ಇಂದಿಗೂ ಕಾಣಿಸುವ ಮಲ್ಲನ । ಮಂದ ಬುದ್ಧಿಯ ಮಕ್ಕಳೈವರ ।**
**ಬಂದ ಯಾತ್ರಿಕರೆಲ್ಲ ತುಳಿವರು ಶಿವನ ಶಾಪದಲಿ ॥೮॥**

ಭಾವಾರ್ಥ :- ಆದರೆ ಮಲ್ಲನ ಆ ಐದೂ ಜನ ಅವಿವೇಕಿ ಮಕ್ಕಳು, ಶಿವನ ಹಿತೋಪದೇಶವನ್ನು ಎಳ್ಳಷ್ಟೂ ಗಣನೆಗೆ ತುಂದುಕೊಳ್ಳಲಿಲ್ಲ, ಅವರು ಸೊಕ್ಕಿನಿಂದ ಶಿವನ ಮೇಲೆ ಧನುಸ್ಸನ್ನೆತ್ತಿ ಬಾಣಗಳ ಮಳೆ ಸುರಿಸ ತೊಡಗಿದರು. ಕೊನೆಗೆ ಸಿಟ್ಟಿಗೆದ್ದ ಪರಮಾತ್ಮನು ಅವರ ಮೇಲೆ ಮುನಿದು, ''ಗರ್ವಿಷ್ಠರಾದ ನೀವು ಈ ಭೂಮಿಯಲ್ಲಿ ಪರ್ವತಗಳಾಗಿ ಉರುಳಿರಿ!'' ಎಂದು ಶಾಪವನ್ನಿತ್ತನು. ತತ್ ಕ್ಷಣವೇ ಆ ಐದೂ ಜನ ಮಲ್ಲನ ಮಕ್ಕಳು, ತಿರುಗಿ ಏಳಲು ಬಾರದವರಂತೆ, ಯುಗಾಂತರಗಳನ್ನೆಣಿಸುತ್ತ ಪರ್ವತಗಳಾಗಿ ಬಿದ್ದು ಬಿಟ್ಟರು. ಇಂದಿಗೂ ಪರ್ವತಗಳಾಗಿ ಬಿದ್ದಿರುವ ಮಲ್ಲನ ಐದೂ ಜನ ಮಕ್ಕಳನ್ನು ಯಾತ್ರಿಕರೆಲ್ಲರೂ ತುಳಿದುಕೊಂಡೇ ಸಾಗುತ್ತಲಿದ್ದಾರೆ.

**ಇತೀ ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್. ಜೋಶಿ ವಿರಚಿತ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್,**
**''ಮಲ್ಲಾಸುರ ಭಾರ್ಯಾ - ಸುತೋರ್ಗತಿ'' ನಾಮಕ ತ್ರಯವಿಂಶೋಧ್ಯಾಯಃ ॥**
**ಅಂತು ಅಧ್ಯಾಯ ೨೩ ಕ್ಕಂ, ಪದ ೮ ಕ್ಕಂ, ಒಟ್ಟು ಪದ ೩೯೬ ಕ್ಕಂ, ಮಂಗಲ ಮಸ್ತು!.......**

**ಏಳುಕೋಟಿ! ಏಳುಕೋಟಿಗ! ಏಳುಕೋಟಿಗೋ!! ಸಾಂಗಬಲೋ !...**



## ಅಧ್ಯಾಯ ೨೪ ಸಪ್ತರ್ಷಿ ಸಮಾಧಾನ

ಸೂಚನೆ :-

ಒಲಿದು ಸಪ್ತರ್ಷಿಗಳ ಮತದಲಿ । ನೆಲಸಿದನು ಮಣಿ ಚೂಲ ಗಿರಿಯಲಿ।
ಸಲೆ ಸುಲಿಂಗದ ರೂಪ ಪೊಂದಿದ ಭಕ್ತರುದ್ಧರಕೆ ॥

ಅರ್ಥ :- ಧರ್ಮಸುತರಾದ ಸಪ್ತಿರ್ಷಿಗಳ ವಿನಂತಿಯಂತೆ, ಮಾರ್ತಾಂಡಭೈರವನು ಸಂತುಷ್ಟನಾಗಿ ಮಣಿಚೂಲಗಿರಿಯಲ್ಲಿ ಲಿಂಗರೂಪದಲ್ಲಿ ಮೆರೆದು, ಸದಾ ಚೇತನಯುಕ್ತನಾಗಿ ಭಕ್ತೋದ್ಧಾರ ಗೈಯ್ಯುವದಕ್ಕೆ ಒಪ್ಪಿದನೆಂಬುದನ್ನು ಸೂಚಿಸುತ್ತ, ಕವಿಯು ಮುಂದಿನ ಕಥಾ ಭಾಗವನ್ನು ಈ ರೀತಿಯಾಗಿ ಹೇಳ್ತಾ ಇದ್ದಾನೆ.

ಬಳಿಕಲಾ ಮಾರ್ತಂಡ ಭೈರವ । ಉಲಿದನೇಳೂ ಧರ್ಮ ಸುತರಿಗೆ ।
ಖಲ ಮಣಿಯ ಲಯವಾಯ್ತು ನಿಮಗಿನ್ನಾವ ಭಯವಿಲ್ಲ॥
ಸಲೆ ಸುಧರ್ಮಾದಿ ಸಾಗಿ ಜಪ ತಪ । ಗಳನು ಆಚರಿಸುತ್ತ ಧರ್ಮವ ।
ನುಳಿಸಿ ಕಾಯ್ವುದು ಪರಮ ನಿಶ್ಚಿಂತೆಯಲಿ ಎಂದೊರೆಯೆ ॥೧॥

ಪೊಂದಿ ಸಂತೋಷವನು ಮುನಿಗಳು । ನಿಂದು ಕರಜೋಡಿಸುತ ಫಣಿಯಲಿ ।
ಇಂದು ನಿಮ್ಮ ಪ್ರಸಾದ ಕಂಡೆವು ಪುಣ್ಯಯೋಗದಲಿ ॥
ಎಂದು ಮಲಗದ ನಿತ್ಯ ಜಾಗೃತ। ದಂದ ರೂಪಿನ ಲಿಂಗವಾಗುತ ।
ಇಂದಿನಿಂನೀ ನೆಲಿಸು ಇಲ್ಲಿಯೆ ನಮ್ಮ ಕಣ್ಣೆದುರು ॥೨॥

ಶಬ್ದಾರ್ಥ :- ಉಲಿದ = ಹೇಳಿದ; ಧರ್ಮಸುತರಿಗೆ = ಧರ್ಮಾತ್ಮರಿಗೆ; ಖಲಮಣಿ = ದುಷ್ಟದಾನವ; ಘಣಯಲಿ = ಹಣೆಯಲಿ; ನಿತ್ಯಜಾಗೃತ = ಸದಾ ಮಹಿಮೆ ತೋರುವ.

ಭಾವಾರ್ಥ :- ದೈತ್ಯರೆಲ್ಲರ ಸಂಹಾರವಾದ ನಂತರ, ಮಾರ್ತಾಂಡ ಭೈರವನು, ಧರ್ಮಾತ್ಮರಾದ ಆ ಏಳೂ ಜನ ಮುನಿಗಳನ್ನು ಆದರದಿಂದ ಬರಮಾಡಿಕೊಂಡನು, ಮತ್ತೂ ಅವರನ್ನು ಕುರಿತು, "ಮುನಿಗಳೇ" ನಿಮಗೆ ತೊಂದರೆ ಕೊಟ್ಟ ಮಲ್ಲ ದೈತ್ಯನು ತನ್ನ ಪರಿವಾರ ಸಮೇತನಾಗಿ ಸತ್ತು ಹೋದನು. ನಿಮಗಿನ್ನು ಈ ಭೂಮಿಯಲ್ಲಿ ಬೇರೆಯವರ ಭಯವಿಲ್ಲದಂತಾಯಿತು, ನೀವಿನ್ನು ನಿಶ್ಚಿಂತೆಯಿಂದ ಜಪತಪಗಳನ್ನೂ, ಸ್ವಾಧ್ಯಾಯಗಳನ್ನೂ ಆಚರಿಸುತ್ತ, ಯಜ್ಞಯಾಗಾದಿಗಳಂಥ ಪರೋಪಕಾರದ ಕರ್ತವ್ಯಗಳಿಂದ, ಜಗತ್ತಿನ ಜೀವಿಗಳಿಗೆ ಸುಖನೀಡುತ್ತ, ಈ ಪ್ರಪಂಚದಲ್ಲಿ ಧರ್ಮವನ್ನು ಉಳಿಸಿ ಕಾಯ್ದುಕೊಂಡು ಹೋಗತಕ್ಕದ್ದೆಂದು" ಆಜ್ಞೆ ಮಾಡಿದನು. ಆಗ ನಿಶ್ಚಿಂತರಾದಂಥಾ ಸಪ್ತ ಮುನಿಗಳು ಭಕ್ತಿಯಿಂದ ಶಿವನಿಗೆ ನಮಸ್ಕರಿಸಿ, "ಪ್ರಭೂ ಪರಮಾತ್ಮಾ! ನಿನ್ನ ದಯೆಯಿಂದಾಗಿ ನಾವು ಈ ಸುಯೋಗದಲ್ಲಿ ನಿನ್ನ ಅನುಗ್ರಹ ಕಂಡೆವು ಪರಮಾತ್ಮಾ!... ನೀನು ದಯವಿಟ್ಟು ನಮ್ಮ ಇನ್ನೊಂದು ಪ್ರಾರ್ಥನೆಯನ್ನು ನಡಸಿಕೊಡಬೇಕು! ಅದೇನೆಂದರೆ- ನೀನು ನಿತ್ಯ ಜಾಗೃತನಾದ ಲಿಂಗರೂಪಿಯಾಗಿ, ಇಂದಿನಿಂದ ಇಲ್ಲಿಯೇ ನಮ್ಮ ಕಣ್ಣೆದುರು ಈ ಬೆಟ್ಟದಲ್ಲಿ ನೆಲಿಸುವ ಕೃಪೆ ಮಾಡಬೇಕು! ಯಾಕೆಂದರೆ-

**ಕಲಿಯ ತಾಪತ್ರಯದಿ ಮನುಜರು । ಬಳಲಿ ನಿನ್ನಯ ಬಳಿಗೆ ಸಾರಲು ।**
**ಶುಲಭದಲಿ ನೀ ದೊರೆತು ಪೂಜೆಯಗೊಂಬುದವರಿಂದ ॥**
**ಸಲಿಸಿದಾ ಭಕುತಿಗಳ ಪೊಂದುತ । ಇಳೆಯ ಕೈಲಾಸೆನಿಪ ತೆರದಲಿ ।**
**ಲಲಿತ ಲಿಂಗದ ರೂಪದಿಂದುಳಿಯೆಂದು ಬಿನ್ನೈಸೆ ॥೩॥**

ಭಾವಾರ್ಥ :- "ಕಲಿಕಾಲದ ತಾಪತ್ರಯದಿಂದ ಬಳಲಿ, ನಿನ್ನನ್ನು ಹುಡುಕುತ್ತ ಬರುವ ಭಕ್ತರಿಗೆ, ನೀನು ಶುಲಭವಾಗಿ ದೊರೆತು, ಅವರಿಂದ ಪೂಜೆ ಸ್ವೀಕರಿಸತಕ್ಕದ್ದು ! ಭಕ್ತರು ಯಾವುದೇ ರೀತಿಯಿಂದ ನಿನಗೆ ಸೇವೆ ಸಲ್ಲಿಸಿದರೂ, ಅದನ್ನು ಸ್ವೀಕರಿಸಿ, ಅವರ ಸಂಕಷ್ಟಗಳನ್ನು ದೂರ ಮಾಡುವ ಭೂ ಕೈಲಾಸದ ರೀತಿಯಲ್ಲಿ, ಲಿಂಗ ರೂಪದಿಂದ ಈ ಗಿರಿಯಲ್ಲಿ ವಾಸಮಾಡತಕ್ಕದೆಂದು," ಸಪ್ತರ್ಷಿಗಳು ಶಿವನಲ್ಲಿ ಪ್ರಾರ್ಥನೆ ಮಾಡಿಕೊಂಡರು.

ಎಂದ ಬಿನ್ನಪ ಕೇಳಿ ಒಪ್ಪುತ । ಅಂದು ರವಿದಿನ ಮಾರ್ಗಶೀರ್ಷದ।
ಅಂದವಾಗಿಹ ಶುಕ್ಲ ಷಷ್ಠಿಯ ಪುಣ್ಯ ಕಾಲದೊಳು ॥
ಇಂದು ಶತತಾರದಲಿ ವರ್ತಿಪ । ಚೆಂದ ಯೋಗದಿ ಶಕ್ತಿ ಸಹಿತದಿ ।
ನಿಂದನಾ ಭೈರವನು ಕಲ್ಪದ್ರುಮದ ನೆರಳಿನೊಳು ॥೪॥

ಕಂಡರೈ ಪ್ರತ್ಯಕ್ಷದಲಿ ಮಾ। ರ್ತಂಡ ಭೈರವ ಗೌರಿಯೊಂದಿಗೆ ।
ಮಂಡಿಸಿರುವ ಸುಲಿಂಗ ಕಾಣುತೆ ಭವ್ಯ ಸಂಭ್ರಮದಿ ॥
ಅಂಡಲೆದು ಸೇರಿದರು ವಿಪ್ರರು। ಹೆಂಡಿರೊಡಗೂಡುತ್ತ ಸಂಭ್ರಮ।
ಗೊಂಡು ಪುಲಕಾನಂದ ಪೊಂದುತ ಕೀರ್ತಿಹರಡಿದರು ॥೫॥

ಸುರರು ಹೂಮಳೆಗರೆದು ಬಂದರು । ಉರಗಿಯರನೊಡಗೊಂಡು ನಾಗರು।
ತರುಣಿಯರನೊಡಗೂಡಿ ವಿದ್ಯಾಧರರು ಸೇರಿದರು ॥
ಪರಿಪರಿಯ ವಾದ್ಯಗಳ ಮೇಳದಿ । ಸುರರು ಅಪ್ಸರೆ ಸಹಿತ ಕುಣಿಯುತ।
ಮೆರಿಸಿದರು ಮಾರ್ತಾಂಡ ಭೈರವ ನಾಮ ಉಗ್ಗಡಿಸಿ ॥೬॥

**ಹರನ ಸೂಚ್ಯಾಕ್ಷರ ಮಕಾರವು । ಹರಿಯ ಸೂಚ್ಯಾಕ್ಷರ ರಕಾರವು।**
**ಬೆರೆತುಮೈಲಾ ಎಂಬ ಸೂಚ್ಯಕ ಚಾರು ಪದವಾಯ್ತು॥**
**ಧರಣಿಯೊಳು ಅವತಾರ ವೆತ್ತುತ । ಕುರುಹುದೋರಿನ ಮಹಿಯ ನೆನಪಿಸಿ।**
**ಸುರರು ಭೂಸುರರೆಲ್ಲ ಮೈಲಾರೆಂದು ಕೂಗಿದರು ॥೭॥**

ಶಬ್ದಾರ್ಥ :- ಬಿನ್ನಪ = ಬಿನ್ನಹ; (ವಿನಂತಿ) ಇಂದು = ಚಂದ್ರ ; ವರ್ತಿಪ = ಇರುತ್ತಿರುವ; ಕಲ್ಪದ್ರುಮ = ತೆಂಗಿನಮರ; ಮಂಡಿಸಿರುವ = ಕುಳಿತಿರುವ; ಸುಲಿಂಗ = ಶ್ರೇಷ್ಠಲಿಂಗ ; ಅಂಡಲೆದು = ತಡಕಾಡಿ; ಪುಲಕಾನಂದ ಪೊಂದಿ = ಮೈಮೇಲೆ ರೋಮಾಂಚನವೆದ್ದು. ಹರಡು = ಪ್ರಸಾರಮಾಡು; ಉರಗಿ = ಹೆಣ್ಣು ನಾಗರ; ವಿದ್ಯಾಧರ = ದೇವಲೋಕದ ಒಂದು ಪ್ರಜಾವರ್ಗ; ಭೂಸುರ = ಬ್ರಾಹ್ಮಣ; ಸುರ = ದೇವತೆ; ಕುರುಹುದೋರಿದ = ಪವಾಡ ಮೆರೆದ.

ಭಾವಾರ್ಥ :- ಹೀಗೆ ವಿನಂತಿಸಿಕೊಂಡ ಸಪ್ತರ್ಷಿಗಳ ಬೇಡಿಕೆಯನ್ನು, ಶಿವನು ಸಂತೋಷದಿಂದ ಒಪ್ಪಿಕೊಂಡನು, ಆ ದಿವಸ ರವಿವಾರವಾಗಿದ್ದು, ಮಾರ್ಗಶೀರ್ಷ ಮಾಸದ ಶುಕ್ಲ ಷಷ್ಠೀ ತಿಥಿಯು ನಡೆಯುತ್ತಿದ್ದಿತು. ಚಂದ್ರನು ಶತತಾರಾ ನಕ್ಷತ್ರದಲ್ಲಿರುವ ಶುಭ ವೇಳೆಯಲ್ಲಿ ಭೈರವನು ಪಾರ್ವತೀ ಸಹಿತನಾಗಿ ತೆಂಗಿನ ಮರದ ನೆರಳಿನಲ್ಲಿ ನಿಂತನು.

ತಕ್ಷಣವೇ ಮಾಲತೀ ಸಹಿತನಾಗಿ ಜೋಡು ಲಿಂಗಗಳ ರೂಪದಲ್ಲಿ, ಆ ಸಪ್ತರ್ಷಿಗಳಿಗೆ ದರ್ಶನ ಕೊಟ್ಟನು. ಸಪ್ತರ್ಷಿಗಳಿಗೆ ಸಂಭ್ರಮವೋ ಸಂಭ್ರಮ. ಅವರೆಲ್ಲರೂ ಸೇರಿ ಹೆಂಡತಿ ಮಕ್ಕಳನ್ನೊಡ ಗೂಡಿಕೊಂಡು, ರೋಮಾಂಚನ ಗೊಂಡರವರಂತೆ ಕುಣಿದಾಡಿದರು, ಪರಮಾತ್ಮನು, ಪಾರ್ವತೀ ಸಹಿತನಾಗಿ ಲಿಂಗರೂಪದಲ್ಲಿ ಗೋಚರಿಸುತ್ತಿರುವ ಸುವಾರ್ತೆಯನ್ನು ಪ್ರಸಾರ ಮಾಡಿದರು,

ಆ ಸಂಗತಿ ತಿಳಿದ ದೇವತೆಗಳು, ಸುರಲೋಕದಿಂದ ಹೂವಿನ ಮಳೆಗರೆಯುತ್ತ ತಂಡ ತಂಡವಾಗಿ ಆಗಮಿಸಿದರು. ಪಾತಾಳ ಲೋಕದಿಂದ ನಾಗರು, ತಮ್ಮ ತಮ್ಮ ಪತ್ನಿಯರೊಂದಿಗೆ ಬಂದು, ಆ ಪವಿತ್ರ ಸ್ಥಳದಲ್ಲಿ ಒಂದುಗೂಡಿದರು. ದೇವತೆಗಳೂ, ಅಪ್ಸರೆಯರೂ, ತರತರದ ವಾದ್ಯಮೇಳಗಳೊಂದಿಗೆ, ಕುಣಿದಾಡಿ, ತಮ್ಮ ಸಂತೋಷ ವ್ಯಕ್ತ ಪಡಿಸಿದರು. ಮಾರ್ತಾಂಡ ಭೈರವನ ನಾಮೋಚ್ಚಾರವನ್ನು ಪುನಃ ಪುನಃ ಘೋಷಣೆ ಮಾಡುತ್ತ, ಜೈ ಜೈ ಕಾರ ಮಾಡಿದರು. ಹರನ ಸೂಚಕವಾದ ''ಮ'' ಕಾರವೂ; ಹರಿಯ ಸೂಚಕವಾದ ''ರ'' ಕಾರವೂ ಸೇರಿ, ''ಮೇಲಾ'' ಎಂಬ ಪವಿತ್ರ ಶಬ್ದವಾಯಿತು.

ಇವರಿಬ್ಬರೂ ಭೂಮಿಯಲ್ಲಿ ಅವತಾರವೆತ್ತಿದರೆಂಬ ಕಾರಣದಿಂದ ದೇವತೆಗಳೂ, ಋಷಿಗಳೂ ಕೂಡಿಕೊಂಡು ಆ ದೇವ ದೇವೇಶನಿಗೆ ಮೈಲಾರದೇವನೆಂದು ಕರೆದರು.

ಹರುಷದಿಂ ಹಾರುವರು ಸುರಗಣ। ತರಿಸಿ ತುಂಗಾ ನದಿಯ ಜಲವನು ।
ಸುರಿಸಿದರು ಆ ಲಿಂಗ ಕೆರಡಕು ಮಾಡಿ ಅಭಿಷೇಕ॥
ಮೆರಗುಗೊಂಡಿಹ ವೇದ ಘೋಷದಿ। ಜರುಗಿಸಿದರ್ಷ್ಟದಿನಾರು ಅಂಗದ।
ಉರುತರದ ಪೂಜೆಯನು ನಂತರ ಮಂತ್ರ ಪುಷ್ಪಗಳ ।।೮॥

ಸುರಿಸಿ ಸಾಷ್ಟಾಂಗದಲಿ ನಮಿಸುತ । ತರ ತರದ ಫಲ ಪುಷ್ಪ ಸಲ್ಲಿಸಿ ।
ಪರಿಮಳದ ಪಕ್ವಾನ್ನ ಎಡೆ ಮಾಡಿದರು ಲಿಂಗಕ್ಕೆ ॥
ಹರನೆ ಗಿರಿಜಾಧವನೆ ಭಕುತರ । ಪೊರೆದು ಕಾವನೆ ಏಳು ಕೋಟಿಗ ।
ವರ ಗಣಂಗಳ ಒಡೆಯನೆಮ್ಮನು ರಕ್ಷಿಸೈ ಶಿವನೆ ।।೯॥

ಕರಿಯ ಚರ್ಮಾಂಬರನೆ ಗಂಗಾ। ಧರನೆ ವರ ಮುಕುತಿಂಗೆ ವಲ್ಲಭ।
ಸುರ ಸುಪೂಜಿತ ಚರಣ ರಕ್ಷಿಪುದೆಮ್ಮನನವರತ ॥
ಕರಗಳಿಂದಲಿ ಕಾಲಿನಿಂದಲಿ । ಹರಿವ ಮರ್ಕಟ ಮನಸಿನಿಂದಲಿ ।
ಬರುವ ಪಾಪವನೆಲ್ಲ ತರಿದುದ್ಧರಿಸು ಪರಮಾತ್ಮ ।।೧೦॥

**ಅರಿತೊ ಅರಿಯದೆ ಗೈದ ತಪ್ಪನು। ಹರನೆ ನೀ ಪಿತನಾಗಿ ಮನ್ನಿಸು।**
**ಇರದು ನಿನ್ನೊರ್ವರತಾಗಿ ಗತಿಯೆಂದೊರೆದು ನಮಿಸುತಿರೆ ॥**
**ನೆರೆದ ಮುನಿ ಸುಮನಸರು ನೋಡುತೆ। ಉರುತರದ ಮೃಣ್ಮೂರ್ತಿಯಾಗಿ ಗೋ।**
**ಚರಿಸಿದನು ಕಳೆದುಂಬಿ ಈಶಾನ್ಯದ ಸುದಿಕ್ಕಿನಲಿ ॥೧೧॥**

ಭಾವಾರ್ಥ :- ಸಪ್ತರ್ಷಿಗಳೂ, ದೇವಗಣಗಳೂ ಕೂಡಿಕೊಂಡು, ಸಂಭ್ರಮದಿಂದ ತುಂಗಾನದಿಯ ಪವಿತ್ರ ಜಲವನ್ನು ತರಿಸಿ, ಆ ಎರಡೂ ಲಿಂಗಗಳಿಗೆ ಅಭಿಷೇಕ ಮಾಡಿದರು, ವೇದ ಘೋಷಗಳಿಂದೊಡಗೂಡಿದ ಶಾಸ್ತ್ರೋಕ್ತ ಪೂಜೆಯನ್ನು, ಷೋಢ ಶೋಪಚಾರಗಳಿಂದ ನೆರವೇರಿಸಿದರು. ನಂತರ ಮಂತ್ರಪುಷ್ಪಗಳನ್ನುಚ್ಚರಿಸುತ್ತ, ಆ ಎರಡೂ ಲಿಂಗಗಳಿಗೆ ಸಮರ್ಪಿಸಿ, ಪರಿಮಳಯುಕ್ತವಾದ ಪಕ್ವಾನ್ನಗಳನ್ನುಎಡೆ ಮಾಡಿದರು, ನಂತರ ಸಾಷ್ಟಾಂಗ ನಮಸ್ಕಾರ ಮಾಡಿ, ''ಹರನೇ! ಪಾರ್ವತೀ ಪತಿಯೇ!.... ಭಕ್ತರನ್ನು ರಕ್ಷಿಸಿ ಕಾಪಾಡುವ ಕರುಣಾಳುವೇ! ಏಳು ಕೋಟಿಗಣಗಳಿಂದೊಡಗೂಡಿ ಭೂಮಿಗೆ ಬಂದವನೇ! ಮುಕ್ತಿ ದೇವತೆಗೆ ಪತಿಯಾದ ಪರಮಾತ್ಮನೇ!. ದೇವತೆಗಳಿಂದ ಪೂಜಿಸಲ್ಪಟ್ಟ ಪಾವನ ಚರಣನೇ! ನಮ್ಮನ್ನು ಸದಾಕಾಲ ಕಾಪಾಡು !!......... ಪಾಮರರಾದ ನಾವು ಕೈಗಳಿಂದಾಗಲೀ, ಕಾಲಿನಿಂದಾಗಲೀ, ಚಂಚಲವಾದ ಮಂಗನಂಥ ಮನಸ್ಸಿನಿಂದಾಗಲೀ, ಮಾಡಿದ ದೋಷದಿಂದ ಬರುವ ಪಾಪವನ್ನೆಲ್ಲ ಪರಿಹರಿಸಿ, ನಮ್ಮನ್ನು ಉದ್ಧಾರಗೊಳಿಸಬೇಕು ಪರಮಾತ್ಮಾ!..... ತಿಳಿದೋ ಅಥವಾ ತಿಳಿಯದೆಯೋ ನಾವು ಮಾಡಿದ ತಪ್ಪುಗಳನ್ನೆಲ್ಲ ನೀನೇ ತಂದೆಯಾಗಿ ಮನ್ನಿಸಬೇಕು ಪರಮಾತ್ಮಾ!.... ಯಾಕೆಂದರೆ ನಿನ್ನ ಹೊರತಾಗಿ ನಮಗೆ ಅನ್ಯ ರಕ್ಷಕರಾರೂ ಇಲ್ಲ ದೇವಾ!'' ಎಂದು ಪರಿಪರಿಯಿಂದ ಸ್ತೋತ್ರ ಮಾಡುತ್ತ, ಪುನಃ ಪುನಃ ನಮಸ್ಕಾರ ಮಾಡುತ್ತಿರಲು, ಮಾರ್ತಾಂಡ ಭೈರವನ ಸುಂದರವಾದ ಮಣ್ಣಿನ ಮೂರ್ತಿಯು, ಋಷಿಗಳು ಮತ್ತೂ ದೇವತೆಗಳಿಗೆ ಈಶಾನ್ಯ ದಿಕ್ಕಿನಲ್ಲಿ ಗೋಚರಿಸತೊಡಗಿತು.

**ಹರಹರಾ ಮೈಲಾರಪುರ ಪತಿ।ದೊರೆತೆಯಾ ಎಂದೆನುತ ಸಕಲರು।**
**ಭರದಿ ಓಡೋಡುತ್ತ ಬಂದರು ಮೂರ್ತಿ ನಿಂತೆಡೆಗೆ ॥**
**ಹರಿತ ಖಡುಗದಲಿರಿವ ಮೂರ್ತಿಯ । ವರ ಪದಂಗಳ ಕೆಳಗೆ ಮಲ್ಲನ।**
**ಶಿರವು ಶೋಭಿಸುತಿರಲು ಮಣಿಕಾಶ್ವದಲಿ ಮೈಲಾರ ॥೧೨॥**

ಶಬ್ದಾರ್ಥ :- ಖಡುಗದಲಿರಿವ = ಖಡ್ಗದಿಂದ ಹೊಡೆಯುವ; ವರಪದಂಗಳಲಿ = ಶ್ರೇಷ್ಠಪಾದಗಳಲ್ಲಿ; ಮಣಿಕಾಶ್ವ = ಕುದುರೆಯಾದಮಣಿಕಾಸುರ.

ಭಾವಾರ್ಥ :- ಆ ಸುಂದರವಾದ ಮಣ್ಣಿನ ಮೂರ್ತಿಯು ದೃಷ್ಟಿಗೋಚರವಾದೊಡನೆಯೇ, ಅಲ್ಲಿ ನೆರೆದಿದ್ದ ಸಕಲ ದೇವತೆಗಳೂ, ಋಷಿಗಳೂ, ಏಕ ಕಂಠದಿಂದ ಉದ್ಗರಿಸುತ್ತ "ಹರಹರಾ! ಮೈಲಾರ ಪುರದೊಡೆಯಾ! ಕೊನೆಗೂ ನೀನು ನಮಗೆ ದೊರೆತೆಯಾs?" ಎನ್ನುತ್ತ ಸಕಲರೂ ಆ ಮೂರ್ತಿ ನಿಂತೆಡೆಗೆ ಧಾವಿಸಿ ಬಂದರು, ಆ ಮೂರ್ತಿಯು ಹೇಗಿದ್ದಿತೆಂದರೆ - ಅಶ್ವರೂಪದಲ್ಲಿರುವ ಮಣಿಕಾಸುರನ ಮೇಲೆ ಆತನು ಹರಿತವಾದ ಖಡ್ಗಧರಿಸಿ ಕುಳಿತುಕೊಂಡಿದ್ದು, ಆತನ ಪಾದಗಳ ಕೆಳಗೆ ಮಲ್ಲಾಸುರನ ಸಿರಸ್ಸು ಶೋಭಿಸುತ್ತಿತ್ತು.

ಹೊರತಲಿರೆ ಭೈರವನ ಮ್ಹಾಲಸೆ । ಇರಿಯುತಿರ್ಪಳು ದೈತ್ಯ ಜಠರಕೆ ।
ತಿರುಗಿ ಬಿದ್ದಾ ದೈತ್ಯ ತೊಡೆಗಳ ಶುನಕ ಹರಿಯುತಿರೆ ॥
ಕರ ಕುಶಲ ಮೃಣ್ ಮೂರ್ತಿ ಕಾಣುತೆ । ಸುರರು ಭೂಸುರರೆಲ್ಲ ನಲಿದರು ।
ಎರಚಿದರು ಭಂಡಾರ ಪೂಗಳ ಹರುಷ ಹಿರಿದಾಗಿ ॥೧೩॥

ಮಣ್ಣ ಮೈಲಾರೇಶನನು ಜನ । ಕಣ್ಣು ತಣಿಯುವ ತನಕ ನೋಡುತೆ।
ಸಣ್ಣ ಮಲ್ಲಿಗೆ ಹೂವಿನ್ಹಾರವ ಕೊರಳಿಗಿಕ್ಕಿದರು ॥
ಹೆಣ್ಣು ಬಾಲೆಯರೆಲ್ಲ ಕುಂಕುಮ। ಕಣ್ಣ ಕಾಡಿಗೆ ಕುಸುಮ ಅರಿಷಿಣ।
ಕಣ್ಣು ಮೂರುಳ್ಳವನ ಸತಿಗಿಕ್ಕಿದರು ಹರುಷದಲಿ ॥೧೪॥

ಶಬ್ದಾರ್ಥ :- ಇರಿಯುತಿರ್ಪಳು = ಇರಿಯುತ್ತಿರುವಳು; ಜಠರಕೆ = ಹೊಟ್ಟೆಗೆ; ಶುನಕ = ನಾಯಿ; ಕರಕುಶಲಮೃಣ್ಮೂರ್ತಿ = ಮಣ್ಣಿನಿಂದ ಸುಂದರವಾಗಿ ರಚಿಸಿದ ಪ್ರತಿಮೆ; ಸುರರು = ದೇವತೆಗಳು; ಭೂಸುರರು = ಬ್ರಾಹ್ಮಣರು; ಎರಚಿಗರು = ತೂರಿದರು; ತಣಿ = ತೃಪ್ತವಾಗು; ಸಣ್ಣಮಲ್ಲಿಗೆ = ಸೂಜಿಮಲ್ಲಿಗೆ; ಕಣ್ಣಗಾಡಿಗೆ = ಕಣ್ಣಿಗೆ ಹಚ್ಚುವ ಕಾಡಿಗೆ; ಕಣ್ಣು ಮೂರುಳ್ಳವನ ಸತಿ = ಶಿವನ ಸತಿಯಾದ ಪಾರ್ವತಿ (ಮ್ಹಾಳಸಾದೇವಿ).

ಭಾವಾರ್ಥ :- ಕುದುರೆಯಾದ ಮಣಿಕಾಸುರನ ಬೆನ್ನಮೇಲೆ ಮ್ಹಾಲಸಾ ಮತ್ತೂ ಮಾರ್ತಾಂಡ ಭೈರವ ರಿಬ್ಬರೂ ಕುಳಿತು ಕೊಂಡಿದ್ದು, ಮ್ಹಾಲಸಾ ದೇವಿಯು ರಾಕ್ಷಸನ ಹೊಟ್ಟೆಗೆ ಶೂಲದಿಂದ ಇರಿಯುತ್ತಿರುವಳು, ಮತ್ತೂ ತಿರುಗಿ ಬಿದ್ದ ಆ ದೈತ್ಯನ ತೊಡೆಯನ್ನು, ವೇದ ವೆಂಬ ನಾಯಿಯು ಹಲ್ಲಿನಿಂದ ಹರಿಯುತ್ತಿರುವದು.

ಈ ರೀತಿಯಾಗಿ ಸುಂದರವಾಗಿ ಮಣ್ಣಿನಿಂದ ರಚಿತಗೊಂಡ ಮೂರ್ತಿಯನ್ನು ಕಂಡು, ದೇವತೆಗಳೂ, ಬ್ರಾಹ್ಮಣಯತಿಗಳೂ, ನೋಡಿ ಸಂತೋಷ ಪಟ್ಟರು. ಆನಂದದಿಂದ ಆ ಮಣ್ಣಿನ ಮೂರ್ತಿಗೆ ಹೂವುಗಳನ್ನೂ, ಭಂಡಾರವನ್ನೂ, ತೂರಿ ಸಂತೋಷಪಟ್ಟರು. ಈ ರೀತಿಯಾಗಿ ಪ್ರಕಟಗೊಂಡ ಮಣ್ಣಿನ ಮೈಲಾರೇಶನನ್ನು ಕೂಡಿದ ಜನರು ಕಣ್ಣಿಗೆ ತೃಪ್ತಿಯಾಗುವವರೆಗೂ ನೋಡಿ ಸಂತಸಪಟ್ಟರು. ಸೂಜಿ ಮಲ್ಲಿಗೆಯ ಸುಪರಿಮಳಯುಕ್ತ ಮಾಲೆಯನ್ನು ಆ ಮೃಣ್ಮೂರ್ತಿಯ ಕೊರಳಿಗೆ ಹಾಕಿದರು. ಹೆಣ್ಣು ಮಕ್ಕಳು ಮ್ಹಾಲಸಾ ದೇವಿಗೆ ಅರಿಷಿಣ, ಕುಂಕುಮ, ಹೂವುಗಳ ಮಾಲೆ, ಕಣ್ಣಿಗೆ ಹಚ್ಚುವ ಕಾಡಿಗೆ ಮುಂತಾದವುಗಳನ್ನು ಅರ್ಪಿಸಿ, ಸಂತೋಷ ಪಟ್ಟರು.

**ಧೂಪ ದೀಪಾದಿಗಳ ಬೆಳಗಿಸಿ । ಆಪರಾತ್ಪರಗೆರೆದು ಸುಮಗಳ ।**
**ತಾಪ ಹರಿಯುಲ್ಕೆಂದು ಶತ ಚಾಮರವ ಬೀಸಿದರು॥**
**ಪಾಪ ಸುಡು ಪರಮಾತ್ಮನೆನ್ನುತ। ದೀಪದಿಂ ದೀವಟಿಗೆ ಬೆಳಗಿಸಿ ।**
**ಔಪಚರಿಸಿದರವರು ಹಣ್ಣುಪ್ಪಗಳ ಎಡೆ ಮಾಡಿ ॥೧೫॥**

**ಭೇದ ಭಾವವದಾವುದಿಲ್ಲದೆ । ಮೇದಿನಿಯ ಸಂಜಾತರೆಲ್ಲರು ।**
**ನಾದ ನರ್ತನ ಗೈದರಬಬಬ ಕುದುರೆ ಕುಣಿತದಲಿ ॥**
**ವೇದ ಘೋಷಣೆ ಗೈವರಾರೋ । ಕಾದು ಸಿಡಿಗಳ ನೆಳೆವ ರಾರೋ ।**
**ಮೋದದಿಂ ಬಾರಿಸುವರಾರೋ ಡೊಳ್ಳು ತಾಳಗಳ ॥೧೬॥**

ಶಬ್ದಾರ್ಥ :- ಪರಾತ್ಪರ = ಪರಮೇಶ್ವರ; ಎರೆದು = ತಲೆಗೇರಿಸಿ; ಸುಮ = ಹೂವು; ತಾಪ = ಬೇಗೆ;
ಶತಚಾಮರ = ನೂರಾರು ಚವರಿ ; ಔಪಚರಿಸಿ = ಉಪಚಾರಮಾಡಿ; ಎಡೆಮಾಡಿ = ನೈವೇದ್ಯ ಮಾಡಿ;
ಮೇದಿನಿಯ ಸಂಜಾತರೆಲ್ಲರು = ಭೂಮಿಯ ಮೇಲೆ ಹುಟ್ಟಿದ ಸಮಸ್ತ ಜಾತಿಯವರು ; ಸಿಡಿ = ಇದೊಂದು ಮೈಲಾರಗಿರಿಯಲ್ಲಿ ನಡೆಯುವ ಪವಾಡ;

ಭಾವಾರ್ಥ :- ಆ ಮ್ಹಾಲಸಾ ಮಾರ್ತಾಂಡ ಭೈರವರಿಗೆ ಭಕ್ತರು ಧೂಪ ದೀಪಾದಿಗಳನ್ನು ಬೆಳಗಿದರು. ಅವರ ಮೇಲೆ ಪರಿಮಳಯುಕ್ತವಾದ ಪುಷ್ಪಗಳನ್ನು ತೂರಿದರು. ನೂರಾರು ಸಂಖೆಯ ಚವರಿಗಳು ಮ್ಹಾಲಸಾ ಮಾರ್ತಾಂಡರಿಗೆ ಬೀಸಲ್ಪಟ್ಟವು. "ಪಾರ್ವತೀ ಪತಿಯೇ! ನಮ್ಮ ಪಾಪಗಳನ್ನೆಲ್ಲ ಸುಟ್ಟುಹಾಕು!" ಎಂದು ಬೇಡಿಕೊಳ್ಳುತ್ತ ಬಹಳಷ್ಟು ದೀವಟಿಗೆಗಳನ್ನು ಬೆಳಗಿಸಿದರು, ಬಾಳೇಹಣ್ಣು, ಸಕ್ಕರೆ, ತುಪ್ಪಗಳನ್ನು ಕಲೆಸಿದ ಖಾದ್ಯವನ್ನು (ಹಣ್ತುಪ್ಪವನ್ನು) ಮ್ಹಾಲಸಾ ಮಾರ್ತಾಂಡರಿಗೆ ಭಯ ಭಕ್ತಿಯಿಂದ ನೈವೇದ್ಯ ಮಾಡಿದರು. ಜಾತಿ, ಮತ, ಪಂಥಗಳ ಯಾವ ಭೇದ ಭಾವವೂ ಇಲ್ಲದಂತೆ, ಮಾನವ ಕುಲದವರೆಲ್ಲರೂ ಒಂದಾಗಿ, ಹಾಡುತ್ತ ನೃತ್ಯ ಮಾಡಿದರು. ಮಡಿದು ಹೋದ ಮಣಿಕನ ನೆನಪಿಗಾಗಿ ಬಹಳಷ್ಟು ಜನರು ಕುದುರೆಯಂತೆ ಕುಣಿಯುತ್ತ ಹೆಜ್ಜೆ ಹಾಕತೊಡಗಿದರು, ಅನೇಕ ಜನ ಬ್ರಾಹ್ಮಣರು ಗೈಯ್ಯುತ್ತಿರುವ ವೇದ ಘೋಷಣೆ, ಅನೇಕ ಜನ ಭಕ್ತರು ಸಿಡಿ ಹಾಯಿಸುತ್ತಿರುವ ಪವಾಡದ ದೃಶ್ಯ, ಅದೆಷ್ಟೋ ಭಕ್ತರು ಆನಂದದಿಂದ ಡೊಳ್ಳು - ತಾಳ, ಮೃದಂಗಗಳನ್ನು ಮೈಮರೆತು ಬಾರಿಸುತ್ತಿರುವ ಸುಂದರ ದೃಶ್ಯ, ಹೀಗೆ ಆ ಪ್ರೇಮ ಪುರದ ಪ್ರದೇಶವೆಲ್ಲ, ಆನಂದಮಯವಾಗಿ ಗೋಚರಿಸತೊಡಗಿತು.

**ಸಾರಮೇಯಗಳಾಗಿ ಬೊಗುಳತೆ । ಜೋರಿನಿಂ ಕೆಕ್ಕರಿಸಿ ಕಾದುತೆ ।**
**ಧೀರ ಗೊರವರು ಶೋಭಿಸಿದರೈ ಪ್ರೇಮ ಪುರದೊಳಗೆ ॥**
**ತಾರಕಕ್ಕೇರಿರಲು ಆ ಮೈ। ಲಾರ ದೇವನ ಮೂರ್ತಿ ಚೇತನ ।**
**ಧಾರಿಯಾಗುತ ಹರಸಿತೈ ಕೈ ಎತ್ತಿ ಸರ್ವರಿಗೆ ॥೧೭॥**

ಶಬ್ದಾರ್ಥ :- ಸಾರಮೇಯ = ನಾಯಿ; ಕಾದುತೆ = ಕಾದಾಡುತ್ತ; ಗೊರವ = ಕಂಬಳಿಅಂಗಿತೊಟ್ಟ - ಮೈಲಾರದೇವರ ಭಕ್ತ;
ಪ್ರೇಮಪುರ = ಮಣ್ಣ ಮೈಲಾರಕ್ಕೆ ಮೊದಲಿಗಿದ್ದ ಹೆಸರು; ಚೇತನ = ಚೈತನ್ಯ; ಚೇತನ ಧಾರಿಯಾಗು = ಜೀವಿತಗೊಳ್ಳು.

ಭಾವಾರ್ಥ :- ಕಂಬಳಿಯ ಅಂಗಿತೊಟ್ಟು ಕೈಯ್ಯಲ್ಲಿ ತ್ರಿಶೂಲಹಿಡಿದ ಗೊರವರು, ನಾಯಿಗಳಂತೆ ಬೊಗುಳುವ ಸೇವೆ ಮಾಡುತ್ತ, ಧೀರತನದಿಂದ ಕೆಕ್ಕರಿಸಿ ನೋಡುತ್ತ , ಜೋರು ಜೋರಾಗಿ ಆ ಪ್ರೇಮ ಪುರದಲ್ಲೆಲ್ಲ ಗದ್ದಲ ನಡಿಸಿದರು. ಹೀಗೆ ಸರ್ವತೋಮುಖದಿಂದ ಮೈಲಾರದೇವನ ಸೇವೆ, ಸ್ತೋತ್ರಗಳು ಅವ್ಯಾಹತವಾಗಿ ನಡೆ ನಡೆದಿರುವಾಗ, ಮೈಲಾರದೇವರ ಆ ಮಣ್ಣಿನ ಮೂರ್ತಿಗೆ ಒಮ್ಮಿಂದೊಮ್ಮಿಲೇ ಜೀವಗಳೆ ತುಂಬಿತು. ಆತನು ತನ್ನ ಬಲ ಹಸ್ತವನ್ನೆತ್ತಿ ಪರಸಿಯಲ್ಲಿ ನೆರೆದಿದ್ದ ಸಕಲ ಭಕ್ತರಿಗೂ ಶುಭಾಶೀರ್ವಾದ ಮಾಡಿದನು.

**ನೋಡಿ ಕೌತುಕಧಾರಿಯಾಗುತೆ । ಕೂಡಿದಾ ಜನ ಹರುಷದಿಂದಲಿ ।**
**ಮಾಡಿದರ್ಜಯ ಕಾರವನು ಮಾರ್ತಾಂಡ ಭೈರವಗೆ ॥**
**ಜೋಡಿಸುತ ಫಣೆಗಳಲಿ ಕರಗಳ। ಬೇಡಿದರು ಸುಖಮಯದ ಬಾಳನು।**
**ಹಾಡಿ ಕುಣಿದಾಡಿದರು ಪುಲಕಿತಗೊಂಡು ಭಕುತಿಯಲಿ ॥೧೮॥**

ಶಬ್ದಾರ್ಥ :- ಕೌತುಕಧಾರಿಯಾಗು = ವಿಸ್ಮಯಗೊಳ್ಳು; ಫಣೆಗಳಲಿ = ಹಣೆಗಳಲ್ಲಿ

ಭಾವಾರ್ಥ:- ಅದನ್ನು ನೋಡಿದ ಸಕಲ ಜನರೂ ಕೌತುಕಧಾರಿಗಳಾಗಿ, ಹರ್ಷೋನ್ಮಾದದಿಂದ ಮಾರ್ತಾಂಡ ಭೈರವನಿಗೆ ಜೈ ಜೈ ಕಾರ ಮಾಡತೊಡಗಿದರು. ಬಹಳಷ್ಟು ಭಕ್ತಿಯಿಂದೊಡಗೂಡಿ ನಮಸ್ಕಾರ ಮಾಡುತ್ತ, ''ತಮಗೆ ಸುಖ ಮಯವಾದ ಜೀವನವನ್ನು ಅನುಗ್ರಹಿಸುವಂತೆ'' ಆ ಭೈರವನಲ್ಲಿ ಪ್ರಾರ್ಥಿಸಿಕೊಂಡರು. ಮೈಲಾರ ದೇವನ ಮಹಾಮಹಿಮೆಯನ್ನು ಭಕ್ತಿ ಭಾವದಿಂದ ಹಾಡಿ ಕುಣಿದಾಡಿದರು.

**ಇತೀ ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್. ಜೋಶಿ ವಿರಚಿತ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್,**
**'ಸಪ್ತರ್ಷಿ ಸಮಾಧಾನ 'ನಾಮಕ ಚತುರ್ವಿಂಶೋಧ್ಯಾಯಃ ॥**
**ಅಂತು ಅಧ್ಯಾಯ ೨೪ ಕ್ಕಂ, ಪದ ೧೮ ಕ್ಕಂ, ಒಟ್ಟು ಪದ ೩೮೭ ಕ್ಕಂ, ಮಂಗಲ ಮಸ್ತು!.......**

ಏಳುಕೋಟಿ! ಏಳುಕೋಟಿಗ! ಏಳುಕೋಟಿಗೋ!! ಚಾಂಗಬಲೋ !...



# ಅಧ್ಯಾಯ ೨೫ ಮೈಲಾರದೇವ ಪ್ರಸಾದ ವಾಕ್ಯ

ಸೂಚನೆ :-

ನೆರೆದ ಭಕ್ತಾವಳಿಗೆ ಶ್ರೀ ಶಿವ। ವರ ಚರಿತ್ರೆಯ ಪಠಣ ಫಲವನು।
ಒರೆದು ಸಹ ಪರಿವಾರ ಹೊರಟನು ಹೈಮಗಿರಿಯತ್ತ ॥

ಅರ್ಥ:- ಅಲ್ಲಿ ಕೂಡಿರುವಂಥ ಅಸಂಖ್ಯ ಭಕ್ತ ಸಮುದಾಯಕ್ಕೆ, ಶ್ರೀ ಮ್ಹಾಲಸಾ ಮಾರ್ತಾಂಡ ಭೈರವ ಸ್ವರೂಪದಲ್ಲಿರುವ ಪರಮೇಶ್ವರನು, ಈ ಪವಿತ್ರವಾದ ಚರಿತ್ರೆಯನ್ನು ಓದುವದರಿಂದಲೂ, ಪೂಜಿಸುವದರಿಂದಲೂ, ಬರೆದು ಪಠಣ ಮಾಡುವದರಿಂದಲೂ, ಭಕ್ತಿ ಭಾವದಿಂದ ಕುಳಿತು ಕೇಳುವದರಿಂದಲೂ, ದೊರೆಯತಕ್ಕಂಥಾ ಸತ್ಫಲಗಳ ವಿವರಣೆಯನ್ನು ಸ್ವತಃ ತನ್ನ ಬಾಯಿಂದಲೇ ಹೇಳಿ, ಸಕಲ ಸದ್ಭಕ್ತರಿಗೂ ಶುಭ ವಾಗಲೆಂದು ಹರಿಸಿ, ಗೌರೀ ಸಮೇತನಾಗಿ ತನ್ನ ಸಲಕ ಪರಿವಾರದೊಂದಿಗೆ ಕೈಲಾಸ ಪರ್ವತದತ್ತ ಸಾಗಿದನೆಂಬುದನ್ನು ಸೂಚಿಸುತ್ತ, ಕವಿಯು ಉಳಿದ ಕಥಾ ಭಾಗವನ್ನು ಈ ರೀತಿಯಾಗಿ ಹೇಳ್ತಾ ಇದ್ದಾನೆ; ಅದೇನೆಂದರೆ

ಜಯತು ಮೃಣ್ಮೈಲಾರ ಪುರಪತಿ । ಜಯತು ಗಂಗಾ ಮ್ಹಾಲಸಾ ಧವ ।
ಜಯತು ಮಾಯಾಧೀಶ ಮುನಿಮಾನಸದ ನೃಪ ಹಂಸ ॥
ಜಯತು ಬ್ರಹ್ಮ ಕಪಾಲ ಪಾಣಿಯೆ। ಜಯತು ಶೂಲ ಪಿನಾಕ ಧಾರಿಯೇ ।
ಜಯತು ಡಮರುಗ ಹಸ್ತ ಗಿರಿಜಾ ರಮಣ ಓಂಕಾರ ॥೧॥

ಜಯತು ಮಲ್ಲನ ಪ್ರಾಣ ತರಿಯುತ । ಭಯ ವಿಮೋಚನ ಗೊಳಿಸಿದಾತಗೆ।
ಹಯವ ಮಾಡುತ ದುಷ್ಟ ಮಣಿಕನ ಕುಣಿಸಿದಾತನಿಗೆ ॥
ಜಯತು ಅಂಧಕ ದೈತ್ಯ ರಿಪುವಿಗೆ । ಜಯತು ಚಂದ್ರ ಕಲಾ ವಸಂತಗೆ ।
ಜಯತು ಶ್ರೀ ಮಾರ್ತಾಂಡ ಭೈರವಗೆಂದು ಉಗ್ಘಡಿಸೆ ।೮॥

ನೆರೆದ ಜನ ಮುನಿಗಳಿಗೆ ಹರಸುತ । ಒರೆದನಾ ಮಲ್ಲಾರಿ ಕರುಣದಿ।
ಕರುಣೆಗೊಂಡೆನು ನಿಮ್ಮ ಸ್ತೋತ್ರಕೆ ಭಕ್ತಿಭಾವಕ್ಕೆ ॥
ವರವ ಬೇಡಿರಿ ನಿಮ್ಮ ಬಯಕೆಯ। ಭರದಿ ಪೂರೈಸುವೆನು ಎನ್ನಲು।
ಪರಮ ಪಾವನ ಶಿವನ ಪದ ಕಣ್ಣೀರಿನಲಿ ತೊಳೆದು ।೯॥

ಮಲ್ಲ ಮಣಿಕರ ಕೊಂದು ಈ ಜಗ। ಕೆಲ್ಲ ಶಾಂತಿಯನಿತ್ತ ದೇವನೆ।
ಎಲ್ಲ ಮುನಿಗಳ ಬಿನತಿಯಂ ಗೌರವಿಸಿ ಗುಡ್ಡ ದೊಳು॥
ವಲ್ಲಭೆಯ ನೊಡಗೊಂಡು ಲಿಂಗದಿ । ಮಲ್ಲರಿಪು ಎನಿಸುತ್ತ ಬೆಳಗಿದಿ।
ಎಲ್ಲ ಮಾನವ ಕುಲಕು ಪೂಜೆಗೆ ಅರ್ಹನಾಗಲ್ಕೆ ।೧೦॥

ಮಣ್ಣನಾಕೃತಿಯಿಂದ ಕಾಣಿಸಿ । ಕಣ್ಣು ತಣಿಸಿದಿ ಸಕಲ ಜೀವರ ।
ಮಣ್ಣ ಮೈಲಾರೇಶನೆಂಬುವ ನಾಮದಲಿ ಮೆರೆದು॥
ಬಣ್ಣಿಸುವದೆಂತಯ್ಯ ನಿನ್ನಯ। ಪುಣ್ಯದಲಿ ಸಕಲವನು ಪಡೆದೆವು।
ಕಣ್ಣು ಮೂರುಳ್ಳವನೆ ನಿನ್ನ ಪ್ರಸಾದ ಮಹಿಮೆಯಲಿ ।೫॥

ಶಬ್ದಾರ್ಥ :- ಮೃಣ್ಮೈಲಾರ ಪುರಪತಿ = ಮಣ್ಣಮೈಲಾರ ಪುರಕ್ಕೆ ಅಧಿಪತಿಯಾದ; ಗಂಗಾಮ್ಹಾಲಸಾಧವ = ಗಂಗೆಮಾಳವ್ವನ ಪತಿ (ಮಾರ್ತಾಂಡ ಭೈರವ) ಮುನಿಮಾನಸದ ನೃಪ ಹಂಸ = ಮುನಿಗಳ ಮನಸ್ಸೆಂಬ ಸರೋವರದಲ್ಲಿ ಕ್ರೀಡೆಯಾಡುವ ರಾಜ ಹಂಸ; ಬ್ರಹ್ಮ ಕಪಾಲ ಪಾಣಿ = ಶಿವ. (ಬ್ರಹ್ಮನ ತಲೆ ಬುರುಡೆಯನ್ನು ಭಿಕ್ಷಾ ಪಾತ್ರೆಯನ್ನಾಗಿ ಹಿಡಿದುಕೊಂಡವ) ಪಿನಾಕ = ಶಿವನ ಬಲವಾದ ಧನಸ್ಸು; ಡಮರುಗ = ಬುಡ ಬುಡಿಕೆ; ಹಯ = ಕುದುರೆ; ಅಂಧಕ ದೈತ್ಯ = ಇವನೊಬ್ಬ ಪ್ರಚಂಡ ರಾಕ್ಷಸ, (ಇವನು ಶಿವನಿಂದ ಹತನಾದನು); ಚಂದ್ರಕಲಾವಸಂತ = ಚಂದ್ರನನ್ನು ಧರಿಸಿದ ಶಿವ; ಉಘ್ಘಡಿಸು = ಜೈ ಜೈ ಕಾರ ಮಾಡು; ಮಲ್ಲಾರಿ = ಮಲ್ಲ ದೈತ್ಯನನ್ನು ಕೊಂದ ಮಾರ್ತಾಂಡ ಭೈರವ (ಶಿವ); ಮಲ್ಲರಿಪು = ಮಲ್ಲನ ವೈರಿ; ಅರ್ಹ ನಾಗು = ಯೋಗ್ಯನಾಗು (ಅನುಕೂಲವಾಗು).

ಭಾವಾರ್ಥ:- ಅಲ್ಲಿ ನೆರೆದಂಥಾ ಭಕ್ತರೆಲ್ಲರೂ ಮಾರ್ತಾಂಡ ಭೈರವನನ್ನು ಕುರಿತು, ಈ ರೀತಿ ಸ್ತೋತ್ರ ಮಾಡ್ತಾ ಇದ್ದಾರೆ.... ಮಣ್ಣ ಮೈಲಾರಕ್ಕೆ ಅಧಿಪತಿಯಾದ ಪರಮಾತ್ಮಾ ಽ! ನಿನಗೆ ಜವಾಗಲಿ!.... ಗಂಗೆ ಮಾಳವ್ವನ ಪತಿಯೇ ನಿನಗೆ ಜಯವಾಗಿಲಿ! ಮಾಯೆಯನ್ನು ಗದ್ದವನೇ! ಬ್ರಹ್ಮ ಕಪಾಲವನ್ನು ಭಿಕ್ಷಾ ಪಾತ್ರೆಯನ್ನಾಗಿ ಮಾಡಿಕೊಂಡವನೇ! ತ್ರಿಶೂಲ ಮತ್ತು ಶಿವಧನುಸ್ಸುಗಳನ್ನು ಧಾರಣೆ ಮಾಡಿದವನೇ! ನಿನಗೆ ಜಯವಾಗಲಿ!... ಕೈಯ್ಯಲ್ಲಿ ಬುಡಬುಡಿಕೆಯನ್ನು ಧಾರಣೆ ಮಾಡಿದವನೇ! ಓಂಕಾರ ಸ್ವರೂಪನೇ! ನಿನಗೆ ಜಯವಾಗಲಿ!!... ಮಲ್ಲಾಸುರನನ್ನು ಕೊಂದು ಜಗತ್ತಿನ ಭಯವನ್ನು ದೂರ ಮಾಡಿದ ಮರ್ತಾಂಡ ಭೈರವಾಽ! ನಿನಗೆ ಜಯವಾಗಲಿ!.... ಮಣಿಕಾಸುರನೆಂಬ ಮಹಾ ದೈತ್ಯನನ್ನು ಕುದುರೆಯನ್ನಾಗಿ ಮಾಡಿ ಕುಣಸಿದ ಮಣಿಕಾರಿಯೇ ನಿನಗೆ ಮಂಗಲವಾಗಲಿ! ಅಂಧಕಾಸುರನೆಂಬ ಮಹಾ ದೈತ್ಯ ನನ್ನು ಸಂಹಾರ ಮಾಡಿದವನೇ! ನಿನಗೆ ಜಯವಾಗಲಿ!... ಅರ್ಧ ಚಂದ್ರನಿಂಧ ಅಲಂಕೃತನಾದ ಮಾರ್ತಾಂಡ ಭೈರವಾ! ನಿನಗೆ ಜಯವಾಗಲಿ!!... ಎನ್ನುತ್ತ ಆ ಸಪ್ತರ್ಷಿಗಳೂ, ನೆರೆದ ಜನರೂ, ಸ್ತೋತ್ರ ಮಾಡ್ತಾ ಇದ್ದಾರೆ.

ಆಗ ಮಹಾ ಮಹಿಮನಾದ ಮಾರ್ತಾಂಡ ಭೈರವನು ತನ್ನ ವರದ ಹಸ್ತವನ್ನೆತ್ತಿ ಸಕಲ ಪರಿವಾರಕ್ಕೂ ಆಶೀರ್ವದಿಸುತ್ತಾ ''ಭಕ್ತರೇ! ನಿಮ್ಮ ಮನದ ಅಭೀಷ್ಟೆಗಳು ಏನೇನಿವೆ? ಅವುಗಳನ್ನೆಲ್ಲಾ ನನ್ನೆದುರು ತಿಳಿಸಿರಿ! ನಾನು ಅವುಗಳನ್ನೆಲ್ಲಾ ತಕ್ಷಣದಲ್ಲಿಯೇ ಪೂರೈಸಿಕೊಡುವದಕ್ಕೆ ಸಿದ್ಧನಾಗಿದ್ದೇನೆ. !'' ಯಾಕೆಂದ್ರೆ, ನೀವು ಮಾಡಿದ ನನ್ನ ಸ್ತೋತ್ರದಿಂದಲೂ, ನಿಮ್ಮ ಅಪಾರವಾದ ಭಕ್ತಿಯಿಂದಲೂ, ನಾನು ಸಂಪ್ರೀತನಾಗಿದ್ದೇನೆ! ಬೇಗ ನಿಮ್ಮ ಬಯಕೆಗಳನ್ನೆಲ್ಲಾ ಕೇಳಿಕೊಳ್ಳಿರಿ!'' ಎಂದು ಆಜ್ಞೆ ಮಾಡ್ತಾ ಇಗ್ದಾನೆ. ಆಗ ಸಲಕ ಭಕ್ತರಿಗೂ ಆನಂದಾಶೃಗಳು ಉಕ್ಕಿ ಬರ್ತಾ ಇವೆ. ಅವರೆಲ್ಲರೂ ಸೇರಿ ಶಿವನ ಪದ ಕಮಲಗಳನ್ನು ಕಣ್ಣೀರಿನಿಂದ ತೊಳೆದುಬಿಡ್ತಾರೆ! ಮತ್ತೂ ಗದ್ಗದ ಕಂಠದಿಂದ ಹೀಗೆ ಹೇಳ್ತಾರೆ!.... ''ಪ್ರಭೂ!..... ಪರಮಾತ್ಮಾ!!.... ಜಗತ್ತಿಗೇ ಮಾರಕ ಸ್ವರೂಪರಾಗಿರುವಂಥ ಮಲ್ಲಾಸುರ ಮಣಿಕಾಸುರನ್ನು ಕೊಂದು, ಈ ಆಖಂಡ ಪ್ರಪಂಚಕ್ಕೇ ನೀನು ಶಾಂತಿಯನ್ನು ತಂದುಕೊಟ್ಟಿ!.... ಅಲ್ಲದೇ ಸಪ್ತರ್ಷಿಗಳ ವಿನಂತಿಯನ್ನು ಮನ್ನಿಸಿ, ಮಣಿಚೂಲ ಪರ್ವತದಲ್ಲಿ, ಭಾರ್ಯಾ ಸಮೇತನಾಗಿ ಲಿಂಗರೂಪದಲ್ಲಿ ಒಡಮೂಡಿ ನಿಂತಿ!... ಇದೂ ಅಲ್ಲದೇ, ಎಲ್ಲ ಮಾನವ ಜಾತಿಗಳಿಗೂ ಪೂಜೆಗೆ ಅನುಕೂಲವಾಗುವದಕ್ಕಾಗಿ, ಮಣ್ಣಿನ ಮೂರ್ತಿಯಾಗಿ ಕಾಣಿಸಿಕೊಂಡು, ಸಕಲ ಜೀವಾತ್ಮರ ಕಣ್ಣುಗಳಿಗೆ ಹಬ್ಬವನ್ನುಂಟುಮಾಡಿದಿ!.... ಮಣ್ಣ ಮೈಲಾರದಲ್ಲಿ, ಮೈಲಾರೇಶನೆಂಬ! ನಾಮದಿಂದ ಕಂಗೊಳಿಸಿದಿ!... ಪರಮಾತ್ಮಾ! ನಿನ್ನ ಘನವಾದ ಮಹಿಮೆಯನ್ನು ನಾವು ಎಷ್ಟೆಂದು ಕೊಂಡಾಡೋಣ? ನಿನ್ನ ಪುಣ್ಯದಿಂದ ನಾವು ಸಕಲ ಸೌಖ್ಯವನ್ನೂ ಕಂಡು ಕೊಂಡವರಾಗಿದ್ದೇವೆ. ಇದೆಲ್ಲಾ ಪ್ರಸಾದವೆಂದು ನಾವು ಭಾವಿಸುತ್ತೇವೆ.

ತುಷ್ಟನಾಗುತ ನೆಲಿಸಿ ಗುಡ್ಡದಿ। ಆಷ್ಟದಿಕ್ಕಿಗು ಕೀರ್ತಿ ಹರಡಿದಿ।
ಇಷ್ಟು ಮಾಡಿಯು ಮತ್ತೆ ವರ ಬೇಡೆಂದು ಪೇಳುತಿಹೆ ॥
ಎಷ್ಟು ಪ್ರೀತಿಯೊ ನಿನ್ನ ಭಕ್ತರೊ । ಳೆಷ್ಟು ಅಭಿಮಾನವಿದೆ ನಿನ್ನಲಿ ।
ಕಷ್ಟ - ಸುಖಗಳದೆಲ್ಲ ಭಕುತರ ನಿನ್ನವೆನುತಿರುವಿ ।೬॥

ಭಾವಾರ್ಥ:- ನೀನು ಭಕ್ತರ ಅಪೇಕ್ಷೆಯಂತೆ ಸಂತುಷ್ಟನಾಗಿ ಮಣಿಚೂಲ ಪರ್ವತದಲ್ಲಿ ನೆಲೆಗೊಂಡು, ಎಲ್ಲ ದಿಕ್ಕುಗಳಲ್ಲಿಯೂ ನಿನ್ನ ಕೀರ್ತಿಯನ್ನು ಪ್ರಸಾರ ಮಾಡಿದಿ. ಇಷ್ಟೆಲ್ಲಾ ಸುಖ-ಸೌಖ್ಯಗಳನ್ನು ನಮಗೆ ನೀಡಿರುವದಲ್ಲದೇ, ಮತ್ತೆ ನಮಗೆ ವರ ಬೇಡಿಕೊಳ್ಳಿರೆಂದು ಹೇಳುತ್ತಿರುವಿ!... ಪರಮಾತ್ಮ! ನಿನಗೆ ಭಕ್ತರ ಬಗ್ಗೆ ಎಷ್ಟೊಂದು ಕಳಕಳಿಯಿದೆ ಎಂದರೆ, ಅವರ ಸುಖ-ದುಃಖಗಳೆಲ್ಲ ನಿನಗೇ ಬಂದರಂತೆ ಭಾವಿಸುತ್ತಿರುವಿ!.. (ಅಷ್ಟೊಂದು ಭಕ್ತಾಭಿಮಾನಿಯಾಗಿರುವಿ)

ಕೊಡುವಿಯಾದರೆ ನೀಡು ವರವನು। ಬಿಡದೆ ನಿನ್ನರ್ಚಿಸುವ ಸುಜನರಿ ।
ಗೆಡರು ಬಡತನ ಬಾರದಂತಿರಲೆಂಬ ಹರಕೆಯನು ॥
ಮಡದಿ ಮಕ್ಕಳು ಸುಖದಿ ಬಾಳಲಿ । ಗಡ ಚಲಿಸದಾ ಲಕ್ಷ್ಮಿ ನೆಲಿಸಲಿ ।
ಬಿಡದೆ ಧರ್ಮಾಚರಣೆ ನಡೆಯಲಿ ಅವರ ಸುತರಿಂದ ॥೭॥

ಧನಕೆ ಧಾನ್ಯಕೆ ಕೊರತೆಯಿಡದಿರು। ಮನೆಯು ತುಂಬಿರಲವರ ಹೈನದ।
ದನವು ಕಾಳ್ಕಡಿ ಕಣಜ ತುಂಬಿರಲವರ ಆಲಯದಿ ॥
ಮನವ ಮೋದಿಪ ಕಂದರುದಿಸಲಿ। ಜನನಿ ಜನಕರ ಕೀರ್ತಿ ಹರಡಲಿ।
ಮನುಜ ಜನ್ಮದ ಧೇಯ ಹೊಂದಲಿ ನಿನ್ನ ದಯೆಯಿಂದ ॥೮॥

ಎನುತ ಮುನಿಗಳು ಮನವಿ ಸಲ್ಲಿಸೆ। ಚಿನುಮಯಾತ್ಮಕ ಮಣ್ಣ ಮುಖದಲಿ।
ಮುನಿಗಳೇ ನಿಮ್ಮೆಲ್ಲ ಬೇಡಿಕೆ ಪೂರ್ಣಗೊಳ್ಳುವವು॥
ಘನತರದ ಪೂಜೆಗಳು ಗುಡ್ಡದಿ। ದಿನವು ಸಾಗುತ್ತಿರಲಿ ವೈಭವ ।
ಕನುಸರಿಸಿ ಸಾಗಿಸಿರಿ ಮಹನವಮಿಯಲಿ ಯಾತ್ರೆಯನು ॥೯॥

**ಮಣ್ಣ ಮೈಲಾರದಲಿ ಭಾರತ। ಹುಣ್ಣಿವೆಗೆ ಆಚರಿಸಿ ಯಾತ್ರೆಯ।**
**ಹುಣ್ಣಿವೆಯು ಕಳೆದೆರಡು ದಿನಕಾನುಲಿವೆ ಕಾರ್ಣಿಕವ॥**
**ದಿಣ್ಣೆಯೊಳು ದಸರೆಯಲಿ ಕಾರ್ಣಿಕ। ಬಣ್ಣಿಸುತ ಪೇಳುವೆನು ಗೊರವನ।**
**ಸಣ್ಣದೇಹದಿ ನುಸುಳಿ ನುಡಿಸುವೆ ನಂಬಿ ನೀವೆಲ್ಲ ॥೧೦॥**

ಶಬ್ದಾರ್ಥ :- ಆರ್ಚಿಸುವ = ಪೂಜಿಸುವ; ಎಡರು = ತೊಂದರೆ; ಸುಜನರಿಗೆ = ಸಜ್ಜನರಿಗೆ;
ಗಡಚಲಿಸದಾ ಲಕ್ಷ್ಮೀನೆಲಿಸಲಿ = ಶ್ರೀಮಂತಿಕೆಯು ಶಾಸ್ವತವಾಗಿರಲಿ; ಸುತರಿಂದ = ಮಕ್ಕಳಿಂದ; ಕಣಜ = ರಂಜಣಿಗೆ (ಹಗೆ);
ಆಲಯದಿ = ಮನೆಯಲ್ಲಿ; ಮೋದಿಪ = ಸಂತೋಷಪಡಿಸುವ; ಮನುಜ ಧರ್ಮದ ಧೇಯ = ಜೀವನ್ಮುಕ್ತಿ; ಮನವಿ = ವಿನಂತಿ ಪತ್ರ; ಚಿನುಮಯಾತ್ಮಕ = ಪರಶಿವ;
ಮಣ್ಣಮುಖದಲಿ = ಮಣ್ಣಿನಿಂದ ರಚಿತವಾದ ಮುಖದಿಂದ; ಕಾರ್ಣಿಕ = ಮೈಲಾರದೇವನ ಸೇವೆಯಲ್ಲಿ ಗೊರವನು ಶಿವ ಪ್ರೇರಣೆಯಿಂದುಲಿವ ಅಮೃತವಾಣಿ
ಯಾತ್ರೆ = ಜಾತ್ರೆ; ದಿಣ್ಣ = ಗುಡ್ಡ; ನುಸುಳಿ = ಒಳಹೊಕ್ಕು; ನುಡಿಸುವೆ = ಮಾತಾಡಿಸುವೆ.

ಭಾವಾರ್ಥ :- ಪರಮಾತ್ಮಾ! ಇಷ್ಟೆಲ್ಲಾ ಸವಲತ್ತುಗಳನ್ನು ನಮಗೆ ಪೂರೈಸಿ ಕೊಟ್ಟು, ನಂತರವೂ ನೀನು ವರ ನೀಡುವದೇ ನಿಜವಾದರೆ, ನಾವದಕ್ಕೆ ಬೇಡೆನ್ನಲಾರವು. ನಾವು ನಿನ್ನಲ್ಲಿ ಬೇಡಿಕೊಳ್ಳುವದಿಷ್ಟೇ! ಸಾದಾಕಾಲ ನಿನ್ನನ್ನೇ ನಂಬಿಕೊಂಡಿದ್ದ ನಿನ್ನ ಆರಾಧಕರಾದ ಸಜ್ಜನರಿಗೆ ಯಾವ ಕಾಲಕ್ಕೂ ತೊಂದರೆ ತಾಪತ್ರಯಗಳು ಬಾರದಂತಿರಲಿ!.... ಅಂಥ ಸದ್ಭಕ್ತರ ಮಕ್ಕಳು ಮರಿಗಳು, ಸುಖವಾಗಿ ಬಾಳಿಕೊಂಡಿರುವದಕ್ಕೆ ಅನುಕೂಲತೆಯನ್ನು ಒದಗಿಸಿಕೊಡು! ಅವರ ಮನೆಗಳಲ್ಲಿ ಲಕ್ಷ್ಮಿಯು ಶಾಸ್ವತವಾಗಿ ನೆಲಿಸಿಕೊಂಡಿರಲಿ! ಧನ, ಧಾನ್ಯಗಳಿಂದ ಅವರ ಮನೆಗಳಲ್ಲಿಯ ಕಣಜಗಳು ತುಂಬಿಕೊಂಡಿರಲಿ!.. ಅವರ ಮನೆಯಲ್ಲಿ ಹೈನವೀಯುವ ದನಗಳು ಹೆಚ್ಚಾಗಿ, ಹಾಲಿನ ಹೊಳೆ ಹರಿಯಲಿ!.. ಮನಸ್ಸಿಗೆ ಸಂತೋಷವನ್ನು ಕೊಡತಕ್ಕಂಥ ಮುದ್ದು ಮಕ್ಕಳು ಅವರಿಗೆ ಜನಿಸಲಿ!.. ಧರ್ಮವಂತರಾದ ಅವರಿಂದ ತಂದೆ ತಾಯಿಗಳ ಕೀರ್ತಿಯು ಬೆಳಗುವಂತಾಗಲಿ. ಮಾನವ ಜನ್ಮದ ಮುಖ್ಯ ಧೇಯಗಳಾದ ಧರ್ಮ, ಅರ್ಥ, ಕಾಮಮೋಕ್ಷಗಳನ್ನು ಶುಲಭದಲ್ಲಿ ಪಡೆದು, ಉದ್ಧಾರವಾಗುವಂತೆ, ನೀನವರಿಗೆ ಅನುಗ್ರಹಮಾಡು ! ''...

ಎಂದು ಮುನಿಗಳು ಮಾರ್ತಾಂಡ ಭೈರವನಲ್ಲಿ ಪ್ರಾರ್ಥಿಸಿಕೊಂಡರು ಆದಕ್ಕೆ ಚಿನ್ಮಯಾತ್ಮಕನಾದ ಮಾರ್ತಾಂಡ ಭೈರವನು, ತನ್ನ ಮೂರ್ತಿಯ ಮುಖದಿಂದಲೇ, ''ಮುನಿಗಳೇ! ನಿಮ್ಮ ಯಾವತ್ತೂ ಇಷ್ಟಾರ್ಥಗಳು ನನ್ನಾಜ್ಞೆಯಿಂದ ಪೂರ್ಣಗೊಳ್ಳಲಿ!''.. ಎಂಬುದಾಗಿ ನುಡಿದು, ಮತ್ತೇನನ್ನು ಆಜ್ಞೆಮಾಡ್ತಾ ಇದ್ದಾನೆಂದರೆ- ವಿಪ್ರೋತ್ತಮರೇ.. ನಾನು ಲಿಂಗರೂಪದಲ್ಲಿ ಪ್ರಕಟಗೊಂಡ ಮಣಿಚೂಲಗಿರಿಯಲ್ಲಿ ಪ್ರತಿದಿನವೂ ನನ್ನ ಪೂಜೆ ಅಭಿಷೇಕಗಳು ಅವ್ಯಾಹತವಾಗಿ ನಡೆಯುತ್ತಿರಲಿ!.. ಮತ್ತೂ ಮಹಾನವಮಿಯ ಕಾಲಕ್ಕೆ ಗುಡ್ಡದಲ್ಲಿ ನನ್ನ ಯಾತ್ರೆ ನಡಿಸಲ್ಪಡಲಿ!.. ಮಣ್ಣ ಮೈಲಾರದಲ್ಲಿ ಭಾರತ ಹುಣ್ಣಿವೆಗೆ ಜಾತ್ರೆ ನಡಿಸಲ್ಪಡಲಿ!.. ಭಾರತ ಹುಣ್ಣಿಮೆಯು ಕಳೆದ ಎರಡು ದಿನಕ್ಕೆ ನಾನು ಅಲ್ಲಿ ಕಾರ್ಣಿಕ ನುಡಿಸುತ್ತೇನೆ. ಗುಡ್ಡದಲ್ಲಿ ದಸರೆಯ ವೇಳೆಗೆ ಕಾರ್ಣಿಕ ನುಡಿಸುತ್ತೇನೆ. ನನ್ನ ಸೇವೆಯಲ್ಲಿರುವ ಒಬ್ಬ ಗೊರವನ ದೇಹದಲ್ಲಿ ನಾನು ಒಳಹೊಕ್ಕು, ಈ ವಾಣಿ ನುಡಿಸುತ್ತೇನೆ. ನೀವುಗಳೆಲ್ಲ '' ಇದು ಸತ್ಯವೆಂದು'' ನಂಬಿರಿ!..

**ಆವನೀ ಚರಿತೆಯನು ಓದುವ। ನಾವನೀ ಚರಿತೆಯನು ಕೇಳುವ।**
**ನಾವ ಬರೆದೋದುವವನು ನಿತ್ಯದಿ ಪಠಣ ಮಾಡುವನಾ ॥**
**ಕಾವೆನಾತನ ಯೋಗ ಕ್ಷೇಮವು। ಭಾವಿಸುವೆ ನಂದೆಂದು ಅರಿಯುತ।**
**ಈವೆನಾತಗೆ ಸುಖದ ಪದವಿಯ ಅಂತ್ಯಕಾಲದೊಳು ॥೧೧॥**

**ಓದು ಬರಹವನರಿಯದಿರ್ದರು। ಮೋದದಿಂ ಪೂಜಿಸಿರಿ ಫಲವಿದೆ।**
**ಭೇದವಿಲ್ಲವು ನಾನೆ ಈ ಸದ್ಗ್ರಂಥವಾಗಿಹೆನು ॥**
**ಆದರದಿ ಮಡಿ ಬಟ್ಟೆ ಸುತ್ತುತ। ಮೋದದಿಂ ಭಂಡಾರ ಸುಮ ನೈ ।**
**ವೇದಿಸುವರನು ಕಾವೆ ನಾನತ್ಯಂತ ಪ್ರೀತಿಯಲಿ ॥೧೨॥**

**ನನ್ನನಾರಾಧಿಸುವ ಭಕುತರೆ । ನನ್ನ ಪ್ರಾಣವು ನನ್ನ ಮಾನವು।**
**ಚೆನ್ನ ಗಣಪತಿ ಗೌರಿ ಸ್ಕಂದರಿಗಿಂತ ಮಿಗಿಲೆಂಬೆ॥**
**ನನ್ನ ಚರಿತೆಯನೋದುವಾತನೆ ।ನನ್ನ ರೂಪನು ಎಂದು ಅರಿವುದು।**
**ಭಿನ್ನತೆಯ ತೋರದಲೆ ಅರ್ಚಿಸಿ ಅವನನನವರತ ॥೧೩॥**

ಶಬ್ದಾರ್ಥ :- ಪಠಣಮಾಡು = ಓದು; ಯೋಗಕ್ಷೇಮ = ಹಿತಾಹಿತ; ಈಯು = ಕೊಡು; ನೈವೇದಿಸು = ಅರ್ಪಿಸು; ಕಾವೆ= ಕಾಯುವೆ; ಸ್ಕಂದ = ಕುಮಾರಸ್ವಾಮಿ; ಅರ್ಪಿಸಿ = ಪೂಜಿಸಿ; ಅನವರತ = ಯಾವಾಗಲೂ; ಭಿನ್ನತೆ = ಭೇದಭಾವ.

ಭಾವಾರ್ಥ:- ಯಾರು ಈ ಚರಿತ್ರೆಯನ್ನು ಭಕ್ತಿಭಾವದಿಂದ ಓದುತ್ತಾರೋ; ಯಾರು ಈ ಚರಿತ್ರೆಯನ್ನು ಬರೆಯುತ್ತಾರೋ; ಯಾರು ನಿತ್ಯದಲ್ಲಿ ಈ ಸದ್ಗ್ರಂಥವನ್ನು ಪಾರಾಯಣ ಮಾಡುತ್ತಾರೋ, ಯಾರು ಭಕ್ತಿಯಿಂದ ಈ ನನ್ನ ಚರಿತ್ರೆಯನ್ನು ಕೇಳುತ್ತಾರೋ, ಅಂಥವರ ಯೋಗಕ್ಷೇಮವನ್ನು ನೋಡಿಕೊಳ್ಳುವದಕ್ಕೆ ನಾನು ಸದಾ ಸಿದ್ಧನಾಗಿರುತ್ತೇನೆ. ಆತನಿಗೆ ಬಂದ ಸುಖ - ದುಃಖಗಳು ನನಗೆ ಸ್ವಂತಕ್ಕೇ ಬಂದ ಸುಖದುಃಖಗಳೆಂದು ನಾನು ತಿಳಿಯುತ್ತೇನೆ. ಅಂಥ ನನ್ನ ಸದ್ಭಕ್ತನನ್ನು ಜೀವನದ ಕೊನೆಯವರೆಗೂ ಕಾಪಾಡಿ, ಅಂತ್ಯ ಕಾಲದಲ್ಲಿ ಆತನಿಗೆ ಸದ್ಗತಿ ಕೊಟ್ಟುರಕ್ಷಿಸುತ್ತೇನೆ.

ಒಂದು ವೇಳೆ ಈ ಗ್ರಂಥವನ್ನು ಓದುವದಕ್ಕಾಗಲೀ, ಬರೆಯುವದಕ್ಕಾಗಿಲೀ, ಅಸಾಧ್ಯವಿದ್ದ ಪಕ್ಷದಲ್ಲಿ, ಈ ಗ್ರಂಥವನ್ನು ದೇವರ ಮಾಡದಲ್ಲಿಟ್ಟು ಪೂಜಿಸಿದರೂ ಸಹಿತ ಅದಕ್ಕೆ ಒಳ್ಳೇ ಫಲವಿದೆ. ಈ ಗ್ರಂಥವನ್ನು ಭಕ್ತಿಯಿಂದ ರೇಸಿಮೆಯ ಮಡಿ ಬಟ್ಟೆಯಲ್ಲಿ ಕಟ್ಟಿ, ದಿನಾಲೂ ಮಡಿಹುಡಿಯಿಂದ ಈ ಗ್ರಂಥಕ್ಕೆ ಭಂಡಾರ ಹೂವುಗಳನ್ನೇರಿಸಿ ಪೂಜೆ ಮಾಡಿದರೂ, ನಾನದನ್ನು ಸಂತೋಷದಿಂದ ಸ್ವೀಕರಿಸುತ್ತೇನೆ. ನನ್ನ ಭಕ್ತರೇ ನನ್ನ ಪ್ರಾಣ, ಮಾನಗಳೆಂದು ನಾನು ಭಾವಿಸುತ್ತೇನೆ. ನನ್ನ ಮುದ್ದು ಮಕ್ಕಳಾದ ಗಣಪ ಷಣ್ಮುಖ, ಇಷ್ಟೇಯೇಕೆ ಸ್ವತಃ ನನ್ನ ಕೈಹಿಡಿದ ಗೌರಿಗಿಂತಲೂ ಹೆಚ್ಚಾಗಿ, ನಾನು ನನ್ನ ಆರಾಧಕರನ್ನು ಪ್ರೀತಿಸುತ್ತೇನೆ. ಯಾರು ನನ್ನ ಈ ಪವಿತ್ರ ಚರಿತ್ರೆಯನ್ನು ಪಾರಾಯಣ ಮಾಡುವರೋ, ಅವರು ಸ್ವತಃ ನನ್ನ ಸ್ವರೂಪರೆಂದೇ ಭಾವಿಸತಕ್ಕದ್ದು!..... ಭಕ್ತರು ಅವರನ್ನು ಪೂಜಿಸಿದರೆ, ಆ ಪೂಜೆಯು ನನನಗೇ ಸಂದಾಯವಾಗುತ್ತದೆ. ಅವರಿಗಿತ್ತ ಗೌರವವು ನನಗೇ ತಲುಪುತ್ತದೆ.

ಮಡಿಯ ಗೊಂಡೋವದು ಗ್ರಂಥವ । ಮಡಿಯಲಿಲ್ಲದೆ ಓದ ಕೂಡದು ।
ಮಡಿಯಗೊಂಡ್ವದಿನಾರು ಅಂಗದಿ ಮೊದಲು ಪೂಜಿಪುದು ॥
ಕಡೆಯ ಅಧ್ಯಾಯವವದು ಮುಗಿದೊಡೆ । ಬಿಡದೆ ಭಂಡಾರದಲಿ ಪೂಜಿಸಿ ।
ಸಡಗರದಲೆತ್ತುವದು ಆರತಿ ನನ್ನ ಪೆಸರಿಂದ ॥೧೪॥

ಆತನಾ ಮನೆಯಲ್ಲಿ ಭೂತದ । ಪ್ರೇತ ಪೈಸಾಚಿಗಳ ಕಾಟವು ।
ವಾತ ವೃಶ್ಚಿಕ ಜಾತ ಬಾಧೆಗಳಿರವು ಪೂಜಿಪನ ॥
ಖ್ಯಾತ ಲಕ್ಷ್ಮಿ ನಿವಾಸ ವಪ್ಪುದು। ಆತನಾ ಮನೆ ಕಾಲ ಕಾಲದಿ ।
ಖ್ಯಾತಿಗೊಂಬುದು ನನ್ನ ಆಜ್ಞೆಯೊಳೆಲ್ಲ ನಡೆಯುವದು ॥೧೫॥

ಎಂದು ಹರಸುತ ಸಕಲ ಮುನಿಗಳ। ಚಂದ್ರಶೇಖರನಡರಿ ನಂದಿಯ ।
ಹೊಂದಿ ಸತಿಸುತರೊಡನೆ ಹೊರಟನು ಹೈಮ ಗಿರಿಯತ್ತ ॥
ಎಂದು ಮುನಿಪ ಸನತ್ಕು ಮಾರಕ। ನಂದಗೊಳಿಸುತ ಸಕಲ ಮುನಿಗಳ ।
ಚೆಂದದಿಂ ಸಾಗಿದನು ತನ್ನಯ ಪರ್ಣಕುಟಿರಕ್ಕೆ ॥೧೬॥

ಕೇಳಿ ಪುಲಕಿತಗೊಂಡ ಮುನಿಗಣ । ತಾಳಿ ಹರುಷವ ಶಿವ ಸ್ವರೂಪಗೆ ।
ಏಳು ಕೋಟಿಗಳೊಡೆಯ ಗುಡದಯ್ಯನಿಗೆ ಉಘೆ ಎನುತ ॥
ಮೇಲು ಧ್ವನಿಯಿಂದೊರೆದು ಜಯ ಜಯ । ಫಾಲನೇತ್ರ ನಿನ್ನ ಮಹಿಮೆಯ ।
ಕೇಳಿ ಧನ್ಯತೆ ಪಡೆದೆವೆನುತಾಶ್ರಮಕೆ ಸಾಗಿದರು ॥ ೧೭ ॥

ಶಬ್ದಾರ್ಥ :- ಮಡಿಗೊಂಡು = ಸ್ನಾನಮಾಡಿ; ಹದಿನಾರು ಅಂಗದಿ = ಷೋಢಶೋಪಚಾರಗಳಿಂದ; ಪೆಸರಿಂದ = ಹೆಸರಿನಿಂದ;
ವಾತ = ಗಾಳಿ; ವೃಶ್ಚಿಕ = ಚೇಳು; ಅಡರಿ = ಹತ್ತಿ; ಹೈಮಗಿರಿ = ಹಿಮಾಲಯ ಪರ್ವತ; ನಂದ = ಆನಂದ;
ಪರ್ಣಕುಟಿ = ಆಶ್ರಮ; ಫಾಲನೇತ್ರ = ಅಗ್ನಿನೇತ್ರ (ಶಿವ).

ಭಾವಾರ್ಥ :- "ಈ ಪವಿತ್ರ ಗ್ರಂಥವನ್ನು ಸ್ನಾನ ಮಾಡಿಯೇ ಓದಬೇಕು. ಇದನ್ನು ಮೈಲಿಗೆಯಿಂದ ಮುಟ್ಟಬಾರದು! ಸ್ನಾನ ಮಾಡಿ ಮಡಿ ಬಟ್ಟೆ ಧರಿಸಿ, ಆಚಮ್ಯ, ಪ್ರಾಣಾಯಾಮ, ಸಂಕಲ್ಪಾದಿಗಳನ್ನು ಮುಗಿಸಿ, ಮೊದಲು ಷೋಢಶೋಪಚಾರಗಳಿಂದ ಈ ಗ್ರಂಥಕ್ಕೆ ಪೂಜೆ ಸಲ್ಲಿಸತಕ್ಕದ್ದು. ಹಾಗೂ ಕಡೆಯ ಅಧ್ಯಾಯ ಮುಗಿಸುವಾಗ ಮತ್ತೊಮ್ಮೆ ಭಂಡಾರವನ್ನೇರಿಸಿ ಪೂಜೆ ಮಾಡಿ ನನ್ನ ಹೆಸರಿನಿಂದ (ಮಾಲತೀಶನ ಹೆಸರಿನಿಂದ) ಆರತಿ ಎತ್ತತಕ್ಕದ್ದು.

ಹೀಗೆ ಮಾಡುವವನ ಮನೆಯಲ್ಲಿ ಗಾಳಿ, ಭೂತ, ಪ್ರೇತ, ಪಿಸಾಚಿಗಳ ಭಾಧೆಯು ಇಲ್ಲದಂತಾಗುವದು. ಹಾವು ಚೇಳುಗಳಂಥ ವಿಷ ಕ್ರಿಮಿಗಳು ಆ ಮನೆಗೆ ಬರಲಾರವು, ಅಲ್ಲದೆ ಆ ಮನೆಯು ಪ್ರತ್ಯಕ್ಷ ಲಕ್ಷ್ಮೀ ನಿವಾಸವಾಗಿ ಕಂಗೊಳಿಸತೊಡಗುವದು. ಕಾಲಾನು ಕಾಲದಲ್ಲಿ ಆ ಮನೆಯು ಸರ್ವರೀತಿಯಿಂದಲೂ-ಪ್ರಖ್ಯಾತಿ ಪಡೆಯುವದಕ್ಕೆ ಸಾಧ್ಯವಾಗುವದು. ಇವೆಲ್ಲಾ ನನ್ನ ಆಜ್ಞೆಯ ಮೇರೆಗೆ ತಮ್ಮಿಂದ ತಾವೇ ನೆರವೇರುತ್ತ ಸಾಗುವವು." ಎಂದು ಅಲ್ಲಿ ನೆರೆದಿದ್ದ ಮುನಿ ಸಮೂಹಕ್ಕೆ ಅಭಯ ಹಸ್ತ ತೋರಿ. ಆಶೀರ್ವದಿಸುತ್ತ, ಶಿವನು ತನ್ನ ಪರಿವಾರದೊಂದಿಗೆ ನಂದಿಯನ್ನೇರಿ ಹಿಮಗಿರಿಯುತ್ತ ಸಾಗಿದನು.

ಈ ಪ್ರಕಾರವಾಗಿ ಶ್ರೀ ಮ್ಹಾಲಸಾ ಮಾರ್ತಾಂಡ ಭೈರವ ಚರಿತ್ರೆಯನ್ನು ಸಕಲ ಮುನಿಗಳಿಗೆ ಶ್ರವಣ ಮಾಡಿಸಿ ಸಂತೋಷಗೊಳಿಸಿದ ಮುನಿ ಪುಂಗವನಾದ ಸನತ್ಕುಮಾರನು, ಸಕಲ ಮುನಿಗಳ ಅನುಜ್ಞೆ ಪಡೆದು ತನ್ನ ಪರ್ಣಕುಟಿರಕ್ಕೆ ತೆರಳಿದನು.

ಸನತ್ಕುಮಾರ ಮಹಾಮುನಿಯಿಂದ ಮಾರ್ತಾಂಡ ಭೈರವ ಚರಿತ್ರೆ ಕೇಳಿದ ಸಕಲ ಮುನಿಗಳೂ. ಭಕ್ತಿ ಭಾವದಿಂದ ಪರಮಾನಂದ ಹೊಂದಿದವರಾಗಿ, ಶಿವ ಸ್ವರೂಪಿಯಾದಂಥ ಆ ಏಳು ಕೋಟಿಗಳೊಡೆಯ ಗುಡದಯ್ಯನಿಗೆ, ''ಉಘೇ! ಉಘೇ!'' ಎಂದು ತಾರ ಸ್ವರದಲ್ಲಿ ಜಯ ಜಯಕಾರ ಮಾಡಿದರು. ''ಧನ್ಯರಾದೆವು!'' ಎಂದು ಹೊಗಳುತ್ತ ತಮ್ಮ ತಮ್ಮ ಆಶ್ರಮಗಳಿಗೆ ಹೊರಟು ಹೋದರು.

ಮಂಗಳಂ ಮೈಲಾರದೇವಗೆ । ಮಂಗಳಂ ಮಾಲಸೆಗೆ ಜಯ ಜಯ ।
ಮಂಗಳಂ ಹೆಗ್ಗಯ್ಯ ತುಪ್ಪದ ಮಾರಿ ದೇವತೆಗೆ ॥
ಮಂಗಳಂ ಚಿಕ್ಕಯ್ಯನಿಗೆ ಜಯ । ಮಂಗಳಂ ದೊಡ್ಡಯ್ಯ ದೇವಗೆ ।
ಮಂಗಳಂ ಜಯ ಏಳು ಕೋಟೀ ದೇವ ಗಣಗಳಿಗೆ ॥೧೮॥

ಮಂಗಳಂ ಜಯ ಭಾರತಾಂಬೆಗೆ । ಮಂಗಳಂ ಕರ್ನಾಟಕಾಂಬೆಗೆ ।
ಮಂಗಳಂ ಕನ್ನಡದಲೀ ಕಥೆ ಹೇಳ್ವ ಕೇಳ್ವರಿಗೆ ॥
ಮಂಗಳವು ಕನ್ನಡದ ಭೂಮಿಗೆ । ಮಂಗಳವು ಕನ್ನಡದ ಸೀಮೆಗೆ ।
ಮಂಗಳವು ಕರುನಾಡೊಳುದಿಸಿದ ಗುರು ಚಿದಂಬರಗೆ ॥೧೯॥

ಶಬ್ದಾರ್ಥ :- ಉಘೆ = ಜಯ ಜಯಕಾರ; ಮೇಲುಧ್ವನಿ = ಎತ್ತರದ ಸ್ವರ; ಫಾಲನೇತ್ರ = ಅಗ್ನಿನೇತ್ರ(ಶಿವ); ಹೆಗ್ಗಯ್ಯ = ವಿಷ್ಣು ರೂಪ ; ತುಪ್ಪದಮಾರಿ = ಘೃತಮಾರಿ; ಚಿಕ್ಕಯ್ಯ = ಷಣ್ಮುಖ; ದೊಡ್ಡಯ್ಯದೇವ = ಗಣಪತಿ; ಕರುನಾಡೊಳುದಿಸಿದ = ಕನ್ನಡ ನಾಡಿನಲ್ಲಿ ಅವತಾರ ತಾಳಿದ.

ಭಾವಾರ್ಥ :- ಮೈಲಾರ ದೇವನಿಗೆ ಮಂಗಲವಾಗಲಿ! ಮಾಲಸೆಗೆ ಜಯವಾಗಲಿ!... ವಿಷ್ಣು ರೂಪಿಯಾದ ಹೆಗ್ಗಯ್ಯನಿಗೆ ಮಂಗಲವಾಗಲಿ!.. ತುಪ್ಪದ ಮಾಳವ್ವನಿಗೆ ಮಂಗಲವಾಗಲಿ!... ಷಣ್ಮುಖ ರೂಪಿಯಾದ ಚಿಕ್ಕಯ್ಯನಿಗೂ, ಗಣಪತಿ ಸ್ವರೂಪಿಯಾದ ದೊಡ್ಡಯ್ಯನಿಗೂ ಮಂಗಲವಾಗಲಿ!.....ಏಳು ಕೋಟಿ ದೇವಗಣಗಳಿಗೆ ಮಂಗಲವಾಗಲಿ!!.... ಭಾರತಾಂಬೆಗೆ ಮಂಗಲವಾಗಲಿ! ಕರ್ನಾಟಕಾಂಬೆಗೆ ಮಂಗಲವಾಗಲಿ!!.... ಕನ್ನಡದಲ್ಲಿ ಈ ಪವಿತ್ರ ಚರಿತ್ರೆಯನ್ನು ಹೇಳುವವರಿಗೂ, ಕೇಳುವವರಿಗೂ ಮಂಗಲವಾಗಲಿ!!...ಕನ್ನಡ ನಾಡಿಗೆ ಮಂಗಲವಾಗಲಿ!... ಕನ್ನಡ ಸೀಮೆಗೆ ಮಂಗಲವಾಗಲಿ!!... ಕನ್ನಡ ನಾಡಿನಲ್ಲಿ ಭಕ್ತೋದ್ಧಾರಕ್ಕಾಗಿ ಅವತಾರ ತಾಳಿದ ಸದ್ಗುರು ಚಿದಂಬರ ಸ್ವಾಮಿಗೆ ಮಂಗಲವಾಗಲಿ!!.....

ಇತಿ ಸಾಹಿತ್ಯ ರತ್ನಾಕರ ಶ್ರೀ ನಿಂಗಭಟ್. ಜೋಶಿ ವಿರಚಿತ ಮ್ಹಾಲಸಾ ಮಾರ್ತಾಂಡ ಭೈರವ ಪುರಾಣದೋಳ್, 'ಮೈಲಾರ ದೇವ ಪ್ರಸಾದ ವಾಕ್ಯ'' ನಾಮಕ ಪಂಚವಿಂಶೋಧ್ಯಾಯಃ ॥

ಅಂತು ಅಧ್ಯಾಯ ೨೫ ಕ್ಕಂ, ಪದ ೧೯ ಕ್ಕಂ, ಒಟ್ಟು ಪದ ೪೮೯ ಕ್ಕಂ, ಸಂಪೂರ್ಣ ಮಂಗಲ ಮಸ್ತು !.......

ಏಳುಕೋಟಿ! ಏಳುಕೋಟಿಗ! ಏಳುಕೋಟಿಗೋ!! ಸಾಂಗಬಲೋ !...

**ಶ್ರೀ ಮ್ಹಾಲಸಾ ಮಾರ್ತಾಂಡ ಭೈರವಾರ್ಪಣ ಮಸ್ತು!....**

ಲೇಖಕ : ನಿಂಗಭಟ್. ಜೋಶಿ.

## ॥ ಶ್ರೀ ಮೈಲಾರಲಿಂಗೇಶ್ವರ ಅಷ್ಟೋತ್ತರನಾಮ ಭಂಡಾರರ್ಚನಾ ॥

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈ ನಮಃ ॥ ಶ್ರೀ ಗುರುಭ್ಯೋ ನಮಃ ॥
ಶ್ರೀ ಮಾಲತೀಶ್ವರಾಯ ನಮಃ ॥ ಶ್ರೀ ಏಳುಕೋಟಿ ಮೈಲಾರಲಿಂಗೇಶ್ವರಾಯ ನಮಃ

೧. ಓಂ ಪ್ರಣವಾಯ ನಮಃ ॥
೨. ಓಂ ಬ್ರಹ್ಮಣೇ ನಮಃ ॥
೩. ಓಂ ಉದ್ಗೀತಾಯ ನಮಃ ॥
೪. ಓಂ ಓಂಕಾರಾರ್ಥಾಯ ನಮಃ ॥
೫. ಓಂ ಮಹೇಶ್ವರಾಯ ನಮಃ ॥
೬. ಓಂ ಮಣಿಮಲ್ಲ ಮಹಾದೈತ್ಯಸಂಹರ್ತ್ರೇ ನಮಃ ॥
೭. ಓಂ ಭುವನೇಶ್ವರಾಯ ನಮಃ ॥
೮. ಓಂ ದೇವಧಿದೇವಾಯ ನಮಃ ॥
೯. ಓಂ ಓಂಕಾರಾಯನಮಃ ॥
೧೦. ಓಂ ಸಂತಪ್ತಾಮರತಾಪಘ್ನೇ ನಮಃ ॥
೧೧. ಓಂ ಗಣಕೋಟಿಯುತಾಯ ನಮಃ ॥
೧೨. ಓಂ ಕಾಂತಾಯ ನಮಃ ॥
೧೩. ಓಂ ಭಕ್ತ ಚಿಂತಾಮಣಯೇ ನಮಃ ॥
೧೪. ಓಂ ಪ್ರಭುವೇ ನಮಃ ॥
೧೫. ಓಂ ಪ್ರೀತಾತ್ಮನೇ ನಮಃ ॥
೧೬. ಓಂ ಪ್ರಿತಿತಾಯ ನಮಃ ॥
೧೭. ಓಂ ಪ್ರಾಣಾಯ ನಮಃ ॥
೧೮. ಓಂ ಊರ್ಜಿತಾಯ ನಮಃ ॥
೧೯. ಓಂ ಸತ್ಯ ಸೇವಕಾಯ ನಮಃ ॥
೨೦. ಓಂ ಮಾರ್ತಾಂಡ ಭೈರವಾಯ ನಮಃ ॥
೨೧. ಓಂ ದೇವಾಯ ನಮಃ ॥
೨೨. ಓಂ ಗಂಗಾಮ್ಹಾಕ್ಕಪ್ರೀಯಾಯ ನಮಃ ॥
೨೩. ಓಂ ಗುಣಗ್ರಾಮಾನ್ವಿತಾಯ ನಮಃ ॥
೨೪. ಓಂ ಶ್ರೀಮತೇ ನಮಃ ॥
೨೫. ಓಂ ಜಯವತೇ ನಮಃ ॥
೨೬. ಓಂ ಪ್ರಮತಾಗ್ರಣಿನೇ ನಮಃ ॥
೨೭. ಓಂ ದಿನನಾಥಪ್ರತೀಕಾಶಾಯ ನಮಃ ॥
೨೮. ಓಂ ಸ್ವಯಂಭುವೇ ನಮಃ ॥
೨೯. ಓಂ ಅಜರಾಮರಾಯ ನಮಃ ॥
೩೦. ಓಂ ಅಖಂಡಿತ ಪ್ರಿತಮನಸೇ ನಮಃ ॥
೩೧. ಓಂ ಮಲ್ಲಘ್ನೇ ನಮಃ ॥
೩೨. ಓಂ ಸತ್ಯಸಂಗರಾಯ ನಮಃ ॥
೩೩. ಓಂ ಆನಂದರೂಪಾಯ ನಮಃ ॥
೩೪. ಓಂ ಪರಮಾಯ ನಮಃ ॥
೩೫. ಓಂ ಪರಮಾಶ್ಚರ್ಯಕೃತೆ ನಮಃ ॥
೩೬. ಓಂ ಗುರುವೇ ನಮಃ ॥
೩೭. ಓಂ ಅಜೀತಾಯ ನಮಃ ॥
೩೮. ಓಂ ವಿಶ್ವಸಂಜೇತ್ರೇ ನಮಃ ॥
೩೯. ಓಂ ಸಮರಾಂಗಣ ದುರ್ಜಯಾಯ ನಮಃ ॥
೪೦. ಓಂ ಖಂಡಿತಾಖಿಲವಿಘ್ನೌಘಾಯ ನಮಃ ॥
೪೧. ಓಂ ಪರಮಾರ್ಥಾಯ ನಮಃ ॥
೪೨. ಓಂ ಪ್ರತಾಪವತೆ ನಮಃ ॥
೪೩. ಓಂ ಅಮೋಘವಿಧ್ಯಾಯ ನಮಃ ॥
೪೪. ಓಂ ಸರ್ವಜ್ಞಾಯ ನಮಃ ॥
೪೫. ಓಂ ಶರಣ್ಯಾಯ ನಮಃ ॥
೪೬. ಓಂ ಸರ್ವದೈವತಾಯ ನಮಃ ॥
೪೭. ಓಂ ಅನಂಗಜಯಿನೇ ನಮಃ ॥
೪೮. ಓಂ ಜ್ಯಾಯಸೇ ನಮಃ ॥
೪೯. ಓಂ ಜನತ್ರಾತ್ರೆ ನಮಃ ॥
೫೦. ಓಂ ಭಯಾಪಹಾಯ ನಮಃ ॥
೫೧. ಓಂ ಮಾಹಾಹಿವಲಯಾಯ ನಮಃ ॥
೫೨. ಓಂ ಧಾತ್ರೇ ನಮಃ ॥
೫೩. ಓಂ ಚಂದ್ರಮಾರ್ತಾಂಢ ಕುಂಡಲಾಯ ನಮಃ ॥
೫೪. ಓಂ ಹರಾಯ ನಮಃ ॥

೫೫. ಓಂ ಡಮರುಡಾಂಕಾರಿಣೇ ನಮಃ ॥
೫೬. ಓಂ ತ್ರೀಶೂಲಿನೇ ನಮಃ ॥
೫೭. ಓಂ ಖಡ್ಗ ಪಾತ್ರವತೇ ನಮಃ ॥
೫೮. ಓಂ ಮಣಿಯುದ್ಧ ಮಹಾಹೃಷ್ಟಾಯ ನಮಃ ॥
೫೯. ಓಂ ಮುಂಡಮಾಲಾವಿರಾಜಿತೇಯ ನಮಃ ॥
೬೦. ಓಂ ಖಂಡೇಂದು ಶೇಖರಾಯ ನಮಃ ॥
೬೧. ಓಂ ತ್ರ್ಯಕ್ಷಾಯ ನಮಃ ॥
೬೨. ಓಂ ಮಹಾಮುಕುಟ ಮಂಡಿತಾಯ ನಮಃ ॥
೬೩. ಓಂ ವಸಂತಕೀಲಿನೇ ನಮಃ ॥
೬೪. ಓಂ ದುರ್ಧರ್ಶಾಯ ನಮಃ ॥
೬೫. ಓಂ ಶೇಖಿಪಿಚ್ಛ ಶಿಖಾಮಣೀಯೇ ನಮಃ ॥
೬೬. ಓಂ ಗಂಗಾಮ್ಹಾಃಸಿಕಾಂಕಾಯ ನಮಃ ॥
೬೭. ಓಂ ಗಂಗಾಮ್ಹಾಲಸಿಕಾಪತೆಯೇ ನಮಃ ॥
೬೮. ಓಂ ತುರಂಗಮ ಸಮಾರಬ್ಧಾಯ ನಮಃ ॥
೬೯. ಓಂ ಲಿಂಗಧ್ವಯ ಕೃತಾಕೃತಯೇ ನಮಃ ॥
೭೦. ಓಂ ಪಿಶಾಚಾವಲಿಪಾಲಕಾಯ ನಮಃ ॥
೭೧. ಓಂ ಸೂರ್ಯಕೋಟಿ ಸಮಪ್ರಭಾಯ ನಮಃ ॥
೭೩. ಓಂ ಚಂದ್ರಕೋಟಿ ಸಮಪ್ರಭಾಯ ನಮಃ ॥
೭೪. ಓಂ ಅಷ್ಟಸಿದ್ಧಿ ಸಮಾಯುಕ್ತಾಯ ನಮಃ ॥
೭೫. ಓಂ ಸುರಶ್ರೇಷ್ಠಾಯ ನಮಃ ॥
೭೬. ಓಂ ಸುಖಾರ್ಣವಾಯ ನಮಃ ॥
೭೭. ಓಂ ಮಹಾಬಲಾಯ ನಮಃ ॥
೭೮. ಓಂ ದುರಾರಾಧ್ಯಾ ನಮಃ ॥
೭೯. ಓಂ ವರದಾಯ ನಮಃ ॥
೮೦. ಓಂ ವೀತರಾಗಾಯ ನಮಃ ॥
೮೧. ಓಂ ಕಲಿಪ್ರಮಥನಾಯ ನಮಃ ॥
೮೨. ಓಂ ಸ್ವರಾಜೇ ನಮಃ ॥
೮೩. ಓಂ ದುಷ್ಟಘ್ನೆ ನಮಃ ॥
೮೪. ಓಂ ದಾನವಾರತಾಯೇ ನಮಃ ॥
೮೫. ಓಂ ಉತ್ಕೃಷ್ಟ ಫಲದಾಯಕಾಯ ನಮಃ ॥
೮೬. ಓಂ ಭವಾಯ ನಮಃ ॥
೮೭. ಓಂ ಕೃಪಾಲವೇ ನಮಃ ॥
೮೮. ಓಂ ವಿಶ್ವಾತ್ಮನೇ ನಮಃ ॥
೮೯. ಓಂ ಧರ್ಮಪುತ್ರರ್ಷಿಭೀತಿಘ್ನೆ ನಮಃ ॥
೯೦. ಓಂ ರುದ್ರಾಯ ನಮಃ ॥
೯೧. ಓಂ ವಿಧಿಜ್ಞಾಯ ನಮಃ ॥
೯೨. ಓಂ ಶ್ರೀಕಂಠಾಯ ನಮಃ ॥
೯೩. ಓಂ ಪಂಚವಕ್ತ್ರಾಯ ನಮಃ ॥
೯೪. ಓಂ ಸುಖೈಕಭುವೇ ನಮಃ ॥
೯೫. ಓಂ ಪ್ರಜಾಪಾಲಾಯ ನಮಃ ॥
೯೬. ಓಂ ವಿಶೇಷಜ್ಞಾಯ ನಮಃ ॥
೯೭. ಓಂ ಚತುರ್ವಕ್ತ್ರಾಯ ನಮಃ ॥
೯೮. ಓಂ ಪರಜಾಪತಯೇ ನಮಃ ॥
೯೯. ಓಂ ಖಂಡರಾಜಾಯ ನಮಃ ॥
೧೦೦. ಓಂ ಕೃಪಾಸಿಧವೇ ನಮಃ ॥
೧೦೧. ಓಂ ಮಲ್ಲಸೈನ್ಯ ವಿನಾಶನಾಯ ನಮಃ ॥
೧೦೨. ಓಂ ಅಧ್ವೈತಾಯ ನಮಃ ॥
೧೦೩. [illegible]
೧೦೪. ಓಂ [illegible]
೧೦೫. ಓಂ ಪರಾರ್ಥೈಕ ಪ್ರಯೋಜನಾಯ ನಮಃ ॥
[illegible] ಜ್ಞಾನಸಿದ್ಧಾಯ ನಮಃ ॥
[illegible] ನಮಃ ॥
೧೦೮. ಓಂ ಮೈಲಾರಲಿಂಗೇಶ್ವರಾಯ ನಮಃ ॥

ಇತಿ ಅಷ್ಟೋತ್ತರ ಭಂಡಾರರ್ಚನಂ ಸಮರ್ಪಯಾಮಿ ॥

## ॥ ಆರುತಿ ಹಾಡು ॥

ಮೈಲಾರ ಪುರಪತಿ ಮಾರ್ತಾಂಡ ಭೈರವ । ಗಾರತಿ ಬೆಳಗೋಣ ॥
ಮಾಲಸೆಗಾರುತಿ ಬೆಳಗೋಣ ॥ ಪ॥

ಗಿರಿ ಮಣಿಚೂಲದಿ ಸಪ್ತ ರ್ಷಿಗಳು ।
ದುರಳರ ಬಾಧೆಗೆ ಸಿಲುಕಿರುತಿರಲು ।
ಕೆರಳುತ ಶಂಕರ ಜಡೆಯಪ್ಪಳಿಸೆ ।
ಮಾರಿಯು ಯದಿಸಿದಳು ।
ಶ್ರೀ ಘೃತ ಮಾರಿಯು ಉದಿಸಿದಳು ॥೧॥

ಮಣಿ ಮಲ್ಲಾಸುರ ಸೊಕ್ಕಡಗಿಸಲು ।
ಪಣ ತೊಡುತಲಿ ಶಿವ ಭೈರವನಾಗೀ ।
ಕಣೆ-ಧನು ಧರಿಸುತ ಢಮರುಗ ಭಾರಿಸಿ ।
ಗಣಗಳ ಕರೆಸಿದನು ।
ಮಾಲಸೆ ಗಿತ್ತ ಸಬಳವನ್ನು ॥೨॥

ಏಳು ಕೋಟಿ ಗಣ ಮುತ್ತಿತು ಭುವಿಗೆ ।
ಖೂಳ ದೈತ್ಯರಾ ಕೊಂದರು ಕಡೆಗೆ ।
ಏಳು ಮುನಿಗಳಾ ಆಶಯದಂತೆ ।
ಳೆಯೊಳು ತಾ ನಿಂದಾ ।
ಏಳ್ಕೋಟಿ । ನಾಮದಿಂದ ಮೆರೆದಾ ॥೩॥

卐 ಶುಭಂ 卐